# ಇಂಗ್ಲಿಷ್ ಕಲಿಕೆಗೆ ನವಕರ್ನಾಟಕ ಪುಸ್ತಕಗಳು



₹25



₹65



₹35



₹325



₹225



₹20



₹20



₹50



₹70



₹60



₹35



₹25



₹20



₹25



₹25



₹20



₹30



₹40



₹25



₹20



₹20



₹30



₹25



₹30

ಆನ್‌ಲೈನ್ ಮೂಲಕವೂ ಲಭ್ಯ  Shop Online www.navakarnataka.com

ಮೂರು ವರ್ಷದ 'ಹೊಸತು' ಚಂದಾದಾರರಿಗೆ 20% ಸೋಡಿ. ಇತರರಿಗೆ 10% ಸೋಡಿ. ನಿವ್ವಳ ₹300ಕ್ಕಿಂತ ಕಡಿಮೆ ಮೊತ್ತದ ಬೇಡಿಕೆಗಳಿಗೆ ಅಂಚೆ/ಕೊರಿಯರ್ ವೆಚ್ಚ ₹40 ಪ್ರತ್ಯೇಕ.

ಹಣವನ್ನು ಡಿ.ಡಿ., ಎಂ.ಒ. ಮೂಲಕ ಕಳಿಸಿ ಅಥವಾ ನಮ್ಮ ಪುಸ್ತಕ ಮಳಿಗೆಗೆ ಭೇಟಿ ನೀಡಿ

## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

11, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ 5159, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು – 560 001. ಫೋನ್ : 30578022, 22203580 ಫ್ಯಾಕ್ಸ್ : 30578023
e-mail : navakarnataka@gmail.com http://navakarnataka.blogspot.in

ಶಾಖೆಗಳು : ಬೆಂಗಳೂರು ✆ 22251382 :: ಮಂಗಳೂರು ✆ 2441016 ✆ 2425161 :: ಮೈಸೂರು ✆ 2424094 :: ಕಲಬುರಗಿ ✆ 224302

# ಹೊಸತು

ಒಳಗೇನಿದೆ?

## ನೆಮ್ಮದಿಯ ನಾಳೆ ನಮ್ಮದು


**ಸಂದರ್ಶನ :**
**ಮನಸ್ಸಿನ ಮೇಲೆ ಶಾಸನ ವಿಧಿಸಲಾಗದು – ಕೋ. ಚೆನ್ನಬಸಪ್ಪ**
*ಸಂದರ್ಶಕರು : ಜಿ. ಎಸ್. ಜಯದೇವ, ಕುಮಾರಿ ಪ್ರಜ್ಞ* ... ೪೩

**ನೀರಾವರಿಯಿಂದ ವಿಜಯಪುರ ಜಿಲ್ಲೆ ಸಮೃದ್ಧಿಯೆಡೆಗೆ**
*ಡಾ॥ ಎಮ್. ಎಸ್. ಶಿರಹಟ್ಟಿ* ... ೩೭

**ಅಭಿವೃದ್ಧಿಯು ಒಳಗೊಳ್ಳುವ ಸಂಗತಿಗಳಾವುವು ? ಕರ್ನಾಟಕದ ಅಭಿವೃದ್ಧಿಯ ಒಂದು ಮೌಲ್ಯಮಾಪನ** *ಟಿ. ಆರ್. ಚಂದ್ರಶೇಖರ* ... ೧೧

**ವಸಾಹತುಶಾಹಿ ಗೆಸ್ಸೆಟಿಯರ್ ಮತ್ತು ಕೊಡಗು**
*ಅವಿನಾಶ್ ವಿ., ಪ್ರಮೀಳ ಎಮ್.* ... ೪೫

**ಋಗ್ವೇದ ಪ್ರವೇಶಿಕೆ : ಐತಿಹ್ಯ ಮತ್ತು ವಾಸ್ತವ** *ಜಿ. ರಾಮಕೃಷ್ಣ* ... ೧೭
**ಸ್ವಾತಂತ್ರ್ಯಾನಂತರದ ಭಾರತ – ೧೯**
**ಅಮೆರಿಕದೊಂದಿಗೆ ನ್ಯೂಕ್ಲಿಯರ್ ಒಪ್ಪಂದ – ಯುಪಿಎಗೆ ಎಡಪಕ್ಷಗಳ ಬೆಂಬಲ ವಾಪಸು** *ಸಿ. ಆರ್. ಕೃಷ್ಣರಾವ್* ... ೨೧

**ಗುಲಾಮ ಚಾಕರಿ** *ಗುಜರಾತಿ ಮೂಲ : ಮೋಹನ ಪರ್‌ಮಾರ್*
*ಕನ್ನಡಕ್ಕೆ : ಸೊಂದಲಗೆರೆ ಲಕ್ಷ್ಮೀಪತಿ* ... ೨೯

**ಕಾವ್ಯಲೋಕ** ೧೪, ೨೩, ೨೮, ೩೨, ೪೦, ೪೨, ೫೮

**ಕಳೆದುಹೋದ ಮದುವೆ ಮನೆ !** *ಬಿಂಡಿಗನವಿಲೆ ಭಗವಾನ್* ... ೪೧

**ಇದು ಧರ್ಮಾಸ್ಪತ್ರೆಯಲ್ಲ; ಕಾರ್ಪೊರೇಟ್ ಕಂಪನಿ !**
*ಪ್ರೊ॥ ಶಿವರಾಮು ಕಾಡನಕುಪ್ಪೆ* ... ೪೯
**ಜನಾರೋಗ್ಯ ಸಾಧನೆಗೆ ಆಯುರ್ವೇದ ಹಾಗೂ ಆಧುನಿಕ ವೈದ್ಯ ಪದ್ಧತಿ**
*ಡಾ॥ ಪ್ರಕಾಶ್ ಸಿ. ರಾವ್* ... ೩೩

**ಗೋಡ್ಸೆಯೂ ದೇಶಭಕ್ತನೆಂದಾದರೆ !** *ಎಸ್. ಸುರೇಂದ್ರ* ... ೨೫
**ಗಾಂಧಿ ನಾಡಿಗೆ ನನ್ನ ಪ್ರಯಾಣ** *ವೈ. ಜಿ. ಮುರಳೀಧರನ್* ... ೫೯

**ಭಾರತದಲ್ಲಿ ಗೋವುಗಳ ಸಂತತಿ ನಶಿಸುತ್ತಿದೆಯೇ ?** *ಕೆ. ಮಹಾಂತೇಶ* ... ೫೩

**ಅಗಲಿದ ರಂಗಚೇತನಗಳಿಗೆ ರಂಗನಮನ** *ಶಶಿಕಾಂತ ಯಡಹಳ್ಳಿ* ... ೪೮

**ನಾನು ಓದಿದ ಪುಸ್ತಕ : ಹಕ್ಕಿ ಮತ್ತು ಗೂಡು (ಪಕ್ಷಿಗಳ ಬದುಕು) –**
*ಸಾಥಿ ಎಸ್. ಆರ್.* ... ೫೭

**ತತ್ಕಾಲದ ದರ್ಶನ ಮಾಡಿಸುವ ಕಥೆಗಳು**
*ಕಲ್ಲೇಶ್ ಕುಂಬಾರ್* ... ೫೧
**ವಿಶ್ವ ವೀಕ್ಷಣೆ : ಮೋದಿ ಚೀಣಾ ಪ್ರವಾಸ – ಭರವಸೆಗಳ ಸುರಿಮಳೆ**
*ಸೀಯಾರ್ಕೆ* ... ೫೬
**ನಭಾವಲೋಕನ : ಗುರು–ಶುಕ್ರರ ಆಟ** *ಡಾ॥ ಬಿ. ಎಸ್. ಶೈಲಜಾ* ... ೩೬
**ಹೊಸ ಓದು** ಇಂದಿರಾಕುಮಾರಿ ... ೨೪
**ತಿಳಿವು : ಸಾವನ್ನು ಕುರಿತಂತೆ** *ಹೆಚ್. ಎಸ್. ಈಶ್ವರ* ... ೬೨
**ಸಾದರ ಸ್ವೀಕಾರ** ... ೩೦
**ಕ್ಷ–ಕಿರಣ** *ಸಾನ್ವಿ ಪಿ.* ... ೧೬



**ಚಿತ್ರಗಳು :** ತನು, ಷಣ್ಮುಖ, ವಿ. ಗೋಪಾಲ್, ಕಮಲಂ ಅರಸು, ಗೋಪಿ, ಜಿಎಂಬೊ
**ಮುಖಪುಟ :** ಹಕ್ಕಿ ಮತ್ತು ಗೂಡು
**ಕೃತಿಕಾರ :** ಕೃಷ್ಣ ಎಂ. ವಿ. ಮಳವಳ್ಳಿಯವರ ಛಾಯಾಚಿತ್ರ
**ವಿನ್ಯಾಸ :** ನವಕರ್ನಾಟಕ ವಿನ್ಯಾಸ
**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ಕಡುಬೇಸಿಗೆಯ ಬೇಗೆಯಲ್ಲಿ ಈ ವರ್ಷ ಎರಡು ಸಾವಿರ ಮಂದಿ ಬೆಂದುಹೋದರು. ನಮ್ಮ ದೇಶಕ್ಕಿದು ದೊಡ್ಡ ಕಳಂಕವೆಂದು ರಾಜಕೀಯ ಮುತ್ಸದ್ದಿಗಳಿಗೆ ಅನಿಸಲೇ ಇಲ್ಲ. ಅದಕ್ಕಿಂತಲೂ ಬೇರೆ ದುರಂತ ಇರಬಲ್ಲುದೆ ? ಒಬ್ಬ ವ್ಯಕ್ತಿಯನ್ನು ಕೊಂದರೆ ಶಿಕ್ಷೆಯಾಗಬೇಕೆಂಬ ಕಾನೂನಿದೆ, ಆದರೆ ೨೦೦೦ ಮಂದಿಯನ್ನು 'ಕೊಂದರೆ' ಏನೂ ಬಾಧಕವಿಲ್ಲ. ಏಕೆಂದರೆ ಕಾನೂನಿನ ಯಾವ ಕಲಂನಡಿಯೂ ಅದು ಅಪರಾಧ ಎನಿಸಿಕೊಳ್ಳುವುದಿಲ್ಲ. ಈ ಜನ ಸತ್ತ ಪರಿಸರದಲ್ಲೇ ಇದ್ದ ಬೇರೆಯವರು ಹತರಾಗಲಿಲ್ಲವಲ್ಲ, ಅದಕ್ಕೇನು ಕಾರಣ ? ಸಾಂಪ್ರದಾಯಿಕವಾಗಿ 'ಹಣೆಬರಹ' ಎಂದು ಹೇಳಿ ಕೈ ತೊಳೆದು ಕೊಳ್ಳಬಹುದು. ಆದರೆ ಮನಸ್ಸನ್ನು ತೊಳೆದುಕೊಳ್ಳಲಾದೀತೆ ? ದೇಶದ ಪ್ರಧಾನಿ ಪ್ರತಿ ತಿಂಗಳೂ ಅವರ ಮನದಾಳದ ಮಾತುಗಳನ್ನು ಬಿಚ್ಚಿಡುತ್ತಾರೆ. ಆದರೆ ಅವರು ಈ ತಿಂಗಳ ಮಾತಿನಲ್ಲಿ ೨೦೦೦ ಜನರ ಸಾವಿನ ಸಂಗತಿಯ ಬಗ್ಗೆ ಅವರ ಭಾವನೆಯನ್ನು ಬಚ್ಚಿಟ್ಟುಕೊಂಡುಬಿಟ್ಟರು. ಅವರು 'ಟ್ವೀಟ್ ಪುರುಷ' ರಾದ್ದರಿಂದ ಅದರಲ್ಲಿ ಏನಾದರೂ ಹೇಳಿಕೊಂಡಿದ್ದರೇನೋ ತಿಳಿಯದು. ಸತ್ತವರು ಮನೆ–ಮಠ ಇಲ್ಲದವರು, ತಲೆಯ ಮೇಲೆ ಸೂರಿಲ್ಲದೆ ನೇರವಾಗಿ ನೆತ್ತಿಗೆ ಸೂರ್ಯನ ತಾಪವನ್ನು ಮುಟ್ಟಿಸಿಕೊಂಡವರು. ಹಿಮಗಡ್ಡೆಯ ಮಾತಿರಲಿ, ಅವರಿಗೆ ಒಂದು ಗಡಿಗೆ ನೀರು ಸಹ ತಕ್ಷಣದಲ್ಲಿ ದೊರಕು ವಂತಿರಲಿಲ್ಲ. "ಭಾರತದಲ್ಲೇ ಮಾಡಿ" ಎಂಬ ಘೋಷಣೆಯು ಅವರಿಗೆ "ಭಾರತದಲ್ಲಿ ಮಡಿ" ಎಂದು ಗೋಚರವಾಗಿ ಬಿಟ್ಟಿತು. ತಾಪದಿಂದ ಮಡಿದವರಿಗೆ 'ಹೊಸತು' ಪರಿತಾಪ ವ್ಯಕ್ತಪಡಿಸುತ್ತದೆ, ಅದರಿಂದೇನು ಪ್ರಯೋಜನವೆಂಬ ಅಳುಕನ್ನು ವ್ಯಥೆಯಿಂದ ಅನುಭವಿಸುತ್ತದೆ. ಕನಿಷ್ಠಮಟ್ಟದ ಮುಂಜಾಗ್ರತಾ ಕ್ರಮಗಳು ಸಾಧ್ಯವಿಲ್ಲವೆ ? ಚಂಡಮಾರುತ ಬೀಸಿದಾಗ ಮೀನುಗಾರರಿಗೆ ಎಚ್ಚರಿಕೆ ನೀಡುತ್ತಾರೆ, ಸಮುದ್ರವನ್ನು ಪ್ರವೇಶಿಸಬೇಡಿರೆಂದು ಅಪ್ಪಣೆ ಹೊರಡಿಸುತ್ತಾರೆ. ಬಿಸಿಲಿನ ಝಳ ಒಮ್ಮಿಂದೊಮ್ಮೆಗೆ ದಿಢೀರನೆ ಬರುವುದಿಲ್ಲ. ಅದರ ಸೂಚನೆ ಇದ್ದಾಗ "ಕೂಲಿ–ನಾಲಿ ಮಾಡಹೋಗಬೇಡಿ, ಗುಡಿಸಲುಗಳನ್ನು ಬಿಟ್ಟು ಹೊರಬನ್ನಿ, ಯಾವುದಾದರೂ ಶಾಲೆಯೋ ಮಠವೋ ಮನೆಯೋ ಇದ್ದರೆ ಅದರಲ್ಲಿ ತೂರಿಕೊಳ್ಳಿ, ಒಂದು ಗಡಿಗೆ ನೀರನ್ನು ತಲೆಯ ಮೇಲೆ ಸುರಿದುಕೊಳ್ಳಿ, ಒಂದು ಚೊಂಬು ತಣ್ಣೀರು ಕುಡಿಯಿರಿ" ಇತ್ಯಾದಿ ಹೇಳಬರುವುದಿಲ್ಲವೆ ? ಭೈರಪ್ಪನವರ ಕ್ಷಮೆ ಕೋರಿ ಹೇಳುವುದಾದರೆ, ಹೀಗೆ ಕೂಲಿ ಕಳೆದುಕೊಂಡಾಗ ಒಂದಷ್ಟು ಹಣವನ್ನು ಅವರಿಗೆ ಕೊಡುವುದು ಮಾನವೀಯತೆಯ ಒಂದು ಚಿಕ್ಕ ಅಂಶ. ಯಾರೋ ಕಂಪ್ಯೂಟರ್ ಭೂಪತಿ ಬರೆದಿದ್ದನಂತೆ, "ನಾವೇನು ಅವರಿಗೆಲ್ಲಾ ಹವಾನಿಯಂತ್ರಿತ ಕೋಣೆಗಳನ್ನು ಮಾಡಿಕೊಡಲು ಸಾಧ್ಯವೇ ?" ಎಂದು. "ಏಕಾಗಬಾರದು ? ನಾಲ್ಕು ದಿನ ಅಂತಹ ಮದುವೆ ಛತ್ರಗಳನ್ನು ಬಿಡಿಸಿಕೊಡಿ" ಎಂದು ಯಾರೂ ಹೇಳಲಿಲ್ಲ. ನಮ್ಮದಾದರೆ ಜೀವ, ಅವರದಾದರೆ ಲೆಕ್ಕಕ್ಕೆ ಬಾರದ ಸಾವು ! ಇದು ನಮ್ಮ ಸಾಮಾಜಿಕ ನೈತಿಕತೆ. ಅದನ್ನೇ 'ಉದಾತ್ತ ಸಂಸ್ಕೃತಿ' ಎಂದು ಬಡಬಡಿಸುವ ನಾವು ಖಳರು. ಅದಾವನೋ ಟಿ.ವಿ. ಅರ್ಣವ ಗೋಸ್ವಾಮಿ ಇದ್ದಾನಂತಲ್ಲ, ಅವನಿಗೆ ಇದು ಚರ್ಚಾವಿಷಯವೆನಿಸಿತೇನು ?

* * *

"ಭಾರತದಲ್ಲಿ ಮಾಡು" ಎಂದು ಹೋದ ದೇಶಗಳಲ್ಲೆಲ್ಲಾ ಪ್ರಧಾನಿ ಕರೆಕೊಡುತ್ತಾರೆ. ಆದರೆ ಮಾಡಲು ಬಂದವರು ಎಲ್ಲಿ ಅಡಗಿಕೊಂಡಿದ್ದಾರೋ ತಿಳಿಯುತ್ತಿಲ್ಲ. ತಿಳಿದುಬಂದಿರುವ ವಿಷಯವೇನೆಂದರೆ ಕಳೆದ ಎರಡು ತಿಂಗಳುಗಳ ಅವಧಿಯಲ್ಲಿ ನಮ್ಮ ದೇಶವು ಹದಿನಾರು ಲಕ್ಷ ಎಪ್ಪತ್ತು ಸಾವಿರ ಟನ್ ಉಕ್ಕನ್ನು ಆಮದುಮಾಡಿಕೊಂಡಿದೆ ಎಂಬುದು. ಅದಕ್ಕೆ ವಿದೇಶಿ ವಿನಿಮಯದಲ್ಲಿ ಎಷ್ಟು ಲಕ್ಷ ಡಾಲರುಗಳನ್ನು ಸುರಿದಿದ್ದೇವೆ ಲೆಕ್ಕ ಮಾಡಿ. ಕಬ್ಬಿಣದ ಅದಿರಿನ ಬೆಟ್ಟಗಳನ್ನು ಬರಿದು ಮಾಡಿಕೊಂಡು ಅದಿರಿನ ಉತ್ಪನ್ನವನ್ನು

(೬ನೇ ಪುಟಕ್ಕೆ)



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೬ ಸಂಚಿಕೆ-೧೨ ಜುಲೈ ೨೦೧೫





■ ***ಮುದ್ರಕ-ಪ್ರಕಾಶಕ***

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

■ ***ಮುದ್ರಣ***

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು – ೫೬೦ ೦೫೮
ದೂರವಾಣಿ: ೨೮೩೯೭೪೨೬

■ ***ಹೊಸತು ಕಚೇರಿಯ ವಿಳಾಸ***




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೯೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧
ದೂರವಾಣಿ: ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**




# ಸಂಪಾದಕೀಯ

## ಕಲುಷಿತಗೊಂಡ ಪ್ರಜಾಸತ್ತೆಯ ಅಡಿಪಾಯ

ನೈಜ ಪ್ರಜಾಸತ್ತೆಯ ಅಡಿಪಾಯ ಗ್ರಾಮ ಪಂಚಾಯತಿ ಎಂದು ಪರಿಗಣಿಸಲ್ಪಟ್ಟಿದೆ. ಕಳೆದ ಮೂವತ್ತು ವರ್ಷಗಳಿಂದ ನಮ್ಮ ರಾಜ್ಯದ ಪಂಚಾಯತಿ ವ್ಯವಸ್ಥೆ ವಿವಿಧ ಪ್ರಯೋಗಗಳಿಗೆ ಒಳಪಡುತ್ತಿದೆ. ನಮ್ಮ ಸಮಾಜದ ಬಹುಸಂಖ್ಯಾತ ಜನತೆ ಗ್ರಾಮ ನಿವಾಸಿಗಳಾಗಿದ್ದರಿಂದ ಅವರು ನೇರವಾಗಿ ಆಡಳಿತ ಪ್ರಕ್ರಿಯೆಯಲ್ಲಿ ಭಾಗವಹಿಸಿ ತಮ್ಮ ಅವಶ್ಯಕತೆಗಳನ್ನು ತಾವೇ ಪೂರೈಸಿಕೊಳ್ಳುವಂಥ ಆಶಯಗಳನ್ನು ಈ ಗ್ರಾಮ ಪಂಚಾಯತಿ ವ್ಯವಸ್ಥೆ ಹೊಂದಿದೆ. ಇದು ಕಳೆದ ಮೂವತ್ತು ವರ್ಷಗಳಿಂದ ಅಧಿಕೃತವಾಗಿ ಜಾರಿಗೆ ಬಂದರೂ ಇಂಥ ಒಂದು ವ್ಯವಸ್ಥೆಯ ಬೇರುಗಳಿರುವುದು ನಮ್ಮ ಪ್ರಾಚೀನ ಸಮಾಜದ ಬುಡಕಟ್ಟು ವ್ಯವಸ್ಥೆಯಲ್ಲಿ. ಇಂದಿಗೂ ಹಲವಾರು ಆದಿವಾಸಿ, ಬುಡಕಟ್ಟು ಜನಜೀವನದಲ್ಲಿ ಇಂಥ ಒಂದು ಆಡಳಿತ ವ್ಯವಸ್ಥೆ ಇದೆ. ಬುದ್ಧನ ಕಾಲವನ್ನು ಬುಡಕಟ್ಟು ವ್ಯವಸ್ಥೆಯ ಮೇಲಿನ ದಾಳಿಯ ಸಂದರ್ಭವೆಂದೇ ಪರಿಗಣಿಸಲಾಗುತ್ತದೆ. ಜನರೇ ಸೇರಿ ತಮ್ಮನ್ನು ತಾವು ಆಳಿಕೊಳ್ಳುವ ಒಂದು ನೈಜ ಪ್ರಜಾಸತ್ತೆ ನಮ್ಮ ದೇಶ ಮಾತ್ರವಲ್ಲ, ವಿಶ್ವದ ಎಲ್ಲ ಭಾಗದ ಆದಿಮ ಸಮಾಜಗಳಲ್ಲಿತ್ತು. ಇಂಥ ನೈಜ ಪ್ರಜಾಸತ್ತೆಯನ್ನು ಹೊಂದಿದ್ದ ಬುಡಕಟ್ಟುಗಳ ಮೇಲೆ ದಾಳಿ ನಡೆದದ್ದನ್ನು ಬುದ್ಧ ಕಣ್ಣಾರೆ ಕಂಡಿದ್ದಾನೆ. ಸ್ವತಃ ತನ್ನ ಬುಡಕಟ್ಟಿನ ಮೇಲೆಯೇ ದಾಳಿ ನಡೆದದ್ದನ್ನು ಕಂಡು ಬುದ್ಧ ನೊಂದಿದ್ದಾನೆ. ಹೀಗೆ ಎಲ್ಲ ಜನತೆಯ ಸಹಭಾಗಿತ್ವದಿಂದ ನಡೆಯುತ್ತಿದ್ದ ಸಾಮಾಜಿಕ ವ್ಯವಸ್ಥೆಯನ್ನು ನಾಶಮಾಡಿದ್ದು ಪ್ರಬಲವಾದ ಅರಸೊತ್ತಿಗೆಗಳು ಮತ್ತು ಅಂದಿನ ಅರಸರ ಸಾಮ್ರಾಜ್ಯ ವಿಸ್ತರಣೆಯ ದಾಹ. ಈ ದಾಹದ ಹಿಂದಿರುವುದು ಸಂಪತ್ತಿನ ಲೂಟಿ ಎನ್ನುವುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಈ ಸಾಮ್ರಾಜ್ಯ ವಿಸ್ತರಣೆ ಸಾಮ್ರಾಜ್ಯಶಾಹಿಗಳ ದಾಳಿಯವರೆಗೂ ಮುಂದುವರಿದು ಒಂದೊಂದು ದೇಶ, ಖಂಡಗಳೇ ಅವರ ಸ್ವತ್ತುಗಳಾಗಿ, ವಸಾಹತುಗಳಾಗಿ ಹೋಗಿದ್ದನ್ನು ಇತಿಹಾಸದಲ್ಲಿ ನಾವು ಕಾಣುತ್ತೇವೆ. ಹೀಗೆ ಪಂಚಾಯತಿ ಎಂಬ ಒಂದು ಪುಟ್ಟ ಸ್ವಯಮಾಡಳಿತ ವ್ಯವಸ್ಥೆ ಸ್ಥಳೀಯರನ್ನೊಳಗೊಂಡು ಸಾಮ್ರಾಜ್ಯಶಾಹಿಗಳ ದಾಳಿಗೆ ತುತ್ತಾಗಿ ಜನ ಗುಲಾಮರಾಗಬೇಕಾಯಿತು. ೧೯ ಮತ್ತು ೨೦ನೇ ಶತಮಾನದಲ್ಲಿ ನಡೆದ ಸ್ವಾತಂತ್ರ್ಯ ಆಂದೋಲನಗಳ ಗರ್ಭದಲ್ಲಿ ಮತ್ತೆ ಈ ಪಂಚಾಯತಿ ವ್ಯವಸ್ಥೆ ರೂಪಗೊಂಡಿತು. ಅದಕ್ಕೇ ಭಾರತದ ಸ್ವಾತಂತ್ರ್ಯ ಹೋರಾಟ ತೀವ್ರವಾದ ಸಂದರ್ಭದಲ್ಲಿಯೇ ೨೬–೭–೧೯೪೨ರಲ್ಲಿ ಹರಿಜನ ಪತ್ರಿಕೆಯಲ್ಲಿ ಗಾಂಧಿ ಗ್ರಾಮ ಸ್ವರಾಜ್ಯದ ತಮ್ಮ ಕನಸುಗಳ ಕುರಿತು ಬರೆಯುತ್ತಾರೆ. ಗ್ರಾಮ ಸ್ವರಾಜ್ ಒಂದು ಪರಿಪೂರ್ಣ ರಿಪಬ್ಲಿಕ್ ಆಗಬೇಕೆಂದು ಆಶಿಸುತ್ತಾರೆ. ಭಾರತಕ್ಕೆ ಸ್ವಾತಂತ್ರ್ಯ ಬಂದು ದಶಕಗಳು ಕಳೆದರೂ ಇಡೀ ದೇಶಕ್ಕೆ ಒಂದು ವ್ಯವಸ್ಥಿತ ಪಂಚಾಯತಿ ವ್ಯವಸ್ಥೆ ಇರಲಿಲ್ಲ. ಈಗ ಕಳೆದ ಮೂವತ್ತು ವರ್ಷದಿಂದ ಈ ವ್ಯವಸ್ಥೆ ಅಧಿಕೃತವಾಗಿ ಜಾರಿಗೆ ಬಂದಿದೆ.

ಕಳೆದ ತಿಂಗಳು ಕರ್ನಾಟಕದಲ್ಲಿ ಗ್ರಾಮ ಪಂಚಾಯತಿ ಚುನಾವಣೆ ನಡೆಯಿತು. ರಾಜ್ಯದ ೫೮೩೪ ಗ್ರಾಮ ಪಂಚಾಯತಿಗಳ, ೯೪೩೪೮ ಸ್ಥಾನಗಳಿಗೆ ಯಶಸ್ವಿಯಾಗಿ ನಡೆದ ಈ ಚುನಾವಣೆ ನಮ್ಮ ರಾಜಕೀಯ ವ್ಯವಸ್ಥೆಯ ಸಾಧನೆ ಎಂದೇ ಹೇಳಬೇಕು. ಇದನ್ನು ನಮ್ಮ ಚುನಾವಣಾ ಆಯೋಗ ನಡೆಸಿಕೊಟ್ಟಿದೆ. ನಮ್ಮಲ್ಲೂ ಗ್ರಾಮ ಪಂಚಾಯತಿ ವ್ಯವಸ್ಥೆ ಇದೆ ಎಂದು ಹೆಮ್ಮೆಪಡಬಹುದು. ಆದರೆ ಆ ಚುನಾವಣೆಗಳು ನಡೆದ ವಿಧಾನವನ್ನು ನೋಡಿದರೆ ನಿರಾಶೆಯಾಗುತ್ತದೆ. ಗ್ರಾಮ ಪಂಚಾಯತಿ ಚುನಾವಣೆಗಳಲ್ಲಿ ರಾಜಕೀಯ ಪಕ್ಷ, ಪಕ್ಷದ ಚಿಹ್ನೆಗಳಿಲ್ಲದಿದ್ದರೂ ಈ ಚುನಾವಣೆಗಳು ರಾಜಕೀಯ ಪಕ್ಷಗಳ ಭಾಗವಹಿಸುವಿಕೆಯಲ್ಲಿಯೇ ನಡೆದಿವೆ. ಗ್ರಾಮ ಪಂಚಾಯತಿ ಮೇಲೆ ಸ್ಥಾಪಿಸುವ ರಾಜಕೀಯ ಪ್ರಾಬಲ್ಯ ಮುಂದೆ ವಿಧಾನಸಭೆ, ಸಂಸತ್ ಚುನಾವಣೆಗಳಿಗೆ ಸಾಧನವಾಗುತ್ತದೆ. ಆ ಕಾರಣಕ್ಕೇ ವಿವಿಧ ರಾಜಕೀಯ ಪಕ್ಷಗಳು ಅಭ್ಯರ್ಥಿಗಳನ್ನು ನಿಲ್ಲಿಸುತ್ತಾರೆ. ಅಲ್ಲಿಗೆ ಇದು ರಾಜಕೀಯ ಪಕ್ಷಗಳ ಪೈಪೋಟಿಯೇ ಆಗುತ್ತದೆ. ನಮ್ಮ ದೇಶದ ಪ್ರಜಾಪ್ರತಿನಿಧಿ ವ್ಯವಸ್ಥೆಗೆ ಅಂಟಿದ ರೋಗಗಳಾದ ಜಾತಿ, ಧರ್ಮ, ಹಣ, ಹೆಂಡ, ಸೀರೆ, ಪಂಚೆ, ಬಾಡೂಟ ಎಲ್ಲವೂ ಈ ಗ್ರಾಮ ಪಂಚಾಯತಿ ಚುನಾವಣೆಯಲ್ಲಿ ಬಳಕೆಯಾಗುತ್ತವೆ. ಪ್ರತಿಸಲದಂತೆ ಈ ಬಾರಿಯೂ ಅದಾಗಿದೆ. ಇಂಥ ಮಾರ್ಗಗಳ ಮೂಲಕ ಗೆಲುವು ಪಡೆದವರನ್ನು ಪಕ್ಷಗಳು ತಮ್ಮ ಪಕ್ಷದವರೆಂದು ಗುರ್ತಿಸಿಕೊಳ್ಳುತ್ತವೆ. ಹಾಗೆ ಅತಿ ಹೆಚ್ಚು ಜನ ಕಾಂಗ್ರೆಸ್‌ನವರೆಂದೂ ಎರಡನೇ ಸ್ಥಾನದಲ್ಲಿ ಬಿ.ಜೆ.ಪಿ.ಯವರೂ, ಮೂರನೇ ಸ್ಥಾನದಲ್ಲಿ ಜೆ.ಡಿ.ಎಸ್.ನವರೂ ಇದ್ದಾರೆಂದು ಪತ್ರಿಕೆಗಳೂ ವರದಿ ಮಾಡಿವೆ. ಚುನಾವಣೆಯ ಮೊದಲನೇ ಹಂತದಲ್ಲಿ ಅಭ್ಯರ್ಥಿಗಳ ಆಯ್ಕೆಗೆ ಅನೀತಿಗಳು ನಡೆದರೆ ಚುನಾವಣೋತ್ತರ ಅನೀತಿಗಳ ಪರ್ವ ಅದಕ್ಕಿಂತ ದೊಡ್ಡದು. ಗ್ರಾಮ ಪಂಚಾಯತಿಗಳ ಅಧ್ಯಕ್ಷರ

ಆಯ್ಕೆಗಾಗಿ ನಡೆಯುವ ಪೈಪೋಟಿ ಇನ್ನೂ ಅಸಹ್ಯಕರವಾದದ್ದು. ಅಧ್ಯಕ್ಷ ಆಯ್ಕೆಗೆ ಮೀಸಲಾತಿ ಘೋಷಣೆಯಾದ ತಕ್ಷಣವೇ ಗ್ರಾಮ ಪಂಚಾಯತಿ ಸದಸ್ಯರ ಅಪಹರಣ ಆರಂಭವಾಗುತ್ತದೆ. ಆಯ್ಕೆಯಾದ ಗ್ರಾಮ ಪಂಚಾಯತಿ ಸದಸ್ಯರನ್ನು ಅಧ್ಯಕ್ಷ ಚುನಾವಣೆಯ ದಿನದವರೆಗೆ ತೀರ್ಥಯಾತ್ರೆ, ಪ್ರವಾಸ, ಗೋಪ್ಯ ಸ್ಥಳದಲ್ಲಿರಿಸುವಿಕೆ, ಹಣ, ಹೆಂಡ, ತುಂಡುಗಳ ಹಂಚಿಕೆ, ರೆಸಾರ್ಟ್ ವಾಸ ಸಾಂಗೋಪಾಂಗವಾಗಿ ನಡೆಯುತ್ತವೆ. ಇನ್ನೊಂದು ಪಕ್ಷದವರು ನಮ್ಮ ಪಕ್ಷದವರನ್ನು ಅಪಹರಿಸುತ್ತಾರೆಂಬುದು ಪ್ರತಿಯೊಂದು ಪಕ್ಷದ ಆರೋಪ ಮತ್ತು ಸಮಜಾಯಿಷಿ. ಈ ರೀತಿಯ ಅಪಹರಣಕ್ಕೆ ತಗಲುವ ವೆಚ್ಚವನ್ನು ಅಧ್ಯಕ್ಷ ಪದವಿಯ ಆಕಾಂಕ್ಷಿಗಳು , ಸ್ಥಳೀಯ ಶಾಸಕ, ಸಂಸದ, ಪಕ್ಷದ ನಾಯಕರು ಭರಿಸುತ್ತಾರೆ. ಈ ಅಪಹರಣದಲ್ಲಿ ಅರ್ಧದಷ್ಟು ಮಹಿಳಾ ಸದಸ್ಯರೂ ಇರುತ್ತಾರೆ ಎನ್ನುವುದನ್ನು ಗಮನಿಸಬೇಕು. ಮುಂದೊಂದು ದಿನ ಅಧ್ಯಕ್ಷ ಚುನಾವಣೆಗಳು ಮುಗಿದು ಕೆಲವು ಕಡೆ ಶಾಂತವಾಗಿ, ಕೆಲವು ಕಡೆ ಹೊಡೆದಾಟವಾಗಿ ಅಧಿಕಾರ ಸ್ಥಾಪನೆಯಾಗುತ್ತದೆ. ಅಲ್ಲಿಗೆ ಚುನಾಯಿತ ಅಧ್ಯಕ್ಷರು ತಮಗೆ ಸ್ಥಾನ ದಯಪಾಲಿಸಿದ ಶಾಸಕರೂ, ಸಂಸದರೂ ಪಕ್ಷದ ನಾಯಕರ ಮುತುವರ್ಜಿಯಲ್ಲಿ ಆಡಳಿತ ನಡೆಸುತ್ತಾರೆ. ಚುನಾವಣೆ ಘೋಷಣೆಯಾದ ದಿನದಿಂದ ಮಾಡಿದ ಖರ್ಚನ್ನು ಬಡ್ಡಿ ಸಮೇತ ವಾಪಸು ಪಡೆಯಲು ಯೋಜನೆಗಳನ್ನು ರೂಪಿಸುವುದು ಮತ್ತು ಯೋಜನೆಗಳನ್ನು ಜಾರಿಮಾಡುವುದು ಗ್ರಾಮ ಪಂಚಾಯತಿ ಸದಸ್ಯನಿಂದ ಸಂಸತ್ ಸದಸ್ಯನವರೆಗೆ ಚಟುವಟಿಕೆಗಳು ಮುಂದುವರಿಯುತ್ತವೆ. ಮಾತ್ರವಲ್ಲ, ಸಾರ್ವಜನಿಕರ ಹಿತಕ್ಕೆ ಮೀಸಲಾದ ಯೋಜನೆಗಳಿಂದ ಹಣ ದೋಚುವ ತರಬೇತಿ ಗ್ರಾಮ ಪಂಚಾಯತಿ ಸದಸ್ಯನಿಗೆ ಇಲ್ಲಿಂದಲೇ ಸಿಗುತ್ತದೆ. ಕಳೆದ ದಶಕಗಳಲ್ಲಿ ಉದ್ಯೋಗ ಖಾತ್ರಿ ಯೋಜನೆ, ರಸ್ತೆ ಕಾಮಗಾರಿ, ಕಟ್ಟಡ ನಿರ್ಮಾಣ ಇಂಥ ಹಲವಾರು ಯೋಜನೆಗಳು ಜನಪ್ರತಿನಿಧಿಗಳಿಂದಲೇ ಲೂಟಿಗೊಳಗಾದ ಪ್ರಕರಣಗಳು ನಮ್ಮ ಮುಂದಿವೆ. ಇಂಥ ಲೂಟಿಗೆ ಪೂರಕವಾದ ಅಧಿಕಾರಿಗಳನ್ನು ವರ್ಗಾಯಿಸಿಕೊಳ್ಳುವ ಕೆಲಸವನ್ನು ಆ ಕ್ಷೇತ್ರದ ಶಾಸಕ, ಸಚಿವರು ನೋಡಿಕೊಳ್ಳುತ್ತಾರೆ. ಹಿಂದೆ ಅರಸರು, ಚಕ್ರವರ್ತಿಗಳು ಬುಡಕಟ್ಟು ಪ್ರಜಾಸತ್ತೆಯನ್ನು ನಾಶಮಾಡಿದಂತೆ ಇಂದು ಮೇಲ್‌ಹಂತದ ಜನಪ್ರತಿನಿಧಿಗಳು ತಳಹಂತದ ಪಂಚಾಯತಿ ಪ್ರಜಾಸತ್ತೆಯನ್ನು ಆಕ್ರಮಿಸಿದ್ದಾರೆ. ಪ್ರಜಾಸತ್ತೆಯ ತಳಪಾಯ ಗ್ರಾಮ ಪಂಚಾಯತಿ ವ್ಯವಸ್ಥೆ ತನ್ನ ಅರ್ಥವನ್ನು ಕಳೆದುಕೊಂಡಿದೆ.

ಪಂಚಾಯತ್‌ರಾಜ್ ಕಾನೂನಿಗೆ ತಿದ್ದುಪಡಿ ಸೂಚಿಸಲು ಕರ್ನಾಟಕ ರಾಜ್ಯ ಸರಕಾರ, ಶಾಸಕ ರಮೇಶಕುಮಾರ್ ಅವರ ಅಧ್ಯಕ್ಷತೆಯಲ್ಲಿ ಸಮಿತಿಯನ್ನೇನೋ ರಚಿಸಿತು. ಆದರೆ ಸಮಿತಿಯ ಹಲವಾರು ಪ್ರಮುಖ ಶಿಫಾರಸುಗಳನ್ನು ನಿರ್ಲಕ್ಷಿಸಲಾಗಿದೆ. ಪಂಚಾಯತ್‌ರಾಜ್ ಆಶಯಗಳು ಮಣ್ಣುಪಾಲಾಗಿವೆ. ಬುದ್ಧನ ಬುಡಕಟ್ಟು ಪ್ರಜಾಸತ್ತೆ, ಗಾಂಧೀಜಿಯವರ ಗ್ರಾಮ ಸ್ವರಾಜ್ ವ್ಯವಸ್ಥೆ ಇತ್ಯಾದಿ ಸ್ವಯಮಾಡಳಿತದ ಕನಸುಗಳನ್ನು ಹಾಳುಮಾಡುವಷ್ಟು ಶಕ್ತಿ ನಮಗಿದೆ. ಜನತೆ ಎಚ್ಚೆತ್ತುಕೊಳ್ಳುವ ತನಕ ಎಂಥ ವ್ಯವಸ್ಥೆ ಬಂದರೂ ಜನಪರ, ಜನರಿಂದ ಆಡಳಿತ ಎನ್ನುವುದು ಕನಸಾಗಿಯೇ ಇರುತ್ತದೆ.

ಪ್ರಧಾನಿ, ಮುಖ್ಯಮಂತ್ರಿ, ಮಂತ್ರಿಗಳೆಲ್ಲ ಭ್ರಷ್ಟರಾಗಿರುವಾಗ ಗ್ರಾಮ ಪಂಚಾಯತಿ ಸದಸ್ಯ ಮಾತ್ರ ಪ್ರಾಮಾಣಿಕವಾಗಿ ಇರಬೇಕು ಎಂದು ಬಯಸುವುದು ತಪ್ಪಲ್ಲವೇ ! ರಾಜ್ಯದ ೫೮೩೪ ಪಂಚಾಯತಿಗಳಲ್ಲಿ ಕೆಲವರಾದರೂ ಪ್ರಾಮಾಣಿಕರಿರಬಹುದು, ಕೆಲವೆಡೆಯಲ್ಲಾದರೂ ಗ್ರಾಮ ಸ್ವರಾಜ್ಯ ನಿರ್ಮಾಣ ಆಗಲಿ ಎಂದು ಆಶಿಸೋಣ.

ಸಿದ್ದನಗೌಡ ಪಾಟೀಲ

## ಯೋಗವು ಮಾರಾಟಕ್ಕಿದೆ !

ವಿಶ್ವಸಂಸ್ಥೆಯು ಜೂನ್ ೨೧ನ್ನು ಅಂತರರಾಷ್ಟ್ರೀಯ ಯೋಗ ದಿನವೆಂದು ಘೋಷಿಸಿದೆ. ಅದು ಭಾರತದ ಪತಾಕೆ ಎಂಬಂತೆ ನಮ್ಮ ದೇಶವು ವಿವಿಧ ದೇಶಗಳ ಹಾದಿಬೀದಿಗಳಲ್ಲಿ ಯೋಗವೆಂಬ ಕಸರತ್ತನ್ನು ಪ್ರದರ್ಶಿಸಲು ಹುಮ್ಮಸ್ಸಿನಿಂದ ಹಾರಾಡುತ್ತಿದೆ. ಪ್ರಸ್ತುತ 'ಹೊಸತು' ಸಂಚಿಕೆಯು ಓದುಗರ ಕೈ ಸೇರುವ ವೇಳೆಗೆ ಸಂಭ್ರಮವು ಮುಗಿದಿರುತ್ತದೆ; ನಮ್ಮ ದೇಶದ ಸಾವಿರಾರು "ಯೋಗಪಟುಗಳು" ಹತ್ತಾರು ದೇಶಗಳಿಗೆ ಹೋಗಿ ಕೈ–ಕಾಲು–ಮೈ ಬಗ್ಗಿಸಿ, ಉಸಿರಾಟದ ನಿಯಂತ್ರಣವನ್ನು ತೋರಿಸಿ, ಹಿಂದಿರುಗಿರುತ್ತಾರೆ. ನಮ್ಮ ದೇಶದ ಅಂದಾಜು ಖರ್ಚು ೮೦ ಕೋಟಿ ರೂಪಾಯಿಗಳು ಎಂದು ಹೇಳಲಾಗಿದೆ. ಈಗಾಗಲೆ ಯೋಗವನ್ನು ಮಾರಾಟದ ಸರಕನ್ನಾಗಿ ಮಾಡಿಯಾಗಿದೆ. ಹತ್ತಾರು ದೇಶಗಳಲ್ಲಿ ಅದಕ್ಕೆ ಗಿರಾಕಿಗಳಿದ್ದಾರೆ. ಉದಾಹರಣೆಗೆ, ಚೀಣಾದಲ್ಲಿ ಈಗ ಏನಿಲ್ಲವೆಂದರೂ ಹತ್ತು ಸಾವಿರ ಯೋಗ ಶಾಲೆಗಳಿವೆ. ಅಮೆರಿಕಾ, ಬ್ರೆಝಿಲ್, ಜರ್ಮನಿ, ಕೆನಡಾ, ಮುಂತಾದ ದೇಶಗಳಲ್ಲೂ ಸಾಕಷ್ಟು ದೊಡ್ಡ ಸಂಖ್ಯೆಯ ಶಾಲೆಗಳಿವೆ. ಹೀಗಿರುವಾಗ ನಮ್ಮದೇನು ತರಾತುರಿ ? ನಿಮಗಿದು ಗೊತ್ತೆ, ಈ ಸಂದರ್ಭಕ್ಕಾಗಿ ಹತ್ತಾರು ಸಂಸ್ಥೆಗಳ ಸಾಕ್ಷ್ಯಚಿತ್ರಗಳನ್ನು ತಯಾರಿಸಲು ಸರ್ಕಾರವು ಹಣವನ್ನು ತೊಡಗಿಸಿದೆ. ಅಲ್ಲಿ ಸಂಸ್ಥೆಗಳು ತಮ್ಮನ್ನು



ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





■ ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ₹ ೧೫/- |
| ವಾರ್ಷಿಕ ಚಂದಾ | ₹ ೨೦೦/- |
| ಮೂರು ವರ್ಷಕ್ಕೆ | ₹ ೪೫೦/- |

■ ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೦೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೯೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

ಮುಂದುಮಾಡಿಕೊಳ್ಳಲು ಸ್ಪರ್ಧೆ, ಕಚ್ಚಾಟ, ಎಲ್ಲಾ ನಡೆಸಿವೆ! ಅದೆಲ್ಲಾ ಆಧುನಿಕ ಯೋಗದ ಹೊಸ ಸವಾಲು ಎನ್ನುತ್ತಿದ್ದಾರೆ. ಆರೋಗ್ಯ ಕಾಪಾಡಿ ಕೊಳ್ಳಲು ಎಲ್ಲರೂ ವ್ಯಾಯಾಮ ಮಾಡಬೇಕು. ಎಂತಹ ವ್ಯಾಯಾಮ ಎಂಬುದು ವ್ಯಕ್ತಿಗತ ಆಯ್ಕೆ. ಯೋಗವೂ ಒಂದು ದೈಹಿಕ ಮತ್ತು ಮಾನಸಿಕ ವ್ಯಾಯಾಮ. "ಹಠಪ್ರದೀಪಿಕೆ" ಎಂಬ ಯೋಗ ಗ್ರಂಥ ಹೇಳುತ್ತದೆ, ಯಾವುದಾದರೂ ಏಕಾಂತ ಸ್ಥಳದಲ್ಲಿ ಯೋಗಾಭ್ಯಾಸ ಮಾಡಬೇಕೆಂದು (ಏಕಾಂತೇ ಮಠಿಕಾ ಮಧ್ಯೇ ಸ್ಥಾತವ್ಯಂ ಹಠಯೋಗಿನಃ). ನಾವು ನ್ಯೂ ಯಾರ್ಕ್‌ನಲ್ಲಿ ಟೈಂ ಸ್ಕ್ವೇರ್‌ಗೆ ಹೋಗಿ ಸಾವಿರ ಸಂಖ್ಯೆಯಲ್ಲಿ ಯೋಗ ಪ್ರದರ್ಶಿಸಿದ್ದೇವೆ! ಯೋಗವನ್ನು ಹಾದಿಬೀದಿಗೆ ತಂದು "ಕೊಳ್ಳಪ್ಪೋ ಕೊಳ್ಳಿ" ಎಂದು ಕೂಗು ಹಾಕಿದ್ದೇವೆ. ಅದಾರೋ "ಯೋಗಿ" ಆದಿತ್ಯನಾಥ ಎಂಬುವವನಿದ್ದಾನಂತೆ. ಅವನು ಯೋಗದ ಶಿಸ್ತಿನ ಪರಾಕಾಷ್ಠೆ ಮುಟ್ಟಿದ್ದಾನೆ: ಅಂತಹ ಕ್ರೋಧದ ಮನಸ್ಸು ಆತನದು. ಆತ ಹೇಳಿದ್ದಾನೆ, "ಯೋಗವನ್ನು ಒಪ್ಪದಿದ್ದರೆ ಸಮುದ್ರಕ್ಕೆ ಹಾರಿ ಸಾಯಿರಿ" ಎಂದು. ಇದಲ್ಲವೆ ಯೋಗಿಯ ಸಮತ್ವ ಪ್ರಜ್ಞೆ! "ಸಮತ್ವಂ ಯೋಗ ಉಚ್ಯತೇ" ಎಂಬ ಗೀತಾವಾಕ್ಯವನ್ನು ಆತನೂ ಉಚ್ಚರಿಸುತ್ತಾನೆ, ಆದರೆ ಮನಸ್ಸಿನಾಳದಲ್ಲಿ ಕ್ಷುದ್ರ ಭಾವನೆ ತುಂಬಿಕೊಂಡಿದೆ. ಯೋಗವು "ಚಿತ್ತವೃತ್ತಿ ನಿರೋಧ"ವೆಂದು ಪತಂಜಲಿ ಹೇಳಿದ್ದಾನೆ, ಆದರೆ ಆದಿತ್ಯನಾಥನದು ಚಿತ್ತವೃತ್ತಿ ವಿರೋಧವಾಗಿಬಿಟ್ಟಿದೆ. ಈ ಪ್ರಸಂಗದಲ್ಲಿ ಸೂರ್ಯ ನಮಸ್ಕಾರದ ಬಗೆಗಿನ ನಿರರ್ಥಕ ಚರ್ಚೆ ನಡೆದಿದೆ. ಅದು ಯಾವ ಯೋಗಗ್ರಂಥದಲ್ಲೂ ಇಲ್ಲದ ಒಂದು ಶರೀರ ವ್ಯಾಯಾಮ. ಅದಕ್ಕೆ ಸೂರ್ಯ, ಚಂದ್ರ, ವಾಯು, ಆಕಾಶ, ಯಾವುದೂ ಬೇಕಿಲ್ಲ. ಆದರೆ ಅದೇ ಪ್ರಶಸ್ತ ಯೋಗಕ್ರಿಯೆ ಎಂಬ ಐತಿಹ್ಯ ಪ್ರಚಾರಕ್ಕೆ ಬಂದಿದೆ. ಜೊತೆಗೆ "ಓಂ" ಇಲ್ಲದೆ ಯೋಗಸಾಧನೆಯು ಅಸಾಧ್ಯವೆಂಬ ಮೂರ್ಖತನವನ್ನೂ ಹಬ್ಬಿಸಿದ್ದಾರೆ. ಪ್ರಾಣಾಯಾಮ, ಧ್ಯಾನ, ಮುಂತಾದುವೆಲ್ಲಾ ಶರೀರ ಮತ್ತು ಮನಸ್ಸುಗಳನ್ನು ಶಾಂತವಾಗಿರಿಸಿಕೊಳ್ಳಲು ಇರುವ ಸಾಧನಗಳು. ಮನಸ್ಸು ಮತ್ತು ಇಂದ್ರಿಯಗಳು ಹೊರಹೋಗಿ ನೂರಾರು ಸಂಗತಿಗಳನ್ನು ಗ್ರಹಿಸುವ ಬದಲಾಗಿ ಮನಸ್ಸು ಅಂತರ್ಮುಖಿಯಾಗುವುದು ಯೋಗ. ಇಂತಹ ಮನಃಸ್ಥಿತಿಯು ಎಲ್ಲರಿಗೂ ಆಪ್ತವೇ. ಆದರೆ ನ್ಯೂ ಯಾರ್ಕ್ ಟೈಂಸ್ ಸ್ಕ್ವೇರ್‌ನಲ್ಲಿ ಅದನ್ನು ಪಡೆದುಕೊಳ್ಳಲಾದೀತೆ? ಅದೇಕೆ ನಮ್ಮ ದೇಶ ಇಷ್ಟು ಅವಾಂತರ ಮಾಡಬೇಕಿತ್ತು? ಎಲ್ಲ ದೇಶಗಳಲ್ಲೂ ಶರೀರ ಮತ್ತು ಮನಸ್ಸುಗಳಿಗೆ ಸುಖ ದೊರಕಿಸಿಕೊಳ್ಳಲು ವಿವಿಧ ಮಾರ್ಗಗಳನ್ನು ಕಂಡುಕೊಂಡಿದ್ದಾರೆ. ಯೋಗವೂ ಅಂತಹ ಒಂದು ಉತ್ತಮ ಸಾಧನ, ಅಷ್ಟೆ. ಅದು ನಮ್ಮ ದೇಶದ ಯಾಜಮಾನ್ಯಕ್ಕೆ ಒಳಗಾಗಿಲ್ಲ. ಬೌದ್ಧ ಧರ್ಮ ದಲ್ಲಿಯೂ ಧ್ಯಾನವಿದೆ. ಅದನ್ನು ಝಾನ ಎನ್ನುತ್ತಾರೆ. ಚೀಣಿ ಭಾಷೆಯಲ್ಲಿ ಅದು ಚಾನ್ ಆಗಿದೆ ಮತ್ತು ಜಪಾನಿ ಭಾಷೆಯಲ್ಲಿ ಝೆನ್ ಆಗಿದೆ. ಆದಿತ್ಯನಾಥನಂಥವರು ತಿಳಿಯಬೇಕಾದ ಮೂಲಭೂತ ಅಂಶವೊಂದಿದೆ: ಯೋಗವು ಮನಸ್ಸಿನ ಸಮತೋಲನವನ್ನು ಕಲಿಸುತ್ತದೆ, ವ್ಯಗ್ರತೆಯನ್ನಲ್ಲ; ಸಹನೆಯನ್ನು ಕಲಿಸುತ್ತದೆ, ಕ್ರೋಧವನ್ನಲ್ಲ; ಶಾಂತಚಿತ್ತವನ್ನು ಅಪೇಕ್ಷಿಸುತ್ತದೆ, ಸಮುದ್ರಕ್ಕೆ ಹಾರಿ ಸಾಯಿ ಎಂಬ ಉದ್ಧಟತನವನ್ನಲ್ಲ.

---

*(ಈ ತಿಂಗಳು : ೩ನೇ ಪುಟದಿಂದ)*

ಖರೀದಿಸುವ ಮಹಾಮೇಧಾವಿಗಳು ನಾವು. ಕಾಸಿಗೊಂದು ಮತ್ತು ಕೊಸರಿಗೆ ಎರಡು ಇಂಜಿನಿಯರುಗಳನ್ನು ತಯಾರಿಸುವ ದೇಶದಲ್ಲಿ ತಾಂತ್ರಿಕ ಕೌಶಲ್ಯವಿಲ್ಲವೆ? ಮಂಗಳ ಗ್ರಹಕ್ಕೆ ಯಾನ ರವಾನಿಸುವ ದೇಶದಲ್ಲಿ ಅಷ್ಟುಮಟ್ಟಿನ ಕೌಶಲ್ಯ ಇಲ್ಲವೆಂದರೆ ತಲೆ ಚಚ್ಚಿಕೊಳ್ಳಬೇಕು, ಅಷ್ಟೆ. ಏಕೆಂದರೆ ಬೇರೆಯವರ ತಲೆ ಚಚ್ಚಲು ಬರುವುದಿಲ್ಲವಲ್ಲ, ಅದಕ್ಕೆ. ಆಫ್ರಿಕಾ ದೇಶಗಳಿಗೆ ತಾಂತ್ರಿಕ ಕೌಶಲ್ಯ ಒದಗಿಸುವ ದೇಶವು ಉಕ್ಕನ್ನು "ಭಾರತದಲ್ಲೇ ಮಾಡಿ" ಎಂದು ಯಾರನ್ನೂ ಅಂಗಲಾಚಬೇಕಾಗಿಲ್ಲ. ಇರುವ ಹಣದಿಂದ ಅಗತ್ಯವಾದ ಯಂತ್ರಗಳನ್ನು ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಕೊಂಡರೆ ಮುಗಿಯಿತು. ದುಡಿಯುವ ಕೈಗಳು ಉದ್ಯೋಗವಿಲ್ಲದೆ ಸೊರಗುತ್ತಿವೆ, ಇಂಜಿನಿಯರುಗಳು ಮನೆಪಾಠ ಹೇಳಿ ಆದಾಯ ಗಳಿಸುತ್ತಿದ್ದಾರೆ ಮತ್ತು ವಿದೇಶಿ ವಿನಿಮಯ ಬೇಕಾದಷ್ಟು ಬಿದ್ದಿದೆ. ಅವನ್ನು ಸಂಘಟಿಸಿ ತೊಡಗಿಸಿದರೆ ಆಯಿತು. ಆದರೆ ಅದನ್ನು ಮಾಡುವ ಯೋಚನೆ ಇಲ್ಲ, ಯೋಜನೆಯೂ ಇಲ್ಲ. ಯಾರೋ ಹಣ ತಂದು ಹೂಡಿ, ಏನನ್ನೋ ಮಾಡಿ ಹೊರದೇಶಗಳಿಗೆ ಮಾರಬೇಕು. ಅಷ್ಟೇ ನಮ್ಮ ಯೋಜನೆ! ಅಂತಹ ದೇಶವಿರೋಧಿ ಯೋಜನೆಗಳ ಗಾಳಿಪಟ ಹಾರಿಸುವವರು ನೆಹರು ಪರಂಪರೆಯನ್ನು ಲೇವಡಿ ಮಾಡುತ್ತಾರೆ, ಸಾರ್ವಜನಿಕ ಉದ್ದಿಮೆಗಳನ್ನು ಖಂಡಿಸಿ ನುಚ್ಚುನೂರು ಮಾಡುತ್ತಾರೆ, ಮಾಧ್ಯಮಗಳು ಅದಕ್ಕೆ ಭೇಷ್, ಭೇಷ್ ಅನ್ನುತ್ತವೆ. ಆದರೆ ದುಡಿಯುವ ಜನರಿಗೆ ಇದರ ಹೊಲಸು ಏನೆಂದು ತಿಳಿಯಬೇಡವೆ? ದುಡಿಯುವ ಜನರಿಗೆ ಅನ್ವಯವಾಗುವ ಕಾನೂನನ್ನು ಬೆಂಕಿಗೆ ಹಾಕಿ 'ಭಾರತದಲ್ಲಿ ಮಾಡಿ' ಎಂದು ಗೋಗರೆಯುವ ಸ್ಥಿತಿ ನಮ್ಮದು. ಸ್ವಾಮಿ, ಭಾರತದಲ್ಲಿ ಮಾಡಿ, ಅದಕ್ಕೆ ವಿರೋಧವಿಲ್ಲ; ಆದರೆ ಪ್ರಜ್ಞೆ ಬೆಳೆಸಿಕೊಳ್ಳಿ, "ಭಾರತದವರಿಗಾಗಿ ಮಾಡಬೇಕು" ಎಂದು. ಅದು ಅಭಿವೃದ್ಧಿಯ ಹಾದಿ ಮತ್ತು ಈಗ ವಿಪರೀತ ಪ್ರಚಾರಕ್ಕೆ ಬರುತ್ತಿರುವುದು ವಿನಾಶದ ಹಾದಿ. ಅದು ನಮ್ಮ ಆಯ್ಕೆಯಲ್ಲ.

✴ ✴ ✴

ಅನಧಿಕೃತ ಕೇಂದ್ರ ಸರ್ಕಾರವಾಗಿ ರಾಷ್ಟ್ರೀಯ ಸ್ವಯಂಸೇವಕ ಸಂಘವು ತನ್ನ ಸ್ವಯಂ ಸೇವೆಯನ್ನು ಚೆನ್ನಾಗಿಯೇ ಮಾಡಿಕೊಳ್ಳುತ್ತಿದೆ. ಸಂಜಯ ಗಾಂಧಿಯನ್ನು ಮೀರಿಸಿದ ಸಂವಿಧಾನೇತರ ಅಧಿಕಾರ ಕೇಂದ್ರವಾಗಿ ಆರೆಸ್ಸೆಸ್ ತನ್ನ ಶಿಶುವಾದ ಮೋದಿ ಸರ್ಕಾರಕ್ಕೆ ನಿರ್ದೇಶನ ಮತ್ತು ದ್ರಾಕ್ಷಾಸವವನ್ನು ಕಾಲದಿಂದ ಕಾಲಕ್ಕೆ ಕೊಡುತ್ತಿರುತ್ತದೆ. ಎರಡು ತಿಂಗಳ ಹಿಂದೆ ಮೋಹನ ಭಾಗವತರು ಹೇಳಿದ್ದರು, "ಡಾ॥ ಅಂಬೇಡ್ಕರ್ ಆರೆಸ್ಸೆಸ್ ಅನ್ನು ಮೆಚ್ಚಿಕೊಂಡಿದ್ದರು" ಎಂದು. ಬಾಬಾಸಾಹೇಬರ ಅನುಯಾಯಿಗಳು ಆರೆಸ್ಸೆಸ್ ಮತ್ತು ಮೋದಿ ಸರ್ಕಾರ ವನ್ನು ಟೀಕಿಸಬಾರದು, ಬದಲಾಗಿ ಬೆಂಬಲಿಸಬೇಕು, ಎಂಬ ಸಂದೇಶ ಅದು. ಆ ವರ್ಗವನ್ನು ತನ್ನ ತೆಕ್ಕೆಗೆ ಸೆಳೆದು ಕೊಳ್ಳಲು ಅದು ಒಳ್ಳೆಯ ಮೀನಿನ ಬಲೆ. ಅಠಾವಲೆ, ರಾಮ ವಿಲಾಸ ಪಾಸ್ವಾನ್, ಮುಂತಾದವರು ಮಾಡಿರುವಂತೆ ಎಲ್ಲ ದಲಿತರೂ ಮಾಡಿದರೆ "ಅವರಿಗೆ ಒಳ್ಳೆಯದಾಗುತ್ತದೆ" ಎಂಬ ಆಮಿಷವೂ ಅದರಲ್ಲಿದೆ. ಭಾಗವತರ ಆ ಹೇಳಿಕೆಯು ಅಂಬೇಡ್ಕರ್ ಅವರನ್ನು ಮತಾಂತರಕ್ಕೆ ಗುರಿಪಡಿಸುವ ಪ್ರಯತ್ನವೇ ಸರಿ. ಅದರ ನಂತರ ಈಗ ಭಾಗವತರ ಮುಖವಾಣಿಯಾದ 'ಆರ್ಗನೈಸರ್' ಪತ್ರಿಕೆ ಹೇಳಿದೆ, "ಡಾ॥ ಅಂಬೇಡ್ಕರ್ ಅವರು ಕಮ್ಯುನಿಸ್ಟರನ್ನು ತೀವ್ರವಾಗಿ ದ್ವೇಷಿಸುತ್ತಿದ್ದರು" ಎಂದು. ಕಮ್ಯುನಿಸ್ಟ್ ಪಕ್ಷಗಳ ಜೊತೆ ಸಖ್ಯ ಬೆಳೆಸಿಕೊಳ್ಳ ಬಾರದೆಂಬ ಸಂದೇಶವನ್ನು ಭಾಗವತರ "ಸಾಂಸ್ಕೃತಿಕ ರಾಜಕೀಯ ಪಕ್ಷವಾದ ಆರೆಸ್ಸೆಸ್" ದಲಿತರಿಗೆ ನೀಡುತ್ತಿದೆ ಎಂಬುದು ಇದರ ತಾತ್ಪರ್ಯ. ಅಂಬೇಡ್ಕರ್‌ವಾದಿಗಳು ಭಾಗವತರ ಜೊತೆ ಸೇರುತ್ತಾರೋ ಅಥವಾ ಕಮ್ಯುನಿಸ್ಟ ರೊಡನೆ ರಾಜಕೀಯ ಸಂಬಂಧ ಬೆಳೆಸಿಕೊಳ್ಳುತ್ತಾರೋ ಅದು ಬೇರೆ ವಿಷಯ. ಅಂಬೇಡ್ಕರ್ ಅವರು ಆರೆಸ್ಸೆಸ್ ಪತ್ರಿಕೆಗೆ ತಿಳಿದಿರುವುದರ ಸಾವಿರಪಟ್ಟು ಜಾಸ್ತಿ ಅಂಬೇಡ್ಕರ್ ವಾದಿಗಳಿಗೆ ಗೊತ್ತು. ಮೂಲತಃ 'ಆರ್ಗನೈಸರ್' ಗ್ರಹಿಕೆಯಲ್ಲಿ ಕೃತ್ರಿಮತೆ ಇದೆ. ಡಾ॥ ಬಾಬಾಸಾಹೇಬ ಅಂಬೇಡ್ಕರ್ ಅವರು ಯಾರನ್ನೂ ದ್ವೇಷಿಸಲಿಲ್ಲ. ದ್ವೇಷವು ಆರೆಸ್ಸೆಸ್‌ನ ಸಾಧನವಿರಬಹುದು, ಆದರೆ ಅಂಬೇಡ್ಕರ್ ಅವರ ಮನಸ್ಸು ದ್ವೇಷಿಸುವ ಮನಸ್ಸಾಗಿರಲಿಲ್ಲ. ಪ್ರೀತಿಸುವ ಮತ್ತು ಪರಿವರ್ತಿಸುವ ವ್ಯಕ್ತಿತ್ವ ಅವರದು. ಹಲವಾರು ವಿಚಾರಗಳನ್ನು ಮತ್ತು ಆಚರಣೆಗಳನ್ನು ಕಟುವಾಗಿ ವಿಮರ್ಶಿಸುತ್ತಿದ್ದ ಬಾಬಾಸಾಹೇಬ್ ವೈಯಕ್ತಿಕ ದ್ವೇಷವನ್ನು ಎಂದೂ ಬೆಳೆಸಿಕೊಳ್ಳಲಿಲ್ಲ. ಕಮ್ಯುನಿಸ್ಟರ ಬಗೆಗೆ ಅವರ ಅಭಿಪ್ರಾಯ ಏನಾಗಿತ್ತೆಂದು ತಿಳಿಯಲು ಅವರದೇ ಮಾತು ಮತ್ತು ಕ್ರಿಯೆಗಳನ್ನು ತಿಳಿದುಕೊಳ್ಳಬೇಕು. ಅದಕ್ಕೆ ಒಂದು ಉದ್ಧರಣವನ್ನು ಕೊಟ್ಟರೆ ಸಾಕು. ಕೊಂಕಣದಲ್ಲಿ ಖೋತಿ ಪದ್ಧತಿಯ ವಿರುದ್ಧ ವ್ಯಾಪಕ ಹೋರಾಟ ನಡೆಯುತ್ತಿದ್ದ ಕಾಲ ಅದು. ಭಾರಿ ಭೂಮಾಲೀಕರ ದೌರ್ಜನ್ಯಗಳನ್ನು ಧಿಕ್ಕರಿಸಿ ರೈತರ ಮತ್ತು ಕೃಷಿಕಾರ್ಮಿಕರ ವಿಮೋಚನೆಗಾಗಿ

ಡಾ॥ ಅಂಬೇಡ್ಕರ್ ಅವರ ನೇತೃತ್ವದಲ್ಲಿ ನಡೆದ ಹೋರಾಟ ಅದು. ಅದರಲ್ಲಿ ಎಸ್. ಜಿ. ಸರ್ದೇಸಾಯಿ, ಎಸ್. ಎ. ಡಾಂಗೆ, ಶಾಮರಾವ್ ಪರುಲೇಕರ್ ಮುಂತಾದವರನ್ನೆಲ್ಲಾ ಅಂಬೇಡ್ಕರ್ ಅವರು ತೊಡಗಿಸಿ ಕೊಂಡಿದ್ದರು. ಭಾಯಿ ಚಿತ್ರೆ ಹೋರಾಟದ ಸಮಿತಿಯ ಪ್ರಧಾನ ಕಾರ್ಯದರ್ಶಿ. ೧೯೩೮ರ ಜನವರಿ ೧೪ರಂದು ಮುಂಬೈನಲ್ಲಿ ಒಂದು ಬೃಹತ್ ಪ್ರತಿಭಟನಾ ಸಭೆಯನ್ನು ಆಯೋಜಿಸಲಾಗಿತ್ತು. ಸಭೆಯ ಅಧ್ಯಕ್ಷರು ಡಾ॥ ಅಂಬೇಡ್ಕರ್. ಆಗ್ಗೆ ಇಂಡಿಪೆಂಡೆಂಟ್ ಲೇಬರ್ ಪಾರ್ಟಿಯ ಅಧ್ಯಕ್ಷರೂ ಸಹ ಡಾ॥ ಅಂಬೇಡ್ಕರ್ ಅವರೇ ಆಗಿದ್ದರು. ಅದರ ಸ್ಥಾಪಕರೂ ಅವರೇ. ಮುಂಬೈನ ಸಭೆಯಲ್ಲಿ ಕಮ್ಯುನಿಸ್ಟರು ಮತ್ತು ಕಮ್ಯುನಿಸ್ಟ್ ನಾಯಕರು ಅಧಿಕ ಸಂಖ್ಯೆಯಲ್ಲಿ ಪಾಲ್ಗೊಂಡಿದ್ದರು. ಅಂದಿನ ಸಭೆಯಲ್ಲಿ ಡಾ॥ ಬಾಬಾಸಾಹೇಬ್ ಅಂಬೇಡ್ಕರ್ ಮಾಡಿದ ಭಾಷಣದ ಒಂದು ಭಾಗ ಹೀಗಿದೆ : "ಇಲ್ಲಿ ನನ್ನ ಅನೇಕ ಕಮ್ಯುನಿಸ್ಟ್ ಸ್ನೇಹಿತ ರಿದ್ದಾರೆ. ಅವರಿಗೆ ಒಂದು ಮಾತು ಹೇಳಲಿಚ್ಛಿಸುತ್ತೇನೆ. ಕಮ್ಯುನಿಸ್ಟ್ ಸಿದ್ಧಾಂತವನ್ನು ಕುರಿತು ಹೇಳುವುದಾದರೆ ನಾನು ಕಮ್ಯುನಿಸ್ಟ್ ಸಿದ್ಧಾಂತದ ಗ್ರಂಥಗಳನ್ನು ಈ ನನ್ನ ಸ್ನೇಹಿತರಿಗಿಂತ ಹೆಚ್ಚು ಓದಿಕೊಂಡಿದ್ದೇನೆ. ಅದನ್ನು ಆಳವಾಗಿ ಮತ್ತು ಆಸ್ಥೆಯಿಂದ ಅಧ್ಯಯನ ಮಾಡಿದ್ದೇನೆ. ಕಮ್ಯುನಿಸ್ಟ್ ಸಾಹಿತ್ಯದಿಂದ ತಿಳಿಯುವುದೇನೆಂದರೆ ಅದರ ತತ್ವವು ಬಹಳ ಆಕರ್ಷಣೀಯ ಎಂದು; ಅದನ್ನು ಎಷ್ಟರಮಟ್ಟಿಗೆ ಅನ್ವಯ ಮಾಡಿಕೊಳ್ಳುತ್ತೇವೆಂಬುದಷ್ಟೇ ಮುಖ್ಯವಾದ ಪ್ರಶ್ನೆ. ನಾವು ಕಮ್ಯುನಿಸ್ಟ್ ಸಿದ್ಧಾಂತದ ರೀತ್ಯಾ ಕಾರ್ಯಪ್ರವೃತ್ತರಾದರೆ ಇಂಡಿಯಾದಲ್ಲಿ ಅಗಾಧ ಗೆಲುವು ಸಾಧಿಸಬಹುದು. ಬೇರೆ ಕಮ್ಯುನಿಸ್ಟ್ ದೇಶಗಳು ತೆಗೆದುಕೊಂಡಿದ್ದಕ್ಕಿಂತ ಕಡಿಮೆ ಸಮಯದಲ್ಲಿ ಮತ್ತು ಅವರ ಶ್ರಮಕ್ಕಿಂತಲೂ ಕಡಿಮೆ ಶ್ರಮದಿಂದ ಅವರ ಸಾಧನೆಗಳಿಗಿಂತಲೂ ಹೆಚ್ಚಿನ ಸಾಧನೆ ನಮ್ಮದಾಗಲು ಸಾಧ್ಯ. ಆದ್ದರಿಂದಲೇ ದುಡಿಯುವ ಜನರ ಹೋರಾಟ ಗಳಿಗೆ ಕಮ್ಯುನಿಸ್ಟ್ ಸಿದ್ಧಾಂತವು ಆಪ್ತವಾಗಿರುವುದು. ನನ್ನ ಖಚಿತ ಅಭಿಪ್ರಾಯ ಇದು : ನಮ್ಮ ಸ್ವತಂತ್ರ ಮತ್ತು ಸಂಘಟಿತ ಚಳುವಳಿಯು ಐಕ್ಯ ಹೋರಾಟಗಳನ್ನು ಹೆಚ್ಚಿಸಿಕೊಳ್ಳಬೇಕು. ನಮ್ಮ ಚಳುವಳಿಗಳಲ್ಲಿ ಯಾವ ಭಿನ್ನಮತಗಳೂ ಅಗತ್ಯವಿಲ್ಲ, ನಾವು ಜಂಟಿಯಾಗಿ ಸ್ಥೈರ್ಯದಿಂದ ಹೋರಾಡಲು ಸಿದ್ಧರಾಗಬೇಕು." (*The Struggle Against Khoti* by Chandrakant Adhikari, P. 126). ಈಗ ಹೇಳಿ, ಡಾ॥ ಅಂಬೇಡ್ಕರ್ ಅವರು ಕಮ್ಯುನಿಸ್ಟರನ್ನು ದ್ವೇಷಿಸು ತ್ತಿದ್ದರೆ, ಎಂದು. ಚರಿತ್ರೆಯನ್ನು ತಿರುಚುವುದರಲ್ಲಿ ಕುಖ್ಯಾತಿ ಹೊಂದಿರುವ ಆರೆಸ್ಸೆಸ್ ಡಾ॥ ಬಾಬಾಸಾಹೇಬ್ ಅಂಬೇಡ್ಕರ್ ಅವರ ವ್ಯಕ್ತಿತ್ವವನ್ನು ತಿರುಚಲು ಯತ್ನಿಸುವುದು ಯೋಗ್ಯವಲ್ಲ. ತಕ್ಷಣದ ರಾಜಕೀಯ ಲಾಭ ಪಡೆಯಲು ಗೌರವಾನ್ವಿತರೊಬ್ಬರ ಅಭಿಪ್ರಾಯ ಗಳನ್ನು ತಿರುಗುಮುರುಗು ಮಾಡಹೋಗುವುದು ಅಸಭ್ಯತೆಯ ಮತ್ತು ಕುಸಂಸ್ಕೃತಿಯ ಲಕ್ಷಣ.

✶ ✶ ✶

ಜಯಲಲಿತಾ ಅವರ ಮೊಕದ್ದಮೆಯನ್ನು ಸರ್ವೋಚ್ಚ ನ್ಯಾಯಾಲಯಕ್ಕೆ ಕೊಂಡೊಯ್ಯಲು ರಾಜ್ಯ ಸರ್ಕಾರವು ನಿರ್ಧರಿಸಿದೆಯೆಂದು ವರದಿಯಾಗಿದೆ. ಅದು ಪ್ರಶ್ನಾರ್ಹವಾದ ತೀರ್ಮಾನ. ಆಕೆಯ ವಿರುದ್ಧ ದೂರು ದಾಖಲಿಸಿದ್ದುದು ಕರ್ನಾಟಕದ ಸರ್ಕಾರವಲ್ಲ. ಸುಬ್ರಹ್ಮಣ್ಯ ಸ್ವಾಮಿ ಮತ್ತು ಕರುಣಾನಿಧಿಯವರ ಪಕ್ಷ ದೂರು ಕೊಟ್ಟಿದ್ದವರು. ಮೊಕದ್ದಮೆಯು ತೊಡಕುಗಳಿಲ್ಲದೆ ಜರುಗಬೇಕೆಂಬ ಉದ್ದೇಶದಿಂದ ಮೊಕದ್ದಮೆಯನ್ನು ಸರ್ವೋಚ್ಚ ನ್ಯಾಯಾಲಯವು ನಮ್ಮ ರಾಜ್ಯಕ್ಕೆ ವರ್ಗಾಯಿಸಿತ್ತು. ಮೊಕದ್ದಮೆಯು ಪೂರ್ಣಗೊಂಡಾದ ಮೇಲೆ ನಮಗೆ ಅದರಲ್ಲಿ ವಿಶೇಷ ಪಾತ್ರವೇನೂ ಇಲ್ಲ. ಬೇಕಾದರೆ ಸುಬ್ರಹ್ಮಣ್ಯ ಸ್ವಾಮಿ ಮತ್ತು ಕರುಣಾನಿಧಿ ಸರ್ವೋಚ್ಚ ನ್ಯಾಯಾಲಯಕ್ಕೆ ಹೋಗಲಿ. ನಮ್ಮ ರಾಜ್ಯವು ಕೂಡಲೆ ಬಿರುಸಿನಿಂದ ಕೈಗೆತ್ತಿಕೊಳ್ಳಬೇಕಾದ ಮೊಕದ್ದಮೆ ಗಳು ಬೇಕಾದಷ್ಟಿವೆ. ಸುಬ್ರಮಣ್ಯ ನಾಯಿಡು, ಬಿ. ಎಸ್. ಯಡಿಯೂರಪ್ಪ, ಮುಂತಾದವರ ವಿರುದ್ಧದ ಮೊಕದ್ದಮೆ ಗಳನ್ನು ನಡೆಸಿದರೆ ಸಾಕು. ಅವರ ಮೇಲಿನ ಆರೋಪ ಸಾಬೀತಾದರೆ ಅವರನ್ನು ಜೈಲಿಗೆ ಕಳಿಸುವುದು ನಮ್ಮ ರಾಜ್ಯದ ಜವಾಬ್ದಾರಿ. ಜಯಲಲಿತಾ ವಿರುದ್ಧ ಮತ್ತೆ ಮೊಕದ್ದಮೆ ನಡೆಸಿ ನಾಲ್ಕೈದು ಕೋಟಿ ರೂಪಾಯಿಗಳ ದುರ್ವ್ಯಯ ಮಾಡುವುದು ತೀರಾ ಅಸಂಬದ್ಧವಾದ್ದು.

✶ ✶ ✶

ಮೊಕದ್ದಮೆಗಳ ವಿಚಾರ ಬಂದಿರುವುದರಿಂದ ಸಿ. ಟಿ. ರವಿ ಎಂಬ ಭಾಜಪ ಶಾಸಕರ ಒಂದು ಹೇಳಿಕೆ ಯನ್ನು ಗಮನಿಸಬೇಕು. ರಾಜ್ಯ ಸಂಪುಟವು ಬಹಳ ಹಿಂದಿನ ಯಾವುದೋ ಮೊಕದ್ದಮೆಯೊಂದನ್ನು ರದ್ದುಗೊಳಿಸುವ ತೀರ್ಮಾನ ಕೈಗೊಂಡಿತು. ಅದಕ್ಕೆ ರವಿ ಹೇಳಿದರು, "ಆಪಾದಿತರಿಗೆ ಖುಲಾಸೆ ಭಾಗ್ಯ" ದೊರೆತಿದೆ, ಎಂದು. ಆಪಾದಿತರಲ್ಲಿ ವಿವಿಧ ಕೋಮುಗಳವರಿದ್ದರೆಂಬುದನ್ನು ಶ್ರೀ. ರವಿ ಗಣನೆಗೆ ತೆಗೆದುಕೊಳ್ಳಲಿಲ್ಲ, ಒಂದು ಕೋಮಿನವರಿಗೆ "ಭಾಗ್ಯ" ದಕ್ಕಿತೆಂದು ಅವರಿಗೆ ಅಸಮಾಧಾನ ಉಂಟಾಗಿದೆ. ಅದಕ್ಕೇ ಲೇವಡಿಯ ಮಾತಾಡಿದ್ದಾರೆ. ಹಾಗೆ ನೋಡಿದರೆ ನಿಜಕ್ಕೂ ಅಪಾರವಾದ "ಖುಲಾಸೆ ಭಾಗ್ಯ" ಲಭ್ಯವಾಗಿರುವುದು ಗುಜರಾತಿನ ಹತ್ಯಾಕಾಂಡದಲ್ಲಿ ಆಪಾದಿತರಾಗಿದ್ದವರಿಗೆ. ಅಮಿತ್ ಷಾ ಮುಂತಾದ ಮಂತ್ರಿಗಳು, ರಾಜಕೀಯ ಕಾರ್ಯಕರ್ತರು, ಪೊಲೀಸ್ ಅಧಿಕಾರಿಗಳು, ಹೀಗೆ ಹತ್ತಾರು ಆಪಾದಿತರನ್ನು ಸಿ.ಬಿ.ಐ. ನ್ಯಾಯಾಲಯವು ತುರ್ತಾಗಿ "ನಿರಪರಾಧಿಗಳು" ಎಂದು ಘೋಷಿಸಿಬಿಟ್ಟಿತು. ದೆಹಲಿಯ ದರ್ಬಾರಿನಲ್ಲಿ ಯಾರು ನಾಯಕರೆಂಬುದನ್ನು ತಿಳಿದ ಕೂಡಲೆ ಮೊಕದ್ದಮೆಗಳು ಮುಗಿದುಹೋದವು. ಯಾರಿಗೆ ದೊರಕಿತು "ಖುಲಾಸೆ ಭಾಗ್ಯ"ಎಂಬುದು ಸ್ಪಷ್ಟವಾಗಿದೆ.

✶ ✶ ✶

ಪರಿಸರ ನಿಯಮಗಳನ್ನು ಉಲ್ಲಂಘಿಸಿದ ಆರೋಪ ಕ್ಕೊಳಗಾಗಿರುವ ಬೆಂಗಳೂರಿನ 'ಮಂತ್ರಿ ಟೆಕ್‌ಜೋನ್ ಪ್ರೈ. ಲಿ.' ಹಾಗೂ 'ಕೋರ್‌ಮೈಂಡ್ ಸಾಫ್ಟ್‌ವೇರ್ ಅಂಡ್ ಸರ್ವಿಸಸ್ ಪ್ರೈ. ಲಿ.' ಕಟ್ಟಡ ನಿರ್ಮಾಣ ಸಂಸ್ಥೆಗಳಿಗೆ (ಮಂತ್ರಿ ಎಂಬ ಹೆಸರಿನ ವಿಶಿಷ್ಟ ಪ್ರಭಾವ ದಿಂದಲೋ ಏನೋ) ರಾಷ್ಟ್ರೀಯ ಹಸಿರು ನ್ಯಾಯಮಂಡಲಿಯು ವಿಧಿಸಿದ್ದ ೧೯೩.೮೫ ಕೋಟಿ ರೂಪಾಯಿಗಳ ದಂಡವನ್ನು ಸರ್ವೋಚ್ಚ ನ್ಯಾಯಾಲಯವು "ಮತ್ತೆ ಪರಿಶೀಲಿಸಬೇಕೆಂದು" ತಿಳಿಸಿದೆ. ಕಂಪನಿಯ ಪರ ವಾದ ಮಾಡಿದ್ದು ಕಪಿಲ್ ಸಿಬಲ್ ಎಂಬ ಧೀಮಂತ. ಅಂದರೆ, ಮಂತ್ರಿ ಕಂಪನಿ ಯಾವ ನಿಯಮವನ್ನು ಉಲ್ಲಂಘಿಸಿದರೂ ಅದು "ಮರುಪರಿಶೀಲನೆ"ಗೆ ಯೋಗ್ಯವಾದ್ದು ಎಂದರ್ಥ. ಮಂತ್ರಿ ಕಂಪನಿಗೆ ಯಾವತ್ತೂ "ಖುಲಾಸೆಯ ಭಾಗ್ಯ" ಇದ್ದೇ ಇರುತ್ತದೆ ! ಮಂತ್ರಿ ಎಂದೂ ಕಂತ್ರಿ ಆಗುವುದಿಲ್ಲ ವೆಂಬುದು ಒಂದು ಪೂರ್ವಗ್ರಹ ಎಂದು ತೋರುತ್ತದೆ.

✶ ✶ ✶

ಹಗರಣಗಳ ಸೊಲ್ಲಿಲ್ಲದೆ ವರ್ಷ ಪೂರೈಸಿತು ಎಂದು ಹೇಳಿಕೊಳ್ಳುತ್ತಿರುವಾಗಲೆ ತಲೆತಪ್ಪಿಸಿಕೊಂಡಿರುವ ಆರೋಪಿಯೊಬ್ಬನಿಗೆ "ಮಾನವೀಯತೆ" ತೋರಲು ಹೋಗಿ ಮೋದಿ ಸರಕಾರದ ಹಿರಿಯ ಸಚಿವರೊಬ್ಬರು ಮಾನ ಕಳೆದುಕೊಂಡಿರುವ ಪ್ರಕರಣ ಬಯಲಾಗಿದೆ. ಹಗರಣದಲ್ಲಿ ಸಿಕ್ಕಿ ಹಾಕಿಕೊಂಡಿರುವುದು ವಿದೇಶಾಂಗ ಸಚಿವೆ ಸುಷ್ಮಾ ಸ್ವರಾಜ್. ಆರೋಪಿ ಬಹು ಕೋಟಿ ಹಗರಣದ ಕ್ರಿಕೆಟ್ ಜೂಜುಕೋರ ಲಲಿತ್ ಮೋದಿ. ಕ್ರಿಕೆಟ್ ಕ್ರೀಡಾಲೋಕದಲ್ಲಿ ಇಂದು ಆಟಗಾರರನ್ನು ಗುಲಾಮರಂತೆ ಹರಾಜು ಹಾಕುವ, ಅವರನ್ನು ಕಲೆ ಹಾಕಿಕೊಂಡು ಕೋಟಿಗಟ್ಟಳೆ ಹಣ ಲಪಟಾಯಿಸುವ ಇಂಡಿಯನ್ ಪ್ರೀಮಿಯರ್ ಲೀಗ್ ಎಂಬ ಪಂದ್ಯ ಗಳನ್ನು ಹುಟ್ಟುಹಾಕಿ ಮಂಕುಬೂದಿ ಎರಚಿದ ಭೂಪ ಈ ಲಲಿತ್ ಮೋದಿ. ಪ್ರೀಮಿಯರ್ ಲೀಗ್ ಎಂಬ ಈ ಜೂಜುಕಟ್ಟೆ ಬೆಟ್ಟಿಂಗ್, ಮ್ಯಾಚ್ ಫಿಕ್ಸಿಂಗ್, ತೆರಿಗೆ ವಂಚನೆ, ಮನರಂಜನೆಯ ಹೆಸರಿನಲ್ಲಿ ಕೆಟ್ಟ ಕುಣಿತ, ಮೋಸ ಎಲ್ಲಕ್ಕೂ ಹೆಸರುವಾಸಿ ಈಗಲೂ. ಈತ ಕ್ರಿಕೆಟ್ ಲೋಕದಲ್ಲಿ 'ಟ್ವೆಂಟಿ ಟ್ವೆಂಟಿ' ತಂದು ಹಾಕಿದ ೪೨೦. ಇದರ ಹಿಂದಿರುವವರು ಭಾರಿ ಕುಳಗಳೇ – ಸಿನಿಮಾ ತಾರೆ ಶಾರುಖ್ ಖಾನ್, ಬ್ಯಾಂಕುಗಳಿಗೆ ಬಹುಕೋಟಿ ನಾಮ ಹಾಕಿರುವ ವಿಜಯ ಮಲ್ಯ (ಈತ ಬೆಂಗಳೂರಿನ ರಾಯಲ್ ಚಾಲೆಂಜರ್ಸ್ ಎಂಬ ಟೀಮಿನ ಒಡೆಯ), ಸಿನಿಮಾ ನಟಿ ಪ್ರೀತಿ ಜಿಂಟಾ, ಬಿಸಿಸಿಐ ಮಾಜಿ ಅಧ್ಯಕ್ಷ ಶ್ರೀನಿವಾಸನ್ ಕಾಂಗ್ರೆಸ್ ಎಂಪಿ ಶಶಿ ತರೂರ್ ಆತನ ಪತ್ನಿ ಸುನಂದಾ ಪುಷ್ಕರ್ ಹೀಗೆ ಎಲ್ಲ ಇದ್ದಾರೆ. ಸಾವಿರಾರು ಕೋಟಿ ರೂಪಾಯಿಗಳನ್ನು ವಂಚಿಸಿ, ತೆರಿಗೆ ಪಾವತಿಸದೆ ಪರದೇಶಕ್ಕೆ ಪರಾರಿಯಾದ ಲಲಿತ್ ಮೋದಿ ೨೦೧೦ರಿಂದ ಇಂಗ್ಲೆಂಡಿನಲ್ಲಿ ತಲೆ ತಪ್ಪಿಸಿಕೊಂಡು ತಿರುಗಾಡಿಕೊಂಡಿದ್ದಾನೆ. ಇಂಥ ವ್ಯಕ್ತಿಗೆ ಸುಷ್ಮಾ ಸ್ವರಾಜ್ ನೆರವು ನೀಡಿದ್ದಾರೆ ಬ್ರಿಟಿಷ್ ಸರಕಾರದಿಂದ ಪೋರ್ಚುಗಲ್‌ಗೆ ಹೋಗಲು ಪರವಾನಗಿ ಕೊಡಿಸುವುದಕ್ಕೆ. 'ಮಾನವೀಯತೆ' ತೋರಿದ್ದಕ್ಕೆ ನೀಡಿರುವ ಕಾರಣ ಮೋದಿ ಪತ್ನಿಗೆ ಕ್ಯಾನ್ಸರ್ ಶಸ್ತ್ರಚಿಕಿತ್ಸೆ ಪೋರ್ಚುಗಲ್‌ನಲ್ಲಿ ! ಇದರ ಸತ್ಯಾಸತ್ಯತೆ ಗೊತ್ತಾಗುವುದು ನಿಷ್ಪಕ್ಷಪಾತ ತನಿಖೆ ನಡೆಸಿದಾಗಲೆ.

ಪೇಚಿಗೆ ಸಿಕ್ಕಿಕೊಂಡು ಪ್ರತಿಪಕ್ಷಗಳಿಂದ ರಾಜೀನಾಮೆಗೆ ಒತ್ತಾಯ ಎದುರಿಸುತ್ತಿರುವ ಸುಷ್ಮಾ ಸ್ವರಾಜ್‌ಗೆ ಬೆಂಬಲವಾಗಿ ಆರೆಸ್ಸೆಸ್, ಭಾಜಪ, ಮೋದಿ

ಸರಕಾರ ಕಂಕಣ ಕಟ್ಟಿ ಕದನಕ್ಕೆ ಸಿದ್ಧವಾಗಿ ನಿಂತಿವೆ. ಆರೆಸ್ಸೆಸ್ ನಾಯಕರು ಬೊಫೋರ್ಸ್ ಹಗರಣದ ಮುಸುಕಿನಲ್ಲಿ ಮತ್ತು ಭೋಪಾಲ್ ದುರಂತದ ಆಂಡರ್ಸನ್ ಮತ್ತು ಕ್ವಾಟ್ರೋಚಿ ಹೆಸರು ಪ್ರಸ್ತಾಪ ಮಾಡಿ ಮೋದಿ ಪ್ರಕರಣವನ್ನು ಸಮರ್ಥಿಸಿಕೊಂಡಿದ್ದಾರೆ. ಕಾಂಗ್ರೆಸ್‌ನವರು ಮಾಡಿದ ತಪ್ಪನ್ನೇ ಭಾಜಪ ಮಾಡಬೇಕೆ ? ಅದೇನೇ ಇರಲಿ ಲಲಿತ್ ಮೋದಿ ಸ್ವರಾಜ್ ಕುಟುಂಬದ ನಂಟು ಇಂದು ನಿನ್ನೆಯದಲ್ಲ, ಎರಡು ದಶಕಗಳಿಗೂ ಹೆಚ್ಚಿನದು. ಸುಷ್ಮಾರ ಪತಿ ಸ್ವರಾಜ್ ಕೌಶಲ್ ಹಿಂದಿನಿಂದಲೂ ಮೋದಿಗೆ ವಕೀಲರು. ಮಗಳು ಬಾನ್ಸುರಿ ಸ್ವರಾಜ್ ದೆಹಲಿ ನ್ಯಾಯಾಲಯದಲ್ಲಿ ಮೋದಿ ಪರ ವಾದಿಸುತ್ತಿರುವ ವಕೀಲೆ. ಹಾಗಿರುವಾಗ 'ಮಾನವೀಯತೆ' ಮೆರೆಯುವುದೆಂತು ? ಎಲ್ಲ ವ್ಯವಹಾರ, ಸಹಭಾಗಿತ್ವ ಅಲ್ಲವೆ ? ಇಷ್ಟೆಲ್ಲಾ ಹಿನ್ನೆಲೆ ಇದ್ದರೂ ಸಚಿವ ಸ್ಥಾನದಲ್ಲಿ, ಅದೂ ವಿದೇಶಾಂಗ ಖಾತೆಯಲ್ಲಿ ಮುಂದುವರಿಯುವುದು ಖಂಡಿತ ಸಮರ್ಥನೀಯವಲ್ಲ. ಕೂಡಲೆ ರಾಜೀನಾಮೆ ನೀಡಿದ್ದರೆ ಸರಿಯಾಗುತ್ತಿತ್ತು. ಈಗ ಸುಷ್ಮಾ ಜೊತೆಗೆ ರಾಜಾಸ್ಥಾನದ ಮುಖ್ಯಮಂತ್ರಿ ಇದ್ದಾರೆ. ಅವರಿಗೂ ಅವರ ಮಗನಿಗೂ ನಿಕಟಸಂಬಂಧ. ಕೋಟಿ ಗಟ್ಟಲೆ ವ್ಯವಹಾರ. ಭಾಜಪ ಈಕೆಯ ಬೆಂಬಲಕ್ಕೂ ನಿಂತಿದೆ. ಪ್ರಧಾನಿ ಮೋದಿ ಮಾತ್ರ ಈ ಬಗ್ಗೆ ಮೌನ. ಯಾವ ಮೋದಿಯಾದರೇನು ವ್ಯವಹಾರ ವ್ಯವಹಾರವೆ ತಾನೆ.

✷ ✷ ✷

ಅಧಿಕಾರಕ್ಕೆ ಬಂದಾಗಿನಿಂದ ಭಾಜಪ ಸರಕಾರ ದೇಶದ ಎಲ್ಲ ಸ್ವಾಯತ ಸಂಸ್ಥೆಗಳನ್ನೂ ಕೇಸರೀಕರಣ ಮಾಡಲು ಹೊರಟಿದೆ. ಹಿಂದೆ ಎನ್‌ಡಿಎ ಸರಕಾರ ಇದ್ದಾಗಲೂ ಅದು ನಡೆದಿತ್ತು. ಆದರೆ ಈಗ ಮೋದಿ – ಅಮಿತ್ ಷಾ ಜೋಡಿ ಯಾವುದೇ ಮುಲಾಜಿಲ್ಲದೆ ದೇಶದ ಪ್ರಮುಖ ಸಂಸ್ಥೆಗಳ ಮೇಲೆ ತಮಗೆ ಬೇಕಾದವರನ್ನು ಹೊರಿಸುತ್ತಿದೆ. ಅರ್ಹತೆ ಇದೆಯೇ ಇಲ್ಲವೆ ಎನ್ನುವುದನ್ನೂ ಲೆಕ್ಕಿಸದೆ ಭಾಜಪಗೆ ಹತ್ತಿರ ಇರುವವರೋ, ಇಲ್ಲ ಭಾಜಪ ಸದಸ್ಯರನ್ನೋ ನೇಮಕ ಮಾಡುತ್ತಿದೆ. ರಾಜಕೀಯವಾಗಿ ರಾಜ್ಯಗಳಿಗೆ ರಾಜ್ಯಪಾಲರನ್ನು ತಂದು ಕೂರಿಸುವಾಗ ತಮಗೆ ಬೇಕಾದವರನ್ನು ಆಯ್ಕೆ ಮಾಡುವುದು ನಡೆದು ಬಂದಿದೆ. ರಾಜ್ಯಪಾಲರ ಹುದ್ದೆ ಬೇಕೆ ಬೇಡವೆ ಎನ್ನುವುದು ಈಗಲೂ ಚರ್ಚೆಯಾಗುತ್ತಿದೆ. ಯಾವುದೇ ಅಧಿಕಾರ ವಿಲ್ಲದ ಆಲಂಕಾರಿಕವಾಗಿರುವ ಈ ಹುದ್ದೆ ರಾಜ್ಯಗಳಿಗೆ ದುಬಾರಿ. ಈಚೆಗೆ ರಾಜ್ಯಪಾಲರ ಅರಮನೆಯ ಶೃಂಗಾರಕ್ಕೆ, ಅವರ ಪ್ರಯಾಣಕ್ಕೆ ವಿಪರೀತ ದುಂದುವೆಚ್ಚವಾಗುತ್ತಿದೆ. ನಮ್ಮ ರಾಜ್ಯಪಾಲರು ಅದಕ್ಕೆ ಒಂದು ಉದಾಹರಣೆ. ಅವರ ಹಾರಾಟಕ್ಕೆ ಹತ್ತಾರು ಕೋಟಿ ರೂಪಾಯಿ ವೆಚ್ಚವಾಗಿದೆ ಎಂದು ಸುದ್ದಿವಾಹಿನಿಯೊಂದು ಬಹಿರಂಗಪಡಿಸಿತು. ಇರಲಿ, ವಿಷಯ ಎಲ್ಲಿಗೋ ಹೋಯಿತು. ವಿದ್ಯಾಭ್ಯಾಸ ಕ್ಷೇತ್ರದಲ್ಲಂತೂ ಸಚಿವರು ಇದುವರೆಗೆ ಗುರು ಮುರಳಿ ಮನೋಹರ ಜೋಷಿಯನ್ನು ಮೀರಿಸುತ್ತಿದ್ದಾರೆ. ಐದು ವರ್ಷಗಳಲ್ಲಿ ಉನ್ನತ ಶಿಕ್ಷಣವನ್ನು ಒಳಗೊಂಡ ಹಾಗೆ ಎಲ್ಲೆಲ್ಲೂ ಭಗವಾ ಝುಂಡಾ ಹಾರಾಡುವುದು ಖಚಿತವಾಗಿದೆ. ಈಗಾಗಲೇ ಆಯ್ದ ಆರೆಸ್ಸೆಸ್ ಚಿಂತಕರನ್ನು ಆಯಕಟ್ಟಿನ ಸ್ಥಾನಗಳಲ್ಲಿ ಕೂರಿಸಲಾಗಿದೆ. ಇತಿಹಾಸ ತಿರುಚುವುದಕ್ಕೆ, ಪಠ್ಯಗಳನ್ನು ಬದಲಿಸುವುದಕ್ಕೆ, ಐಸಿಎಚ್‌ಆರ್ ಸಂಸ್ಥೆಗೆ, ಕೇಂದ್ರ ಫಿಲಂ ಸೆನ್ಸಾರ್ ಬೋರ್ಡಿಗೆ, ಪ್ರಸಾರ ಭಾರತಿ ಮೊದಲಾದವುಗಳಿಗೆ ನೇಮಕಗಳೂ ಪೂರ್ಣಗೊಂಡಿವೆ. ಈ ಹುದ್ದೆಗಳನ್ನು ಅಲಂಕರಿಸಿರುವವರೆಲ್ಲ ಕೇಸರಿ ಕುಲದವರೆ. ಬೇಕಾದಷ್ಟು ಪ್ರತಿಭಟನೆಗಳಿದ್ದಾಗ್ಯೂ, ಆಕ್ಷೇಪಗಳಿದ್ದಾಗ್ಯೂ ಇಂಥ ನೇಮಕಗಳು ಮುಂದುವರಿದಿದೆ.

ವಿವಾದಕ್ಕೊಳಗಾಗಿರುವ ಇಂಥ ನೇಮಕಗಳಲ್ಲಿ ಇತ್ತೀಚಿನದು ಪುಣೆಯಲ್ಲಿರುವ ಪ್ರತಿಷ್ಠಿತ 'ಭಾರತೀಯ ಚಲನಚಿತ್ರ ಹಾಗೂ ದೂರದರ್ಶನ ಸಂಸ್ಥೆ'ಯ (ಎಫ್‌ಟಿಐಐ) ಅಧ್ಯಕ್ಷ ಸ್ಥಾನ. ಜನಪ್ರಿಯ ಧಾರಾವಾಹಿ 'ಮಹಾಭಾರತ' ಧಾರಾವಾಹಿಯಲ್ಲಿ ಯುಧಿಷ್ಠಿರನ ಪಾತ್ರ ವಹಿಸಿದ್ದ ಗಜೇಂದ್ರ ಚೌಹಾಣ್ ಈಗ ಪುಣೆ ಇನ್‌ಸ್ಟಿಟ್ಯೂಟಿನ ಅಧ್ಯಕ್ಷ ಸ್ಥಾನ ಅಲಂಕರಿಸಿದ್ದಾರೆ. ಇವರಿಗಿರುವ ಏಕೈಕ ಅರ್ಹತೆ ಎಂದರೆ ಇವರು ಭಾರತೀಯ ಜನತಾ ಪಕ್ಷದ ಸದಸ್ಯರು. ಕಿರುತೆರೆಯ ಕಲಾವಿದರಾಗಿರುವ ಈತನಿಗೆ ಸಿನಿಮಾದ ಗಂಧವೂ ಇಲ್ಲ. ಇದೊಂದು ರಾಜಕೀಯ ನೇಮಕಾತಿ. ಅಡೂರು ಗೋಪಾಲಕೃಷ್ಣನ್, ಶ್ಯಾಮ್ ಬೆನೆಗಲ್, ಗಿರೀಶ್ ಕಾರ್ನಾಡ್, ಯು. ಆರ್. ಅನಂತಮೂರ್ತಿ ಮುಂತಾದವರು ಅಧ್ಯಕ್ಷರಾಗಿದ್ದ ಈ ಸಂಸ್ಥೆಗೆ ಈಗ ರಾಜಕಾರಣಿಗೆ ಪಟ್ಟ. ಈ ನೇಮಕದ ವಿರುದ್ಧ ಅಲ್ಲಿನ ವಿದ್ಯಾರ್ಥಿಗಳು ಪ್ರತಿಭಟನೆ ನಡೆಸುತ್ತಿದ್ದಾರೆ. ಇನ್ನು ಆಡಳಿತ ಮಂಡಳಿಯ ಎಂಟು ಸದಸ್ಯರ ಪೈಕಿ ನಾಲ್ವರು ಆರೆಸ್ಸೆಸ್ ಜತೆ ಸಂಬಂಧ ಹೊಂದಿರುವರು. ನರೇಂದ್ರ ಮೋದಿ ಕುರಿತು ಸಾಕ್ಷ್ಯಚಿತ್ರಗಳನ್ನು ನಿರ್ಮಿಸಿರುವ ಅನಘಾ ಘಾಯ್‌ಪಾಸ್, ಮಹಾರಾಷ್ಟ್ರ ಎಬಿವಿಪಿ ಮಾಜಿ ಅಧ್ಯಕ್ಷ ನರೇಂದ್ರ ಪಾಠಕ್, ಆರೆಸ್ಸೆಸ್‌ಗೆ ಸೇರಿದ ಪ್ರಾಂಜಲ್‌ಲಾಲ್ ಸೈಕಿಯ, ಭಾಜಪ ಸಂಬಂಧದ ರಾಹುಲ್ ಸೋಲಾಪುರಕರ್ ಇವರುಗಳೇ ಸದಸ್ಯರು. ಇವರಿಗಿರುವ ಅರ್ಹತೆ ಆರೆಸ್ಸೆಸ್ ಸಂಬಂಧ ಬಿಟ್ಟರೆ ಬೇರೇನಿಲ್ಲ. ಹಾಗಾಗಿ ವಿದ್ಯಾರ್ಥಿಗಳು ತಿರುಗಿಬಿದ್ದು ಪ್ರತಿಭಟನೆ ನಡೆಸುತ್ತಿರುವುದು ಸಮರ್ಥನೀಯ.

✷ ✷ ✷

ದೆಹಲಿ ಚುನಾವಣೆಗಳಲ್ಲಿ ಧೂಳೆಬ್ಬಿಸಿ, ಕಾಂಗ್ರೆಸ್, ಭಾಜಪಗಳನ್ನು ನೆಲಸಮ ಮಾಡಿದ ಆಮ್ ಆದ್ಮಿ ಪಕ್ಷ (ಆಪ್) ಏಕೋ ಏನೋ ಒಂದಲ್ಲ ಒಂದು ವಿವಾದಗಳಿಗೆ ಸಿಕ್ಕಿಹಾಕಿಕೊಳ್ಳುತ್ತಿದೆ. ಅಧಿಕಾರಕ್ಕೇರಿದ ಮೇಲೆ ಲೆಫ್ಟಿನೆಂಟ್ ಗವರ್ನರ್ ಜೊತೆ ಜಟಾಪಟಿ, ಮೋದಿ ಸರಕಾರದೊಂದಿಗೆ ವಿರಸ, ಇದರ ಮೇಲೆ ಪಕ್ಷದೊಳಗೆ ಬಡಿದಾಟ. ಮುಖ್ಯಮಂತ್ರಿ ಅರವಿಂದ ಕೇಜ್ರಿವಾಲ್ ಸರ್ವಾಧಿಕಾರಿ ಧೋರಣೆಯ ವಿರುದ್ಧ ಪಕ್ಷದಲ್ಲಿ ಅತೃಪ್ತಿ, ಇಬ್ಬರು ಸ್ಥಾಪಕ ಸದಸ್ಯರ ನಿರ್ಗಮನ, ಇವೆಲ್ಲ ಒಂದು ಕಡೆಯಾದರೆ ಆಡಳಿತದಲ್ಲಿ ಬ್ಯೂರಾಕ್ರಸಿಯ ಅಸಹಕಾರ ಇನ್ನೊಂದು ಕಡೆ. ಮುಖ್ಯ ಕಾರ್ಯದರ್ಶಿ ನೇಮಕದ ವಿಚಾರದಲ್ಲಿ ನಡೆದ ವಾದ–ವಿವಾದಗಳಲ್ಲಿ ದೆಹಲಿ ಆಪ್ ಸರಕಾರದ ಮುಂದುವರಿಕೆಯೇ ವಿಪತ್ತಿನಲ್ಲಿದೆ ಎಂದು ತೋರಿತು. ಈಗ ಖೊಟ್ಟಿ ಪದವಿ ಆರೋಪದ ಮೇಲೆ ಕಾನೂನು ಸಚಿವರಾಗಿದ್ದ ಜಿತೇಂದ್ರ ಸಿಂಗ್ ತೋಮರ್ ದೆಹಲಿಯ ತಿಹಾರ್ ಜೈಲಿನಲ್ಲಿ ಕಂಬಿ ಎಣಿಸುತ್ತಿದ್ದಾರೆ. ಸಚಿವ ಸ್ಥಾನಕ್ಕೆ ರಾಜೀನಾಮೆ ನೀಡಿರುವ ಈತ ಪಕ್ಷದಿಂದಲೂ ಹೊರದೂಡಲ್ಪಡುತ್ತಾರೆಯೇ ನೋಡಬೇಕು. ನಕಲಿ ಪದವಿ ಪತ್ರ ಸಲ್ಲಿಸಿದ್ದಾರೆ ಎನ್ನುವುದೇ ಆರೋಪ. ಇಂಥ ಅಪರಾಧ ಎಸಗಿರುವ ರಾಜಕಾರಣಿಗಳಲ್ಲಿ ಇವರು ಮೊದಲಿಗರೇನಲ್ಲ. ಎಷ್ಟೋ ಅಸಲೀ ರಾಜಕಾರಣಿಗಳು ನಕಲಿ ಆಸ್ತಿ ವಿವರ ಸಲ್ಲಿಸಿ, ನಕಲಿ ದಾಖಲೆಗಳನ್ನು ನೀಡಿರುವಾಗ ತೋಮರ್ ಅಪರಾಧ ದೊಡ್ಡದೇನಲ್ಲ. ಕೇಂದ್ರ ಸರಕಾರದ ವಿದ್ಯಾ ಸಚಿವೆ ಸ್ಮೃತಿ ಇರಾನಿ ಯಾವ ವಿಶ್ವವಿದ್ಯಾನಿಲಯದ ಪದವೀಧರೆ ಎನ್ನುವುದು ಇನ್ನೂ ನಿಗೂಢ. ಹಾಗಿರುವಾಗ ಇವರದೇನು ಮಹಾ !

✷ ✷ ✷

ಗ್ರಾಮಪಂಚಾಯಿತಿ ಚುನಾವಣೆ ಮುಗಿದು ಹೋಯಿತು. ರಾಜ್ಯದ ಮೂರೂ ದೊಡ್ಡ ಪಕ್ಷಗಳ ನಾಯಕರೂ ಸಾಧನೆಯ ಕುರಿತು ಬೆನ್ನುತಟ್ಟಿಕೊಳ್ಳುತ್ತಿದ್ದಾರೆ. ಪಕ್ಷಾತೀತ ಎನಿಸಿಕೊಂಡಿರುವ ಈ ಚುನಾವಣೆಗೂ ಪಕ್ಷಗಳ ಸೋಂಕು ಇದ್ದೇ ಇದೆ. ಇರುವುದು ಸಹಜವೂ ಹೌದು. ಅದು ಒಂದು ಕಡೆಯಾದರೆ ಸಚಿವ ಸಂಪುಟದ ವಿಸ್ತರಣೆ ಮತ್ತೆ ಮುಂದಕ್ಕೆ ಹೋಗಿದೆ. ಪಾಪ ಸಿದ್ಧರಾಮಯ್ಯನವರಿಗೆ ಏನು ತೊಂದರೆಯೋ ಏನೋ. ಸಚಿವಾಕಾಂಕ್ಷಿಗಳಿಗೆ ಮಾತ್ರ ಮುಜುಗರ, ಬೇಸರ. ಹೋಗಲಿ ಇದು ಕಾಂಗ್ರೆಸ್ ಪಕ್ಷದ ಆಂತರಿಕ ವಿಷಯ. ಸಂಪುಟ ವಿಸ್ತರಣೆಯಾಗಲಿ ಬಿಡಲಿ ಸರಕಾರ ಮುಂದುವರಿಯುತ್ತೆ. ಈಗ ಬೃಹತ್ ಬೆಂಗಳೂರು ಮಹಾನಗರ ಚುನಾವಣೆ ವಿಚಾರಕ್ಕೆ ಬರೋಣ. ಸರಕಾರಕ್ಕಂತೂ ಈಗಲೇ ಚುನಾವಣೆ ನಡೆಸುವುದು ಬೇಕಿಲ್ಲ. ಮುಖ್ಯಮಂತ್ರಿಗಳು ಚುನಾವಣೆಗಳಿಗೆ ಸಿದ್ಧರಾಗಿ ಎಂದು ಕಾಂಗ್ರೆಸ್ ಕಾರ್ಯಕರ್ತರಿಗೆ ಅಪ್ಪಣೆ ಕೊಟ್ಟಿದ್ದರೂ ಚುನಾವಣೆ ನಡೆಯುವುದು ಸಂಶಯ. ಬಿಬಿಎಂಪಿಯನ್ನು ತುಂಡರಿಸುವ ಯೋಜನೆ ಬಲವಾಗಿಯೇ ಇದೆ. ಸರಕಾರ ಇದಕ್ಕಾಗಿ ಆಯೋಗವೊಂದನ್ನು ರಚಿಸಿದೆ. ನಗರಸಭೆ ವಿಸರ್ಜಿಸಿ ಆಡಳಿತಾಧಿಕಾರಿಯನ್ನು ನೇಮಕ ಮಾಡಿ ತಿಂಗಳ ಮೇಲಾಯಿತು. ಆದರೂ ಚುನಾವಣೆ ನಡೆಯುವುದು ಅನುಮಾನವೆ. ಈಗ ರಾಜ್ಯ ಹೈಕೋರ್ಟಿನಲ್ಲಿ ಬಿಬಿಎಂಪಿ ಚುನಾವಣೆಗೆ ಸಂಬಂಧಪಟ್ಟಂತೆ ಕಾನೂನು ಸಮರ ನಡೆಯುತ್ತಿದೆ. ಅದು ಮುಗಿದರೆ ಸುಪ್ರೀಮ್ ಕೋರ್ಟು ಮೆಟ್ಟಿಲೇರುವುದಕ್ಕೆ ಸರಕಾರ ಸಿದ್ಧವಾಗಿದೆ. ಇದರ ಮಧ್ಯೆ ಕಷ್ಟ ಅನುಭವಿಸುತ್ತಿರುವವರು ಬೆಂಗಳೂರು ನಗರದ ವಾಸಿಗಳು. ಮಳೆಗಾಲ ಶುರುವಾಗಿರುವಾಗ ರಸ್ತೆ ಗುಂಡಿಗಳು ಇನ್ನಷ್ಟು ಹೆಚ್ಚುತ್ತಿರುವಾಗ ವಾಹನ ಸವಾರರು, ನಡೆದಾಡುವವರ ಪಾಡು ಪಾಪ ಹೇಳತೀರದು. ಇದರ ಮೇಲೆ ಎಲ್ಲೆಲ್ಲೂ ಕಸದ ರಾಶಿ ಮಾತ್ರ ಕೊಳೆತು ನಾರುತ್ತಿರುವುದಂತೂ ಒಂದು ಗೋಳು. ಇದರಿಂದ ಬೆಂಗಳೂರಿನ ನಾಗರಿಕರಿಗೆ ಮುಕ್ತಿಯೇ ಇಲ್ಲವೇನೊ. ಜೈ ಸ್ವಚ್ಛ ಭಾರತ್. 




### ಶಿಕ್ಷಣ ಕ್ಷೇತ್ರದಲ್ಲಿ ಡೊನೇಶನ್ ಹಾವಳಿ

✉ ಶಿಕ್ಷಣವೆಂಬುದು ಕೇವಲ ಮೂರಕ್ಷರದ ಪದವಲ್ಲ. ಅದೊಂದು ಮಾನವ ಜೀವನದ ಅವಿಭಾಜ್ಯ ಅಂಗ. ಇಂದಿನ ಶಿಕ್ಷಣ ಹಣ ಸಂಪಾದನೆಗೆ ಕೇಂದ್ರೀಕೃತ ವಾಗಿರುವುದು ಎಲ್ಲರಿಗೂ ಗೊತ್ತಿರುವ ವಿಷಯ. “ಶಿಕ್ಷಣವು ಮಗುವಿನಲ್ಲಿ ಅಡಗಿರುವ ಸುಪ್ತ ಚೇತನವನ್ನು ವಿಕಸಿಸುವಂತೆ ಮಾಡುವುದು” ಎಂದು ಗಾಂಧೀಜಿ ಯವರು ಹೇಳಿದ್ದಾರೆ. ನಮ್ಮ ಭಾರತ ಸರ್ಕಾರವು ಪ್ರಾಥಮಿಕ ಶಿಕ್ಷಣವನ್ನು ೨೦೦೯ರಲ್ಲಿ ‘ಮಕ್ಕಳ ಮೂಲಭೂತ ಹಕ್ಕು’ ಎಂದು ಪರಿಗಣಿಸಿತು. ಇಷ್ಟು ಮಹಾನ್ ವ್ಯಾಪ್ತಿಯುಳ್ಳ ಶಿಕ್ಷಣವನ್ನು ಕೊಡಿಸಲು ಇಂದು ತಾಯ್ತಂದೆಯರು, ಪೋಷಕರು ಇನ್ನಿಲ್ಲದ ಪ್ರಯತ್ನ ಮಾಡುತ್ತಿದ್ದಾರೆ. ಆದರೆ ಇದಕ್ಕೆ ತಡೆಯಾಗಿ ನಿಂತಿರುವ ಹೆಬ್ಬಂಡೆ ‘ಡೊನೇಶನ್’ ಎಂಬ ಶನಿ ! ಎಂಸಿಎ, ಎಂಬಿಎ, ಮೆಡಿಕಲ್, ಇಂಜಿನಿಯರಿಂಗ್, ಕಂಪ್ಯೂಟರ್ ಕೋರ್ಸ್ ಗಳಿಗೆ ಲಕ್ಷಗಟ್ಟಲೆ ತೆರಬೇಕಾಗಿದೆ. ಅಲ್ಲದೆ, ಸರಕಾರಿ ಕೋಟಾದ ಸಂಸ್ಥೆಗಳಲ್ಲಿ ಸೀಟುಗಳ ದರ ನಿಗದಿ ಯಾಗಿರುವುದು ಶೋಚನೀಯ ಸಂಗತಿ. ಡೊನೇಶನ್‌ಗೆ ಜೀವ ಕೊಟ್ಟವರು ನಾವೇ. ನಮ್ಮ ಮಕ್ಕಳು ಹೆಸರಾಂತ ಶಾಲೆ, ಕಾಲೇಜುಗಳಲ್ಲಿ ಓದಬೇಕೆಂದು ಎಷ್ಟಾದರೂ ಡೊನೇಶನ್ ಕೊಡುತ್ತೇವೆ. ಡೊನೇಶನ್ ಕೊಟ್ಟು ಖಾಸಗಿ ಶಾಲೆಯಲ್ಲಿ ಓದಿದವರಿಗೆ ಮಾತ್ರ ವಿದ್ಯೆ ಒಲಿಯು ತ್ತದೆಯೆ ? ಸರ್ಕಾರಿ ಶಾಲೆಗಳಲ್ಲಿ ಓದಿದ ಅನೇಕರು ಉನ್ನತ ಹುದ್ದೆಯಲ್ಲಿಲ್ಲವೆ ? ಡೊನೇಶನ್ ಹಾವಳಿಯ ನಿರ್ಮೂಲನೆ ಸಾಧ್ಯವಿಲ್ಲದಿದ್ದರೂ ಅದನ್ನು ಒಂದು ಹತೋಟಿಗಾದರೂ ತರುವ ನಿಟ್ಟಿನಲ್ಲಿ ಸರ್ಕಾರ ಮತ್ತು ಸಂಘ-ಸಂಸ್ಥೆಗಳು ಕೆಲಸ ಮಾಡಬೇಕಿದೆ. ‘ಡೊನೇಶನ್ ಕೊಟ್ಟರೆ ಶಿಕ್ಷಣ’ ಎಂಬ ಫಲಕವಿಲ್ಲದಿರುವುದೊಂದನ್ನು ಬಿಟ್ಟರೆ, ಈಗಿನ ಶಿಕ್ಷಣ ಪದ್ಧತಿ ಡೊನೇಶನ್ ಆಧಾರಿತವಾಗಿದೆ.

ಹಾಸನ **ಕೊಟ್ರೇಶ್ ಎಸ್. ಉಪ್ಪಾರ್**

### ಘರ್ಜನೆ, ರೋದನದ ನಡುವೆ

ಬೆಂಗಳೂರಿನ ಕೆಲವು ಪ್ರದೇಶಗಳಲ್ಲಿ ಅಕ್ರಮವಾಗಿ ಮನೆ ನಿರ್ಮಿಸಿಕೊಂಡಿದ್ದಾರೆಂದು ಜಿಲ್ಲಾಡಳಿತ ನ್ಯಾಯಾಲಯದ ಆದೇಶದಂತೆ ವಸತಿಗಳನ್ನು ಬುಲ್ಡೋಜರ್‌ನಿಂದ ನೆಲಸಮ ಮಾಡಿದೆ. ಈ ಕಾರ್ಯಾಚರಣೆಗೆ ಬಲಿಯಾಗಿರುವವರು, ಬಡ ಹಾಗೂ ಮಧ್ಯಮ ವರ್ಗದವರು ಮಾತ್ರ. ಬಡವರು ಜೀವಮಾನದಲ್ಲಿ ಗಳಿಸಿದ ಹಣ ಹಾಗೂ ಸಾಲಮಾಡಿ ಕಟ್ಟಿಸಿದ ಮನೆಗಳನ್ನು ನೆಲಸಮ ಮಾಡಿರುವುದು ಮಾತ್ರ ಅಕ್ಷಮ್ಯ ಅಪರಾಧ. ಇದಕ್ಕೆ ಮುಂಚೆಯೇ ನೋಟಿಸ್ ನೀಡಲಾಗಿತ್ತು ಎನ್ನುವುದು ಆಡಳಿತವರ್ಗದ ವಾದ. ಈ ವಾದವೇನೇ ಇರಲಿ, ತೆರವುಗೊಳಿಸಲು ಕಾರಣ ಗಳೇನು ? ನ್ಯಾಯಾಲಯದ ಆದೇಶದ ಅನುಸಾರ, ಕೆರೆ ಪ್ರದೇಶಗಳಲ್ಲಿನ ಕಟ್ಟಡಗಳನ್ನು ಅಕ್ರಮವಾಗಿ ಕಟ್ಟಲಾಯಿತು. ಆ ಪ್ರದೇಶಗಳ ಒತ್ತುವರಿಯಿಂದಾಗಿ, ಕೆರೆಗಳು ಬತ್ತಿವೆ. ನೀರಿನ ಮಟ್ಟ ಕುಸಿಯುತ್ತಿದೆ. ನೀರಿನ ಸೆಲೆಯೇ ಹಾಳಾಗಿದೆ ಇತ್ಯಾದಿ ಕಾರಣಗಳು.

ಒಂದು ವೇಳೆ ಈ ತೆರವು ಕಾರ್ಯ, ನ್ಯಾಯಾಲಯದ ಆದೇಶಕ್ಕೆ ಅನುಗುಣವಾಗಿ ನಡೆಯಬೇಕಾದ ಅನಿವಾರ್ಯತೆ ಇದ್ದಲ್ಲಿ ನ್ಯಾಯಾಲಯಕ್ಕೆ ಮನವಿ ಮಾಡಿಕೊಳ್ಳಬಹುದಿತ್ತಲ್ಲ ? ಇದೊಂದು ಸೂಕ್ಷ್ಮ ವಿಚಾರ. ಹಾಗಾಗಿ ಅದನ್ನು ಕಾರ್ಯಗತಗೊಳಿಸಲು ಸ್ವಲ್ಪ ಸಮಯ ಬೇಕು ಎಂದು ಕೇಳಬಹುದಿತ್ತಲ್ಲ? ಯಾವ ಯಾವ ಪ್ರದೇಶದಲ್ಲಿ ಒತ್ತುವರಿಯಾಗಿದೆ ಎಂಬುದನ್ನು ಸಮೀಕ್ಷೆ ನಡೆಸಿ, ಅದಕ್ಕೆ ಪರಿಹಾರೋಪಾಯಗಳನ್ನು ಕಂಡುಕೊಳ್ಳಬಹುದಿತ್ತಲ್ಲ ? ಯಾವುದೇ ಸರ್ಕಾರ ಯಶಸ್ವಿಯಾಗಿ ಕಾರ್ಯ ನಿರ್ವಹಿಸಲು ಬೇಕಾದ ದೂರದೃಷ್ಟಿ ಹಾಗೂ ವಿವೇಚನೆ ಎರಡೂ ಈ ಕಾರ್ಯಾಚರಣೆಯಲ್ಲಿ ಇಲ್ಲವಾಗಿರುವುದು ಸ್ಪಷ್ಟ .




ಬೆಂಗಳೂರಿನ ಜೀವಂತ ಕೆರೆ ಪ್ರದೇಶವನ್ನೂ ಒತ್ತುವರಿ ಮಾಡಿಕೊಂಡಿದ್ದು ಆ ಜಾಗದಲ್ಲಿ ಬೃಹತ್ ಅಪಾರ್ಟ್‌ಮೆಂಟ್‌ಗಳು ತಲೆ ಎತ್ತಿವೆ. ಅಂತಹವು ಗಳಿಂದ ಕೆರೆಗೆ ಹಾನಿಯಾಗಿರುವುದರಿಂದ, ಅವುಗಳ ನಿರ್ಮಾತೃಗಳು ಹಾಗೂ ಅದಕ್ಕೆ ಅಕ್ರಮವಾಗಿ ಅನುಮತಿ ನೀಡಿದವರಿಗೂ ಶಿಕ್ಷೆಯಾಗಬೇಕು ಹಾಗೂ ಆ ಅಕ್ರಮ ಕಟ್ಟಡಗಳನ್ನು ನಿರ್ದಾಕ್ಷಿಣ್ಯವಾಗಿ ತೆರವುಗೊಳಿಸಬೇಕು. ಆದರೆ ಬತ್ತಿದ ಕೆರೆ ಪ್ರದೇಶಗಳಲ್ಲಿ ಮಾತ್ರ ಕಟ್ಟಡಗಳನ್ನು ತೆರವುಗೊಳಿಸಬೇಕಾದ ಅವಶ್ಯಕತೆಯಿಲ್ಲ.

*ಬೆಂಗಳೂರು* **ಪ್ರೊ ॥ ಎಂ. ಎಸ್. ರಘುನಾಥ್**

### ಸರ್ಕಾರಿ ಜಯಂತಿಗಳಿಗೆ ಮುಕ್ತಿ ಎಂದು ?

ಇಂದು ಸರ್ಕಾರ ಆಚರಿಸುತ್ತಿರುವ ವಿವಿಧ ಜಯಂತಿಗಳನ್ನು ಗಮನಿಸಿದರೆ ಅವು ಸರ್ಕಾರಿ ಕಾರ್ಯಕ್ರಮಗಳಾಗಿ ಬಿಟ್ಟಿವೆಯೇ ವಿನಾ ಸಮಾಜದ ಪಾತ್ರ ಇಲ್ಲದಿರುವದು ಕಂಡುಬರುತ್ತಿದೆ. ಸ್ಥಳೀಯ ಶಾಸಕರ ಅಧ್ಯಕ್ಷತೆಯಲ್ಲಿ ನಡೆಯುವ ಸರ್ಕಾರಿ ಜಯಂತಿ ಕಾರ್ಯಕ್ರಮಗಳಲ್ಲಿ ಆ ಭಾಗದ ಸಂಸದರು, ರಾಜ್ಯ ವಿಧಾನ ಪರಿಷತ್ ಸದಸ್ಯರು, ಜಿಲ್ಲಾ ಪಂಚಾಯತಿ ಅಧ್ಯಕ್ಷರು, ಉಪಾಧ್ಯಕ್ಷರು, ಸದಸ್ಯರು, ತಾಲೂಕು ಪಂಚಾಯತಿ ಅಧ್ಯಕ್ಷರು, ಉಪಾಧ್ಯಕ್ಷರು, ಪುರಸಭೆ – ಪಟ್ಟಣ ಪಂಚಾಯತಿ ಅಧ್ಯಕ್ಷರು, ಉಪಾಧ್ಯಕ್ಷರು ಇವರೆಲ್ಲ ಮುಖ್ಯ ಅತಿಥಿಗಳೊ ಇಲ್ಲ ಅತಿಥಿಗಳೊ ಆಗಿರುತ್ತಾರೆ. ಇದು ಸರ್ಕಾರಿ ಶಿಷ್ಟಾಚಾರದನ್ವಯದ ಆಮಂತ್ರಣ ಪತ್ರಿಕೆ. ಇವರಾರಿಗೂ ಅಂದು ಆಚರಣೆ ಗೊಳ್ಳುವ ಜಯಂತಿಯ ಮಹನೀಯರ ಬಗ್ಗೆ ಏನೂ ಗೊತ್ತಿರುವುದಿಲ್ಲ. ಅಂತೆಯೇ ಇದಕ್ಕಾಗಿ ಓರ್ವ ವಿಶೇಷ ಉಪನ್ಯಾಸಕರು ಅತಿಥಿ ರೂಪದಲ್ಲಿ ಕಾಣಿಸಿ ಕೊಂಡಿರುತ್ತಾರೆ. ಸಭಾಸ್ಥಾನ ಅರ್ಧಕ್ಕರ್ಧ ಖಾಲಿ. ಸರ್ಕಾರಿ ಅಧಿಕಾರಿಗಳಿಗೆ ಮಾತ್ರ ಇದೊಂದು ಶಿಕ್ಷೆಯಾಗಿ ಪರಿಣಮಿಸುತ್ತದೆ. ಇದು ಸರ್ಕಾರಿ ಜಯಂತಿ ಆಚರಣೆಗಳ ಪರಿ.

ಇನ್ನು ಸರ್ಕಾರಿ ಜಯಂತಿಗಳ ವಿವರ ನೋಡಿದರೆ ತಲೆ ಬಿಸಿಯಾಗುತ್ತದೆ. ಹಲವು ಜಯಂತಿಗಳಿಗೆ ರಜೆ ಬೇರೆ ಇದೆ. ಇದಂತೂ ಮಹಾ ಮೂರ್ಖತನದ್ದು ಎನಿಸುತ್ತದೆ. ಜನವರಿ ೧೫ರಂದು ಸಿದ್ದರಾಮೇಶ್ವರ ಜಯಂತಿ, ಜನವರಿ ೨೧ರಂದು ಅಂಬಿಗರ ಚೌಡಯ್ಯ ಜಯಂತಿ, ಫೆಬ್ರವರಿ ೨೧ರಂದು ಶಿವಾಜಿ ಜಯಂತಿ (ಮೊದಲು ಇದನ್ನು ಬಸವ ಜಯಂತಿಯಂದೇ ಆಚರಿಸಲಾಗುತ್ತಿತ್ತು. ಆದರೆ ಮಹಾರಾಷ್ಟ್ರದಲ್ಲಿ ಇದನ್ನು ಫೆಬ್ರವರಿ ೧೯ರಂದೇ ಆಚರಿಸಲಾಗುವದರಿಂದ ಇಲ್ಲೂ ಅಂದೇ ಆಚರಿಸಲಾಗುತ್ತಿದೆ), ಫೆಬ್ರವರಿ ೨೦ರಂದು ಸರ್ವಜ್ಞ ಜಯಂತಿ, ಮಾರ್ಚ್ ೨೫ರಂದು ಇದೇ ಮೊದಲ ಸಲ ದೇವರ ದಾಸಿಮಯ್ಯ ಜಯಂತಿ, ಏಪ್ರಿಲ್‌ನಲ್ಲಂತೂ ಜಯಂತಿಗಳದ್ದೇ ದರ್ಬಾರು. ಏಪ್ರಿಲ್ ೫ರಂದು ಬಾಬು ಜಗಜೀವನರಾಮ್ ಜಯಂತಿ, ೧೪ರಂದು ಡಾ॥ ಅಂಬೇಡ್ಕರ್ ಜಯಂತಿ, ೨೧ರಂದು ಬಸವ ಜಯಂತಿ, ಇನ್ನು ಇದೇ ಪ್ರಥಮ ಸಲ ೨೫ರಂದು ಭಗೀರಥ ಜಯಂತಿ, ಇದೇ ಏಪ್ರಿಲ್‌ನಲ್ಲಿ ಮಹರ್ಷಿ ವಾಲ್ಮೀಕಿ ಜಯಂತಿ (ಶೀಗಿ ಹುಣ್ಣಿಮೆಯಂದು ಬರುವುದರಿಂದ ದಿನಾಂಕ ನಿಗದಿ ಇಲ್ಲ) ಅಕ್ಟೋಬರ್ ೨ರಂದು ಮಹಾತ್ಮ ಗಾಂಧಿ ಜಯಂತಿ, ನವೆಂಬರ್ ೧೪ರಂದು ನೆಹರು ಜಯಂತಿ, ನವೆಂಬರ್‌ನಲ್ಲಿ ಕನಕದಾಸ ಜಯಂತಿ (ಇದು ತಿಥಿಯನ್ವಯ ಆಚರಣೆ, ದಿನಾಂಕ ನಿಗದಿ ಇಲ್ಲ) ಡಾ॥ ಅಂಬೇಡ್ಕರ್, ಬಸವೇಶ್ವರ, ಜಗಜೀವನರಾಮ್, ವಾಲ್ಮೀಕಿ ಜಯಂತಿಗಳಿಗೆ ಸರ್ಕಾರಿ ರಜೆ ಇದೆ. ಮೊದಲು ಮಹಾತ್ಮ ಗಾಂಧಿ ಜಯಂತಿಯಂದು ಕೇಂದ್ರ ಸರ್ಕಾರ ರಜೆ ನೀಡುತ್ತಿತ್ತು. ಸುಮಾರು ಇಪ್ಪತ್ತು ವರ್ಷಗಳ ಹಿಂದೆ ರಜೆ ರದ್ದುಪಡಿಸಿ ಪುಣ್ಯ ಕಟ್ಟಿಕೊಂಡಿತು.

ಇಂದು ಜಾತಿ ಜಾತಿಗೊಬ್ಬ ಪುಣ್ಯಪುರುಷರಿದ್ದಾರೆ.

ಮಹಾತ್ಮರಿದ್ದಾರೆ, ಸಾಧಕರಿದ್ದಾರೆ. ಇಂಥವರೆಲ್ಲರ ಜಯಂತಿಗಳನ್ನೂ ಆಚರಿಸುವಂತೆ ಸರ್ಕಾರದ ಮೇಲೆ ಒತ್ತಡ ಬಂದರೆ ಗತಿ ಏನು ?

*ಬೆಳಗಾವಿ* **ಪ್ರಕಾಶ ದೇಶಪಾಂಡೆ**

### ಅಂತರಾಳದಿಂದ

ವಿಶಿಷ್ಟ ಬರಹಗಳನ್ನುಳ್ಳ 'ಹೊಸತು' ಮಾಸಿಕದ ಜೂನ್ ಸಂಚಿಕೆ ಆರಂಭದಲ್ಲೇ ಆಸಕ್ತಿಯನ್ನು ಕೆರಳಿಸಲು ಕಾರಣ 'ಈ ತಿಂಗಳು' ಅಂಕಣ ಮತ್ತು 'ಸಂಪಾದಕೀಯ' ಬರಹಗಳು. ಇವು ರಾಷ್ಟ್ರವ್ಯಾಪಿಯಾಗಿ ಜರುಗುತ್ತಿರುವ ಆಭಾಸಗಳ ಸರಮಾಲೆಗೆ ಕನ್ನಡಿ ಹಿಡಿಯುತ್ತವೆ. ಸಂಪಾದಕೀಯದಲ್ಲಿ ವ್ಯಕ್ತಪಡಿಸಿದ "ಮಹಾನ್ ಭಾರತ ದೇಶ ಇದೇ ಏನು ?" ಎಂಬ ವಿಷಯ ಚಿಂತನಾರ್ಹ. ಹೀಗೆ ಜನಸಾಮಾನ್ಯರಿಗೂ ಮನವರಿಕೆಯಾಗುವ ಹಾಗೆ ಸಾರಾಂಶವನ್ನು ವ್ಯಕ್ತಪಡಿಸುವಂತಹ ಇನ್ನೊಂದು ಮಾಸಿಕ ಇಲ್ಲವೇ ಇಲ್ಲ. ಈ ಮೂಲಕ 'ಹೊಸತು' ಎಲ್ಲ ರೀತಿಯಲ್ಲೂ ಹೊಸತನ ಹೊಂದಿದೆ.

'ರಾಷ್ಟ್ರಕವಿ' ಎಂಬ ಬಿರುದಿನ ಕುರಿತಾಗಿ ಸಂಪಾದಕೀಯ ವ್ಯಕ್ತಪಡಿಸಿದ ವಿಶ್ಲೇಷಣೆ ಸಾಹಿತ್ಯಾಸಕ್ತರೆಲ್ಲರೂ ಈ ಕುರಿತು ಚಿಂತಿಸುವಂತೆ ಮಾಡಿದೆ. ಅಂತೆಯೇ ಬಡ ಕುಟುಂಬಗಳಿಗೆ ಕರ್ನಾಟಕ ಸರಕಾರವು ಕೊಡಮಾಡಿರುವ ಒಂದು ಹೊತ್ತಿನ ತುತ್ತಿಗೂ ಸಾಕಾಗದ, ಉಚಿತ ಅಕ್ಕಿ ನೀಡುವ ಯೋಜನೆಯನ್ನು ಬುದ್ಧಿ ಇರುವವರಾರೂ ಟೀಕಿಸದೆ ಇರಲು ಸಾಧ್ಯವಿಲ್ಲ. ಮೂಲತಃ ಯೋಚಿಸಿದರೆ ರಾಜಕಾರಣಿಗಳು ಈ ಚದುರಂಗದಾಟ ಬಡವರ ಏಳಿಗೆಗೆ ಎಂದಿಗೂ ನೆರವಾಗದು. ಒಡಲಿನ ಹಸಿವನ್ನು ನೀಗಿಸುವ ಆಹಾರ ಪೂರೈಕೆಯ ಸಮಸ್ಯೆಗೆ ಇಂತಹ ಹುರುಳಿಲ್ಲದ ಯೋಜನೆಗಳು ಹಾಸ್ಯಾಸ್ಪದವಾಗಿವೆ. ಸರಕಾರಗಳು ಇಂತಹ ಪೊಳ್ಳು ನೀತಿಗಳನ್ನು ಬಯಲಿಗೆಳೆಯುವಲ್ಲಿ 'ಹೊಸತು' ನಿಜಕ್ಕೂ ಮುಂದು.

*ಕಾಸರಗೋಡು* **ಕೀರಿಕ್ಕಾಡು ವನಮಾಲಾ ಕೇಶವ ಭಟ್ಟ**

### ಈ ನಾಡಲ್ಲಿ ಬಹಿಷ್ಕಾರಕ್ಕೆ ಅಂತ್ಯವಿಲ್ಲವೇ ?

ಇದೆಂಥ ನಾಚಿಕೆಗೇಡಿನ ವಿಷಯ ! ಈ ನಾಡಲ್ಲಿ ಮತ್ತೆ ಮತ್ತೆ ದಲಿತರು ಬಹಿಷ್ಕಾರಕ್ಕೆ ತಮ್ಮನ್ನು ತಾವೇ ಒಡ್ಡಿಕೊಳ್ಳುತ್ತಿದ್ದಾರೆ. ಅವರನ್ನು ಹೀಗೆ ನೋಡಿಕೊಳ್ಳುತ್ತಿರುವ ಮೇಲ್ವರ್ಗದ ಬಹುಸಂಖ್ಯಾತರು ನಿಜಕ್ಕೂ ತಲೆ ತಗ್ಗಿಸುವ ವಿಷಯವಿದು. ಹೌದು, ಇತ್ತೀಚಿಗೆ ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲ್ಲೂಕಿನ ಕಲಾಲಬಂಡಿಯಲ್ಲಿ ದಲಿತರಿಗೆ ಬಹಿಷ್ಕಾರ ಹಾಕಿರುವುದನ್ನು ಪತ್ರಿಕೆಗಳಲ್ಲಿ ತಾವು ಗಮನಿಸಿರುತ್ತೀರಿ. ನಿಜಕ್ಕೂ ಇಂಥ ವರದಿಗಳನ್ನು ಓದಿ ತಲೆ ತಗ್ಗಿಸುವಂತಾಯಿತು. ಏಕೆ ಆಗಾಗ ಇಂಥ ಪ್ರಕರಣಗಳು ಜರುಗುತ್ತಲೇ ಇರುತ್ತವೆ ? ಒಬ್ಬ ದಲಿತನ ಜೊತೆ ಮಾತನಾಡಿದರೆ ರೂ. ೧೦೦೦/– ದಂಡ, ಪಡಿತರ ತಂದರೆ ರೂ. ೫೦೦೦/– ದಂಡ ಎಂಬ ಸುದ್ದಿಗಳು ಸಾಮಾನ್ಯವಾಗಿಬಿಟ್ಟಿವೆ. ಹೀಗೇಕೆ ? ದಲಿತರ ಆಹಾರ ಪದ್ಧತಿಯನ್ನು ಅನುಸರಿಸಬಾರದೆಂದು ಶಾಲೆಯಲ್ಲಿ ಮಕ್ಕಳಿಗೆ ಪೋಷಕರಿಂದ ಸೂಚನೆ, ಈಗಲೂ ಹಳ್ಳಿಗಳ ಹೋಟೆಲುಗಳಲ್ಲಿ ಅವರಿಗೇ ಪ್ರತ್ಯೇಕವಾದ ತಟ್ಟೆ, ಗ್ಲಾಸ್ ವ್ಯವಸ್ಥೆ. ದೇವಸ್ಥಾನದಲ್ಲಿ ಪ್ರವೇಶ ನಿರಾಕರಣೆ... ಹೀಗೆ ಇಂದಿಗೂ ಹತ್ತು ಹಲವು ರೀತಿಯಲ್ಲಿ ದಲಿತರನ್ನು ಹೀನವಾಗಿ ಕಾಣುತ್ತಿರುವ ಮೇಲ್ವರ್ಗದವರ ದಬ್ಬಾಳಿಕೆಯಲ್ಲಿ ಬಡ ದಲಿತರು ಹೇಗೆ ತಾನೆ ಬದುಕಲು ಸಾಧ್ಯ ? ಅವರಿಗೇಕೆ ಮೀಸಲಾತಿ ಎಂದು ಕೇಳುವ ಮೇಲ್ವರ್ಗದ ಚಿಂತಕರು ಈ ಕುರಿತು ಚಿಂತಿಸುತ್ತಾರೆಯೇ ?

ದಲಿತರಿಗೆ ಶಿಕ್ಷಣ, ಉದ್ಯೋಗದಂತಹ ಕ್ಷೇತ್ರಗಳಲ್ಲಿ ಸ್ವಲ್ಪಮಟ್ಟಿಗೆ ಮೀಸಲಾತಿಯನ್ನು ಸರ್ಕಾರದ ಮಟ್ಟದಲ್ಲಿ ನೀಡಿರಬಹುದು. ಆದರೆ ಅವರನ್ನು ಸಮಾಜದಲ್ಲಿ ಎಂದಾದರೂ ಸಮಾನತೆಯಿಂದ ಒಂಚೂರು ಮಾನವೀಯತೆಯಿಂದ ನೋಡಿಕೊಳ್ಳಲಾಗಿದೆಯಾ ? ಅವರ ಜೊತೆ ಕೊಡುಕೊಳ್ಳುವಿಕೆಯ ಸಂಬಂಧದ ಮಾತಿರಲಿ, ಮೇಲ್ವರ್ಗದವರ ಬಡಾವಣೆಗಳಲ್ಲಿ ಇಂದಿಗೂ ಅವರಿಗೆ ವಾಸವಿರಲು ಮನೆ ಬಾಡಿಗೆ ಕೊಡಲೂ ಯೋಚಿಸುವಂಥ ಮನಸ್ಸುಗಳೇ ತುಂಬಿರುವಾಗ ಸಮಾನತೆಯನ್ನು ಈ ನಾಡಿನಲ್ಲಿ ಕಾಣುವುದು ಯಾವಾಗ ? ಪ್ರಗತಿಪರರು, ಚಿಂತಕರು ಮತ್ತು ನಮ್ಮ ಇಡೀ ವ್ಯವಸ್ಥೆ ಇಂಥ ಘಟನೆಗಳನ್ನು ವಿರೋಧಿಸಬೇಕು ಮತ್ತು ಸರ್ಕಾರ ಇಂಥ ಪ್ರಕರಣಗಳಿಗೆ ಕಡಿವಾಣ ಹಾಕಿ ತಪ್ಪಿತಸ್ಥರನ್ನು ಶಿಕ್ಷಿಸುವ ಕ್ರಮ ಕೈಕೊಂಡಲ್ಲಿ ಮಾತ್ರ ಈ ನಾಡಿನ ಸಂವಿಧಾನಕ್ಕೆ, ಮತ್ತದರ ರೂವಾರಿಯಾದ ಡಾ॥ ಬಿ. ಆರ್. ಅಂಬೇಡ್ಕರ್‌ರವರಿಗೆ ಗೌರವಿಸಿದಂತಾಗುತ್ತದೆ. ಅವರ ಕನಸು ಸಾಕಾರವಾಗುತ್ತದೆ.

*ಕನಕಗಿರಿ* **ವೆಂಕಟೇಶ ಕೆ. ಜನಾದ್ರಿ**

### ನಾರಿ, ಸೀರೆ ಹಾಗೂ ಸಂಸ್ಕೃತಿ

ಹಲವಾರು ವಿಶೇಷತೆಗಳಿಂದ ಕೂಡಿದ ಭಾರತೀಯ ಸಂಸ್ಕೃತಿಯನ್ನು ಸಾರಾಸಗಟಾಗಿ ಹೊಗಳುವುದಾಗಲಿ ಅಥವಾ ತೆಗಳುವುದಾಗಲಿ ಅಸಾಧ್ಯವೇ ಸರಿ. ಸಕಾರಾತ್ಮಕ ಚಿಂತನೆಯಿಂದ ಹಾಗೂ ವಿಮರ್ಶಾತ್ಮಕ ದೃಷ್ಟಿಯಿಂದ ಯೋಚಿಸಿ ನೋಡಿದಾಗ ನಮ್ಮ ಸಂಸ್ಕೃತಿಯ ಹಲವಾರು ವಿಶಿಷ್ಟ ಸಂಗತಿಗಳು ಗೋಚರಿಸುತ್ತವೆ. ಸಂಸ್ಕೃತಿ ಎಂದೊಡನೆ ಸಾಮಾನ್ಯವಾಗಿ ಭಾಷೆ, ಉಡುಗೆ – ತೊಡುಗೆ, ಆಹಾರ, ಹಬ್ಬ – ಹರಿದಿನಗಳಂತಹ ಹತ್ತು ಹಲವಾರು ವಿಷಯಗಳು ನಮ್ಮ ಗಮನ ಸೆಳೆಯುತ್ತವೆ. ಮಹಿಳೆಯರಿಗೆ ವಿಶೇಷ ಸ್ಥಾನ ನೀಡಿರುವ ನಮ್ಮ ಭಾರತೀಯ ಸಂಸ್ಕೃತಿಯ ಕುರಿತು ಯೋಚಿಸುತ್ತಿರುವಾಗ ಸಹಜವಾಗಿಯೇ ಭಾರತದ ಬಹುತೇಕ ರಾಜ್ಯಗಳ ಮಹಿಳೆಯರು ತೊಡುವ ಸೀರೆಯು ಆಕರ್ಷಣೀಯವಾಗಿ ತೋರುತ್ತದೆ. ಸೀರೆಗೂ ನಾರಿಗೂ ಬಿಡಲಾರದ ಅವಿನಾಭಾವ ಸಂಬಂಧವಿದೆ. ಹಲವಾರು ವಿಧದ ಬಣ್ಣ, ವಿನ್ಯಾಸ ಹಾಗೂ ನೇಯ್ಗೆಯ ವಿಶೇಷತೆಗಳಿದ್ದರೂ ಸೀರೆಯ ಮಹತ್ವ ಹಾಗೂ ಔಚಿತ್ಯ ಹೆಚ್ಚು ಗಮನ ಸೆಳೆಯುತ್ತದೆ.

ಮಹಿಳೆಯೋರ್ವಳಿಗೆ ಬಂದೊದಗಬಹುದಾದ ಅಪಾಯಗಳ ಸರಮಾಲೆಯನ್ನು ಸೀರೆಯು ಸಹಜವಾಗಿಯೇ ನಿವಾರಿಸಬಲ್ಲದು. ಮಾನರಕ್ಷಣೆಯ ಜೊತೆಗೆ ಪ್ರಾಣರಕ್ಷಣೆಯನ್ನೂ ಮಾಡುವ ಸೀರೆಯು ಹತ್ತು ಹಲವಾರು ಸಂದರ್ಭಗಳಲ್ಲಿ ಮಹಿಳೆಯರಿಗೆ ಪುನರ್ಜನ್ಮವನ್ನೇ ನೀಡಬಲ್ಲದು. ಪ್ರಸವ ವೇದನೆಯಿಂದ ಬಳಲುತ್ತಿರುವ ಒಂಟಿ ಮಹಿಳೆಗೆ ಸೀರೆಯು ರಕ್ಷಣಾ ಕವಚವಾಗಿ ಮಗುವನ್ನು ಸುರಕ್ಷಿತವಾಗಿ ಜನ್ಮ ನೀಡುವಲ್ಲಿ ಸಹಕಾರಿಯಾಗುತ್ತದೆ. ತೊಟ್ಟಿಲು ಕಟ್ಟಿ ತೂಗುವ ಶಕ್ತಿ ಇಲ್ಲದ ಮಹಿಳೆಯರಿಗೆ ಮತ್ತದೇ ಸೀರೆಯು ಮಗುವಿಗೆ ತೊಟ್ಟಿಲಾಗಿ ತೂಗುತ್ತದೆ. ಒಂದೊಮ್ಮೆ ಹಾಲುಣಿಸುವಾಗ ಮರೆಗಾಗಿ ಸಹಕರಿಸುವ ಸೀರೆಯ ಸೆರಗು ಮಗುವಿನ ಆರೋಗ್ಯಕರ ಬೆಳವಣಿಗೆಯ ಜೊತೆಗೆ ಯಾವ ಕಾಕದೃಷ್ಟಿಯೂ ಬೀಳದಂತೆ ಕಾಪಾಡುತ್ತದೆ. ಹಾಲುಂಡ ಮಗುವಿಗೆ ತಾಯಿಯ ಸೀರೆಯ ಮಡಿಲಿಗಿಂತ ಬೇರೊಂದು ಹಾಸಿಗೆ ಬೇಕೇ ? ಅಥವಾ ಬೇರ್‍ಯಾವುದು ತಾನೇ ತಾಯಿಯ ಮಡಿಲಿಗೆ ಸರಿಸಾಟಿಯಾಗಬಲ್ಲದು?

ನಾಲ್ಕೈದು ಮಹಿಳೆಯರು ಮನಸ್ಸು ಮಾಡಿದರೆ ತಮ್ಮ ಸೀರೆಗಳಿಂದ ಬಾವಿಯಲ್ಲಿ ಬಿದ್ದವರನ್ನು ರಕ್ಷಿಸಬಹುದು. ಮಾತ್ರವಲ್ಲದೆ, ಯಾವುದೋ ವಿಷಗಳಿಗೆಯಲ್ಲಿ ಮಹಿಳೆಯೋರ್ವಳು ಬಾವಿಗೋ, ಕೆರೆಗೋ ಹಾರಿದರೂ ಸಹ ಮತ್ತದೇ ಸೀರೆಯು ಬಲೂನಿನಂತೆ ಉಬ್ಬಿಕೊಂಡು ಮುಳುಗಡೆಯ ಸಮಯವನ್ನು ಮುಂದೂಡಿ ಆ ಮೂಲಕ ಬದುಕಲು ಮತ್ತೊಂದು ಅವಕಾಶ ನೀಡಬಲ್ಲದು. ಸರ್ವಋತುಗಳಿಗೂ ಸರಿಹೊಂದುವ ಸೀರೆಯು ಬಿಸಿಲಿನ ತಾಪದಿಂದಲೂ, ಚಳಿಯ ನಡುಕದಿಂದಲೂ ರಕ್ಷಿಸುವ ರಕ್ಷಾಕವಚವಾಗಿ ಹೊಂದಿಕೊಳ್ಳುತ್ತದೆ. ಇತಿಹಾಸವೇ ಸಾರುವಂತೆ ನಾಡ ರಕ್ಷಣೆಯಂತಹ ಗುರುತರ ಜವಾಬ್ದಾರಿಯ ಸಂದರ್ಭಗಳಲ್ಲಿ ಮಹಿಳೆಯು ತನ್ನ ಸೀರೆಯನ್ನು ಗಂಡುಗಚ್ಚೆಯಾಗಿ ಧರಿಸಿ, ಕುದುರೆ ಏರಿ ಯುದ್ಧ ಮಾಡಿದ ಉದಾಹರಣೆಗಳಿಲ್ಲವೆ ?

ಮಾನಸಿಕ ವೇದನೆಗಳಿಂದಾಗಿ ಕಣ್ಣಂಚಿನಲಿ ಉಕ್ಕಿ ಬರುವ ಹನಿಗಳನ್ನು ಒರೆಸಿ ಸಂತೈಸುವ ಸೀರೆಯ ಅಂಚು, ಮಿಠಾಯಿಗಾಗಿ ಹಠ ಹಿಡಿದ ಮಕ್ಕಳಿಗೆ ಬಿಡಿಕಾಸು ನೀಡಿ ಆನಂದಿಸಬಲ್ಲದು. ತನ್ನವರು ಗಾಯಗೊಂಡು ರಕ್ತ ಹರಿಸುತ್ತಿದ್ದರೆ ಮತ್ತದೇ ಸೀರೆಯ ಅಂಚು ತಾನು ಬೇರ್ಪಟ್ಟರೂ ಸರಿಯೇ ಉಪಚರಿಸಲು ಸದಾ ಸಿದ್ಧವಿರುತ್ತದೆ. ಹಿರಿಯರಿಗೆ ಸಲ್ಲುವ ಗೌರವದ ಪ್ರತೀಕವಾಗಿ ಸೆರಗನ್ನು ತಲೆಯ ಮೇಲೆ ಹೊತ್ತರೆ ಆ ಗಮ್ಮತ್ತೇ ಬೇರೆ. ಪೀತಾಂಬರ ತೊಟ್ಟ ಎಲ್ಲ ದೇವಿ ದೇವತೆಗಳೂ ಸರ್ವಾಲಂಕಾರ ಭೂಷಿತೆಯರಾಗಿ ಆಶೀರ್ವದಿಸುವ ಚಿತ್ರಣವೇ ವಿಶೇಷ. ಸೀರೆ ಸವೆದು, ದಂಡಿ ಹಚ್ಚಿಸಿಕೊಂಡು, ನಿತ್ರಾಣಗೊಂಡು ಮೂಲೆ ಸೇರಿದರೂ ಮರೆಗೆ ಸರಿಯುವುದಿಲ್ಲ. ಅದು ಕವದಿಯೊಂದರ ಲಾವಿಯಾಗಿ, ದುಬುಟಿಯಾಗಿ ಪಗಡೆಯ ಚಿತ್ತಾರಕ್ಕೆ ಮೈದಾನವಾಗಿ ಅರಳುವ ಪರಿಯನ್ನು ಮರೆಯುವದುಂಟೆ ? ಇಂದಿಗೂ ಸಹ ಸೀರೆಯುಟ್ಟ ನಾರಿಗೆ ದೊರೆಯುವ ಸಹಜ ಗೌರವಾದರಗಳು ಬೇರಾವ ದಿರಿಸು ಧರಿಸಿದವರಿಗೆ ದೊರೆಯಲು ಸಾಧ್ಯ ? ಮರೆಯದಿರು ನಾರಿಯೇ, ನಿನಗಿರುವಷ್ಟು ಗೌರವ ನೀ ಧರಿಸಿರುವ ಸೀರೆಗೂ ಇದೆ ! ಸೀರೆಯುಟ್ಟ ನಾರಿಯೇ, ನೀನೇ ಧನ್ಯ !

*ಧಾರವಾಡ* **ವಿಜಯಲಕ್ಷ್ಮೀ ಶಿ. ಶಿರೇಶಿ**

# ಅಭಿವೃದ್ಧಿಯು ಒಳಗೊಳ್ಳುವ ಸಂಗತಿಗಳಾವುವು ? ಕರ್ನಾಟಕದ ಅಭಿವೃದ್ಧಿಯ ಒಂದು ಮೌಲ್ಯಮಾಪನ

ಟಿ. ಆರ್. ಚಂದ್ರಶೇಖರ

ಅಭಿವೃದ್ಧಿ ಅನ್ನುವುದು, ಮಹಿಳೆಯರನ್ನೂ ಸೇರಿಸಿಕೊಂಡಂತೆ, ಜನರಿಗೆ ಸಂಬಂಧಿಸಿದ ಸಂಗತಿ. ಅದು ಸಾಮಾಜಿಕ ನ್ಯಾಯಕ್ಕೆ ಸಂಬಂಧಿಸಿದ ಸಂಗತಿ. ಅಲ್ಲಿ ಸಮಾನತೆ, ಸ್ವಾತಂತ್ರ್ಯ, ಘನತೆಯಿಂದ ಕೂಡಿದ ಬದುಕು, ಮಹಿಳೆಯರಿಗೆ ಗೌರವ ನೀಡುವುದು, ಸುಸ್ಥಿರಗತಿ ಮುಖ್ಯವಾಗಬೇಕು. ಪ್ರಜಾಪ್ರಭುತ್ವ ಅನ್ನುವುದು ಕೇವಲ ಜನರಿಗಾಗಿ – ಮುಂತಾದ ಸಂಗತಿಗಳು ಮಾತ್ರವಲ್ಲ. ಪ್ರಜಾಪ್ರಭುತ್ವಕ್ಕೆ 'ಗವರ್ನ್‌ಮೆಂಟ್ ಬೈ ಡಿಸ್‌ಕಶನ್' ಅನ್ನುವ ವಿವರಣೆ ಕೂಡ ಇದೆ. ಚರ್ಚೆಯ ಮೂಲಕ, ವಿಚಾರ ವಿನಿಮಯದ ಮೂಲಕ, ಸಂವಾದದ ಮೂಲಕ, ಅನುಸಂಧಾನದ ಮೂಲಕ ನಾವು ಅಭಿವೃದ್ಧಿಯನ್ನು ಪರಿಭಾವಿಸಿಕೊಳ್ಳುವ ಕ್ರಮವನ್ನು ರೂಪಿಸಿಕೊಳ್ಳುವ, ಕಂಡುಕೊಳ್ಳುವ ಅಗತ್ಯವಿದೆ. ಜನರನ್ನು ಒಳಗೊಳ್ಳುವುದರಲ್ಲಿ ನಮ್ಮ ಅಭಿವೃದ್ಧಿ ಯಾಕೆ ಸೋತಿದೆ ? ಉತ್ತರ ಸ್ಪಷ್ಟ. ಅದು ನಮ್ಮ ಗುರಿಯೇ ಆಗಿಲ್ಲ. ಬಡವರನ್ನು, ವಂಚಿತರನ್ನು, ಅಂಚಿನಲ್ಲಿರುವವರನ್ನು ಯಾಕೆ ಅಭಿವೃದ್ಧಿಯು ತನ್ನ ವ್ಯಾಪ್ತಿಯಲ್ಲಿ ಸೇರಿಸಿಕೊಳ್ಳುತ್ತಿಲ್ಲ ?














**ಸಾ**ಮಾಜಿಕ ಹೋರಾಟಗಾರ ಹರ್ಷ್ ಮಂದರ್ ಭಾರತದಲ್ಲಿನ ಇಂದಿನ ಅಭಿವೃದ್ಧಿ ಸಂಬಂಧಿ ಸ್ಥಿತಿಗತಿಯ ಬಗ್ಗೆ ಒಂದು ಮಾತು ಹೇಳುತ್ತಾನೆ. ಅದನ್ನು ಡ್ರೀಜ್ ಮತ್ತು ಸೇನ್ ತಮ್ಮ ಇಂಡಿಯಾ ಕುರಿತ ಇತ್ತೀಚಿಗಿನ ಕೃತಿ ('ದಿ ಅನ್‌ಸರ್ಟನ್ ಗ್ಲೋರಿ : ಇಂಡಿಯಾ ಆ್ಯಂಡ್ ಇಟ್ಸ್ ಕಾಂಟ್ರಡಿಕ್ಷನ್ಸ್' ೨೦೧೩ : ೨೬೫) ಉಲ್ಲೇಖಿಸುತ್ತಾರೆ. ಅವನ ಪ್ರಕಾರ 'ಬಡವರು, ಅಂಚಿನಲ್ಲಿರುವವರು, ವಂಚಿತರು ಅಭಿವೃದ್ಧಿ ವ್ಯಾಪ್ತಿಯಿಂದ ಮಾತ್ರ ಎಕ್ಸೈಲ್ ಆಗಿಲ್ಲ. ಅವರು ನಮ್ಮ ಸಮಾಜದ ಪ್ರತಿಷ್ಠಿತ ವರ್ಗದ ಅಂತಃಸಾಕ್ಷಿಯಿಂದಲೇ – ಅರಿವಿನಿಂದಲೇ ಹೊರ ದೂಡಲ್ಪಟ್ಟಿದ್ದಾರೆ'. ಈವತ್ತು ನಾವು ಅಭಿವೃದ್ಧಿಯನ್ನು ಪರಿಭಾವಿಸಿಕೊಳ್ಳುತ್ತಿರುವ ವಿನ್ಯಾಸವನ್ನು ಮತ್ತು ಅದನ್ನು ನಿರ್ವಹಿಸುತ್ತಿರುವ ಕ್ರಮವನ್ನು ಪ್ರತಿನಿಧಿಸುವ, ಇದಕ್ಕಿಂತ ಉತ್ತಮವಾದ, ಪ್ರತೀಕ/ಉಪಮೆ ಮತ್ತೊಂದು ಇರಲಾರದೆಂದು ಭಾವಿಸಿದ್ದೇನೆ. ನಮ್ಮ ರಾಜ್ಯದಲ್ಲಿ ಅನ್ನಭಾಗ್ಯ ಯೋಜನೆಯ ಬಗ್ಗೆ, ಅದನ್ನು ಪಡೆಯುತ್ತಿರುವ ಬಡವರ ಬಗ್ಗೆ, ವಂಚಿತರ ಬಗ್ಗೆ ಎಷ್ಟೊಂದು ಹಗುರವಾಗಿ, ಲಘುವಾಗಿ ಜನರು ಅಧಿಕಾರಸ್ಥರು ಮಾತನಾಡುತ್ತಾರೆ ಎಂಬುದನ್ನು ಗಮನಿಸಿದರೆ ಹರ್ಷ್ ಮಂದರ್ ಮಾತುಗಳ ಮಹತ್ವ ಅರ್ಥವಾಗುತ್ತದೆ. 'ಅನ್ನಭಾಗ್ಯದಿಂದ ಜನರು ಸೋಮಾರಿಗಳಾಗುತ್ತಾರೆ' ಅನ್ನುವ ಕಂಟೆಪ್ಟ್ ನಿಂದ ತುಂಬಿದ ಮಾತೇನಿದೆ ಅದು ದುಡಿಮೆಯ ಬಗ್ಗೆ, ದುಡಿಮೆಗಾರರ ಬಗ್ಗೆ ಜನರಲ್ಲಿರುವ ಹೇಯ ಮನೋಭಾವದ ಸಂಕೇತವಾಗಿದೆ. ಒಂದು ಕುಟುಂಬವು ಅನ್ನಭಾಗ್ಯ ಯೋಜನೆಯಿಂದ ಬಂದ ಅಕ್ಕಿಯನ್ನು ಮಾರುಕಟ್ಟೆಯಲ್ಲಿ ಮಾರಾಟ ಮಾಡಿ ತಿಂಗಳಿಗೆ ಸುಮಾರು ರೂ. ೩೦೦ ಹಣ ಪಡೆದುಕೊಂಡರೆ ಅವರು ಶ್ರೀಮಂತರಾಗಿಬಿಡುತ್ತಾರೆ ಅನ್ನುವ ಪ್ರತಿಪಾದನೆಯೇನಿದೆ ಅದು ಅಸಹ್ಯಕರವಾದ ಪ್ರತಿಕ್ರಿಯೆಯಾಗಿದೆ.

ಇಂದು ನಮಗೆ ದೇಶವನ್ನು/ಆರ್ಥಿಕತೆಯನ್ನು ಸಮೃದ್ಧಗೊಳಿಸುವುದು ಹೇಗೆ?
ನಮ್ಮ ಆರ್ಥಿಕತೆಯನ್ನು ಸೂಪರ್ ಪವರ್ ಮಾಡುವುದು ಹೇಗೆ ?
ಜಿಡಿಪಿಯನ್ನು ಶೇ. ೧೦ಕ್ಕೆ ಏರಿಸುವುದು ಹೇಗೆ ?
ಸ್ಮಾರ್ಟ್ ಸಿಟಿಗಳನ್ನು ಕಟ್ಟುವುದು ಹೇಗೆ ?

ಎಕ್ಸ್‌ಪ್ರೆಸ್ ಹೈವೇಗಳನ್ನು – ಇಂಡಸ್ಟ್ರಿಯಲ್ ಕಾರಿಡಾರುಗಳನ್ನು ನಿರ್ಮಿಸುವುದು ಹೇಗೆ ?

ನೀರು, ಭೂಮಿ, ಇಂಧನ ಮತ್ತು ಕಚ್ಚಾ ಸಾಮಗ್ರಿಗಳನ್ನು ಅನಿರ್ಬಂಧಿತವಾಗಿ ಉದ್ದಿಮೆಗಳಿಗೆ ಸರಬರಾಜು ಮಾಡುವುದು ಹೇಗೆ ?

ಗವರ್ನ್‌ಮೆಂಟಿನ ಪಾತ್ರವನ್ನು ಕನಿಷ್ಠಗೊಳಿಸುವುದು ಹೇಗೆ ?

ಖಾಸಗಿ ಮಾರುಕಟ್ಟೆಯನ್ನು ಬಲಗೊಳಿಸುವುದು ಹೇಗೆ ?

ಪರಿಸರದ ಪ್ರಶ್ನೆಯನ್ನು ಆನುಷಂಗಿಕವನ್ನಾಗಿ ಮಾಡಿ ಉತ್ಪಾದನೆಯನ್ನು ಪ್ರಧಾನವನ್ನಾಗಿ ಮಾಡುವುದು ಹೇಗೆ ?

– ಇವೇ ಮುಂತಾದುವು ಇಂದು ನಮ್ಮ ಅಭಿವೃದ್ಧಿ ಪ್ರಣಾಳಿಕೆಯ ಆಚಾರ್ಯ ಸದೃಶ ಸಂಗತಿಗಳಾಗಿಬಿಟ್ಟಿವೆ. 'ಮೇಕ್ ಇನ್ ಇಂಡಿಯಾ' ಅನ್ನುವ ಘೋಷವಾಕ್ಯವೇನಿದೆ ಅದು ಯಾರನ್ನು ಗುರಿಯಾಗಿಟ್ಟುಕೊಂಡಿದೆ ಎಂಬುದನ್ನು ಹೇಳಬೇಕಾದ ಅಗತ್ಯವಿಲ್ಲ. ಅದರ ಗುರಿ ಮೊದಲನೆಯದಾಗಿ ವಿದೇಶಿ ಬಂಡವಾಳ–ತಂತ್ರಜ್ಞಾನ, ಎರಡನೆಯದಾಗಿ ವಿದೇಶಿ ಮಾರುಕಟ್ಟೆ–ರಫ್ತು ಮಾರುಕಟ್ಟೆ.

ಭಾರತದಲ್ಲಿ ತಯಾರು ಮಾಡಬೇಕು, ಭಾರತದಲ್ಲಿ ಉತ್ಪಾದನೆ ಮಾಡಬೇಕು, ಅಷ್ಟೇ !

ಯಾರಿಗೆ ತಯಾರು ಮಾಡಬೇಕು, ಯಾರು ತಯಾರು ಮಾಡಬೇಕು ?

– ಇವೆಲ್ಲ ಆನುಷಂಗಿಕ. ಉತ್ಪಾದನೆ ಮಾಡುವುದು ಬಡವರಿಗೆ, ವಂಚಿತರಿಗೆ, ಸಮಾಜದಲ್ಲಿ ಅಂಚಿನಲ್ಲಿರುವವರಿಗೆ ಅಲ್ಲ. ಆ ಘೋಷವಾಕ್ಯದಲ್ಲಿ ಉತ್ಪಾದನೆ ಪ್ರಧಾನವೇ ವಿನಾ ಅದು ಯಾರಿಗಾಗಿ ಅನ್ನುವುದು ಮುಖ್ಯವಲ್ಲ. ಈ ಪ್ರಶ್ನೆಗಳು ಇಲ್ಲಿ ಅಮುಖ್ಯ. ನಿಜವಾಗಿ ಅರ್ಥಶಾಸ್ತ್ರದಲ್ಲಿ ನಾವು ಮಕ್ಕಳಿಗೆ ಮೊದಲ ಪಾಠದಲ್ಲಿ ಹೇಳಿಕೊಡುವುದೇನೆಂದರೆ ಅರ್ಥಶಾಸ್ತ್ರದ ಪ್ರಕಾರ ಆರ್ಥಿಕತೆಯಲ್ಲಿನ ಮೊದಲ ಮೂರು ಮೂಲ ಪ್ರಶ್ನೆಗಳು ಇವು :

"ಏನನ್ನು ಉತ್ಪಾದಿಸಬೇಕು ?"

"ಹೇಗೆ ಉತ್ಪಾದಿಸಬೇಕು ?"

"ಯಾರಿಗಾಗಿ ಉತ್ಪಾದಿಸಬೇಕು ?"

ಇಂದು ಉತ್ಪಾದನೆ, ಬಂಡವಾಳ, ವರಮಾನ, ಉದ್ದಿಮೆ ಸಂಬಂಧಿತ ವಿಚಾರಗಳಲ್ಲಿ ಮುಖ್ಯವಾಗಿ ಏನನ್ನು ಉತ್ಪಾದಿಸಬೇಕು, ಹೇಗೆ ಉತ್ಪಾದಿಸಬೇಕು ಮತ್ತು ಯಾರಿಗಾಗಿ ಉತ್ಪಾದಿಸಬೇಕೆಂಬ ಸಂಗತಿಗಳು ಮೂಲೆಗುಂಪಾಗಿಬಿಟ್ಟಿವೆ. 'ಯಾರಿಗಾಗಿ?' ಅನ್ನುವ ಪ್ರಶ್ನೆಯನ್ನು ಎದುರಿಸುವುದು ಸರ್ಕಾರದ ಕೆಲಸವಲ್ಲ ಎಂಬುದು ಇಂದು ಗಟ್ಟಿಯಾಗಿ ನೆಲೆಗೊಂಡ ಸಂಗತಿಯಾಗಿದೆ. 'ಯಾರಿಗಾಗಿ' ಅಂದರೆ ಮಾರುಕಟ್ಟೆಯಲ್ಲಿ ಕೊಳ್ಳುವ ಸಾಮರ್ಥ್ಯ ಯಾರಿಗಿದೆಯೋ ಅವರಿಗೆ ಉತ್ಪಾದನೆ ಅನ್ನುವುದು ಇಲ್ಲಿನ ನಿಯಮ. "ಮಿನಿಮಮ್ ಗವರ್ನ್‌ಮೆಂಟ್, ಮ್ಯಾಕ್ಸಿಮಮ್ ಗವರ್ನೆನ್ಸ್" ಅನ್ನುವುದರ ಅರ್ಥ ಇದೇ ಆಗಿದೆ. ಯಾರಿಗಾಗಿ ಅನ್ನುವುದನ್ನು ಮಾರುಕಟ್ಟೆ ನಿರ್ಧರಿಸಬೇಕು ಎಂಬುದು ಇಂದು ಪ್ರತಿಪಾದಿತವಾಗುತ್ತಿರುವ ಪ್ರಣಾಳಿಕೆಯಾಗಿದೆ. ಒಟ್ಟಾರೆ, ಮೆಹಬೂಬ್ ಉಲ್ ಹಕ್ ೧೯೯೦ರಲ್ಲಿ ಹೇಳಿದಂತೆ ನಮ್ಮ ಅಭಿವೃದ್ಧಿ ಪ್ರಣಾಳಿಕೆಯಲ್ಲಿ, ಮಹಿಳೆಯರನ್ನೂ ಸೇರಿಸಿದಂತೆ, 'ಜನರು' ಕಾಣೆಯಾಗಿದ್ದಾರೆ ಮತ್ತು 'ಜನರ ಜೀವನೋಪಾಯ' ಮೂಲೆಗುಂಪಾಗಿದೆ. ಅಲ್ಲಿ ಉದ್ದಿಮೆ, ಉತ್ಪಾದನೆ, ಬಂಡವಾಳ, ಮಾರುಕಟ್ಟೆ, ಲಾಭ, ಪೈಪೋಟಿ, ಉತ್ಕೃಷ್ಟತೆ, ಸ್ವಚ್ಛತೆ, ಶ್ರೇಷ್ಠತೆ ಮುಂತಾದವು ಅಭಿವೃದ್ಧಿಯನ್ನು ನಿರ್ದೇಶಿಸುವ ಸೂತ್ರಗಳಾಗಿವೆ. ಒಂದು ಕಾಲಕ್ಕೆ ಮಾರುಕಟ್ಟೆಯನ್ನು ಸರ್ಕಾರ ನಿಯಂತ್ರಿಸಬೇಕು ಎಂಬ ಸಂಗತಿ ಚರ್ಚೆಯ ವಸ್ತುವಾಗಿತ್ತು. ಆದರೆ ಇಂದು ಅದು ತಿರುವುಮುರುವಾಗಿ ಮಾರುಕಟ್ಟೆಯು ಸರ್ಕಾರವನ್ನು ನಿಯಂತ್ರಿಸುವ ಕ್ರಮಗಳು ಚರ್ಚೆಯ ವಸ್ತುವಾಗಿವೆ. ಮಾರುಕಟ್ಟೆಯು ಪ್ರಧಾನವಾಗಿ ಸರ್ಕಾರವು ಆನುಷಂಗಿಕವಾಗಿದೆ. ನಮ್ಮ ಸಮಾಜವು ಇಂದು ಮಾರುಕಟ್ಟೆ ಪ್ರಣೀತ ಆರ್ಥಿಕ ನೀತಿಯನ್ನು ಒಪ್ಪಿಕೊಂಡುಬಿಟ್ಟಿದೆ. ಮಾರುಕಟ್ಟೆಯನ್ನು ನೆಮ್ಮಿಕೊಳ್ಳದೆ ಬೇರೆ ಪರ್ಯಾಯವಿಲ್ಲ ಎಂಬ ನೆಲೆಗೆ ನಮ್ಮ ಸಮಾಜ ಬಂದು ನಿಂತಿದೆ.

**ಅಭಿವೃದ್ಧಿ ಯಾರಿಗಾಗಿ ?**

ಅಭಿವೃದ್ಧಿ ಯಾರಿಗಾಗಿ ಅನ್ನುವುದು ಅತ್ಯಂತ ನಿರ್ಣಾಯಕ ಸಂಗತಿಯಾಗಿದೆ. ಈ ಕಾರಣಕ್ಕೆ ಅಮರ್ತ್ಯ ಸೇನ್ 'ಹಸಿವು ಅನ್ನುವುದು ಆಹಾರ ಇಲ್ಲದಿರುವುದರ ಸಮಸ್ಯೆಯಲ್ಲ : ಅದು ಕೆಲವರಿಗೆ ದೊರೆಯದಿರುವುದು ಸಮಸ್ಯೆ' ಎಂದು ಹೇಳಿದ್ದಾರೆ.

ಈ ಪ್ರಶ್ನೆಯನ್ನು ಎದುರಿಸಬೇಕು ಅನ್ನುವುದಾದರೆ ನಾವು 'ಅಭಿವೃದ್ಧಿ ಯಾರಿಗಾಗಿ' ಅನ್ನುವುದನ್ನು ಮುಖ್ಯ ಸಂಗತಿಯನ್ನಾಗಿ ಪರಿಗಣಿಸಬೇಕಾಗುತ್ತದೆ. ಇಲ್ಲಿ ಗವರ್ನ್‌ಮೆಂಟ್‌ನ ಪಾತ್ರ ನಿರ್ಣಾಯಕವಾದುದಾಗಿದೆ. ನಮ್ಮ ಸಂದರ್ಭದಲ್ಲಿ ಗವರ್ನೆನ್ಸ್ ಎಷ್ಟು ಮುಖ್ಯವೋ ಗವರ್ನ್‌ಮೆಂಟ್ ಕೂಡ ಮುಖ್ಯ. ಎರಡರ ನಡುವೆ ಸಮತೋಲನವನ್ನು ಸಾಧಿಸಿಕೊಳ್ಳಬೇಕಾಗುತ್ತದೆ. ಇಂದು ನಮಗೆ ಮ್ಯಾಕ್ಸಿಮಮ್ ಗವರ್ನ್‌ಮೆಂಟ್ ಮತ್ತು ಮ್ಯಾಕ್ಸಿಮಮ್ ಗವರ್ನೆನ್ಸ್ ಬೇಕಾಗಿದೆ. ಬಡವರ, ಹಸಿದವರ, ಅಲ್ಪಸಂಖ್ಯಾತರ, ಮಹಿಳೆಯರ ಸಮಸ್ಯೆಗಳನ್ನು ಗವರ್ನೆನ್ಸ್‌ಗೆ ಬಿಟ್ಟುಕೊಡುವ ಹಂತದಲ್ಲಿ ನಮ್ಮ ಸಮಾಜ ಇಲ್ಲ. ನಾವು ಬಯಸಲಿ, ಬಯಸದಿರಲಿ ಗವರ್ನ್‌ಮೆಂಟ್ ನಮ್ಮ ಸಂದರ್ಭದಲ್ಲಿ ಬಹಳ ಮುಖ್ಯ.

ಇಂದಿನ ಅಭಿವೃದ್ಧಿ ಪ್ರಣಾಳಿಕೆಯ ಮೂಲದಲ್ಲಿರುವ ಸೂತ್ರ ಇದು :–

'ಅಭಿವೃದ್ಧಿಗಾಗಿ ಜನರೇ ವಿನಾ ಜನರಿಗಾಗಿ ಅಭಿವೃದ್ಧಿಯಲ್ಲ'.

ಅಂದರೆ, ಇಲ್ಲಿ ಜನರು ಕೇವಲ ಅಭಿವೃದ್ಧಿಯ ಸಾಧನ–ಸಂಪನ್ಮೂಲ. ಇದನ್ನೇ ನಾವು 'ಹ್ಯೂಮನ್ ರಿಸೋರ್ಸ್' ಅನ್ನುತ್ತೇವೆ. ಜನರಲ್ಲಿ ಸಾಧನ–ಸಂಪನ್ಮೂಲ ಇದೆ. ಆದರೆ ಜನರೇ ಸಂಪನ್ಮೂಲವಲ್ಲ. ಇಂದು ಜನರನ್ನು 'ರಿಸೋರ್ಸ್' ಮಟ್ಟಕ್ಕೆ ಇಳಿಸಿಬಿಟ್ಟಿದ್ದೇವೆ. ಈ ವಿಷಯ ಕುರಿತಂತೆ ಸರಿಯಾದ ದೃಷ್ಟಿಕೋನಕ್ಕೆ ನಾವು ೧೯೮೬ರಲ್ಲಿ ವಿಶ್ವಸಂಸ್ಥೆಯು ಪ್ರಕಟಿಸಿರುವ ಅಭಿವೃದ್ಧಿ ಹಕ್ಕಿನ ಘೋಷಣೆಯಲ್ಲಿನ ಮೊದಲ ಆರ್ಟಿಕಲ್‌ಅನ್ನು ನೋಡಬೇಕು. ಅಲ್ಲಿ ಅಭಿವೃದ್ಧಿಯನ್ನು ಹೀಗೆ ನಿರ್ವಚಿಸಲಾಗಿದೆ :

"ಅಭಿವೃದ್ಧಿ ಹಕ್ಕು ಅನ್ನುವುದು ಜನತೆಯಿಂದ ಬೇರ್ಪಡಿಸಲಾಗದ ಮಾನವ ಹಕ್ಕು. ಅದರ ಕಾರಣದಿಂದ ಅಭಿವೃದ್ಧಿಯಲ್ಲಿ ಪಾಲುಗೊಳ್ಳಲು, ಅದಕ್ಕೆ ಕಾಣಿಕೆ ಸಲ್ಲಿಸಲು ಮತ್ತು ಅದನ್ನು ಅನುಭವಿಸಲು ಪ್ರತಿಯೊಬ್ಬರೂ ಮತ್ತು ಎಲ್ಲರೂ ಅಧಿಕಾರ ಪಡೆದಿದ್ದಾರೆ."

ಜನರು ಅಭಿವೃದ್ಧಿಯ ಸಾಧನ–ಸಂಪನ್ಮೂಲ ಮಾತ್ರವಲ್ಲ. ಅವರು ನಿಜವಾಗಿ ಅಭಿವೃದ್ಧಿಯ ಅಂತಿಮ ಗಂತವ್ಯವಾಗಿದ್ದಾರೆ. ಅಭಿವೃದ್ಧಿ ಜನರಿಗಾಗಿಯೇ ವಿನಾ ಅಭಿವೃದ್ಧಿಗಾಗಿ ಜನರಲ್ಲ. ಆದರೆ ಇಂದು ಜನರು ದೇಶಕ್ಕಾಗಿ ತ್ಯಾಗ ಮಾಡಬೇಕು, ಉದ್ದಿಮೆಗಳ ಅಭಿವೃದ್ಧಿಗಾಗಿ ಜನರು ಭೂಮಿಯನ್ನು ಬಿಟ್ಟುಕೊಡಬೇಕು ಎಂಬ ಮಾತುಗಳು ಕೇಳಿಬರುತ್ತಿವೆ. ಮೇಲಿನ ಘೋಷಣೆಯಲ್ಲಿ ಮೂರು ಮುಖ್ಯ ಸಂಗತಿಗಳಿವೆ :

೧. ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಜನರು ಪಾಲುಗೊಳ್ಳಬೇಕು.
೨. ಅಭಿವೃದ್ಧಿಗೆ ಜನರು ಕಾಣಿಕೆ ನೀಡಬೇಕು (ಕಾಂಟ್ರಿಬ್ಯೂಷನ್).
೩. ಅಭಿವೃದ್ಧಿಯ ಫಲಗಳನ್ನು ಜನರು ಅನುಭವಿಸಬೇಕು.

ಮೊದಲ ಎರಡು ಸಂಗತಿಗಳ ಬಗ್ಗೆ ನಾವು ತುಂಬ ಚರ್ಚೆ ಮಾಡುತ್ತಿದ್ದೇವೆ. ಅವುಗಳ ಬಗ್ಗೆ ನಾವು ಜಾಗೃತರಾಗಿದ್ದೇವೆ. ಆದರೆ ಮೂರನೆಯ ಸಂಗತಿಯ ಬಗ್ಗೆ ನಾವು ಚರ್ಚೆ ಮಾಡುತ್ತಿಲ್ಲ. ಅದನ್ನು ಆನುಷಂಗಿಕವನ್ನಾಗಿ ಮಾಡಿದ್ದೇವೆ, ಅಷ್ಟೆ. ಏಕೆಂದರೆ ಹರ್ಷ್ ಮಂದರ್ ಹೇಳುವಂತೆ ಜನರು ನಮ್ಮ ಅರಿವಿನಿಂದ, ಅಂತಃಸಾಕ್ಷಿಯಿಂದ ಗಡೀಪಾರು ಮಾಡಲ್ಪಟ್ಟಿದ್ದಾರೆ.

**ಜಿಡಿಪಿ ಏರಿಕೆಯೇ ಅಭಿವೃದ್ಧಿಯಲ್ಲ !**

ಇಂದು ಜಿಡಿಪಿಯನ್ನು ಅಧಿಕಾರಸ್ಥರು ವ್ಯಸನದಂತೆ ಜಪಿಸುತ್ತಿದ್ದಾರೆ. ಜಿಡಿಪಿಯ ಬೆಳವಣಿಗೆ ಪ್ರಮಾಣ ವಾರ್ಷಿಕ ಶೇ. ೧೧ರಷ್ಟಾದರೆ ಜನರ ಸಮಸ್ಯೆಗಳಾದ



ಪ್ರೊ॥ ಡಿ. ರಘುನಾಥರಾವ್

ತೆರೆಮರೆಯಲ್ಲೇ ಇದ್ದು ವಿಮರ್ಶಕರಾಗಿ, ಲೇಖಕರಾಗಿ ಕನ್ನಡ ಸಾಹಿತ್ಯವಲಯದಲ್ಲಿ ಗೌರವಾದರದ ಸ್ಥಾನ ಹೊಂದಿದ್ದ ಪ್ರೊ॥ ಡಿ. ರಘುನಾಥರಾವ್ ಮೇ ೭, ೨೦೧೫ರಂದು ಬೆಂಗಳೂರಿನಲ್ಲಿ ನಿಧನರಾದರೆಂದು ತಿಳಿಸಲು ವಿಷಾದಿಸುತ್ತೇವೆ. ಮುಲ್ಕಿಯ ವಿಜಯ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ ವಿದ್ಯಾರ್ಥಿಗಳ ವಿಶೇಷ ಮನ್ನಣೆಗೆ ಪಾತ್ರರಾಗಿದ್ದ ರಘುನಾಥರಾವ್ ಅವರು ರಚಿಸಿದ್ದ 'ತತ್ವಪದಕಾರರು ಮತ್ತು ವಸಾಹತುಶಾಹಿ ವ್ಯವಸ್ಥೆ' ಎಂಬ ಕೃತಿಯನ್ನು ೨೦೦೮ರಲ್ಲಿ ನವಕರ್ನಾಟಕ ಪ್ರಕಾಶನ ಪ್ರಕಟಿಸಿತ್ತು. ದಿವಂಗತರಿಗೆ 'ನವಕರ್ನಾಟಕ' ಮತ್ತು 'ಹೊಸತು' ಬಳಗದ ನಮನಗಳು.

ಬಡತನ, ಹಸಿವು, ಅಸಮಾನತೆ, ತಾರತಮ್ಯ, ಅಪೌಷ್ಟಿಕತೆ ಮುಂತಾದುವು ತಮ್ಮಷ್ಟಕ್ಕೆ ತಾವೇ ನಿವಾರಣೆಯಾಗಿ ಬಿಡುತ್ತವೆ ಎಂಬ ನಂಬಿಕೆ ಇಲ್ಲಿದೆ. ಬಡತನದಂತಹ ಸಮಸ್ಯೆಯನ್ನು ನೇರವಾಗಿ ನಿರ್ವಹಿಸುವ ಅಗತ್ಯವಿಲ್ಲ ಎಂಬ ನಂಬಿಕೆಯು ಇಲ್ಲಿದೆ. ಅಭಿವೃದ್ಧಿಯ ನೇರ ಗುರಿ ಬಡತನದ ನಿವಾರಣೆಯಲ್ಲ. ಅದೊಂದು ಉಪಉತ್ಪನ್ನ ಗುರಿ ಮಾತ್ರವಾಗಿದೆ. ಏರಿಕೆಯಾದ ವರಮಾನ, ಹೂಡಿಕೆಯಾದ ಬಂಡವಾಳ, ಅಧಿಕಗೊಂಡ ಉತ್ಪಾದನೆ ಮುಂತಾದುವು ತಮ್ಮಷ್ಟಕ್ಕೆ ತಾವು ಸಮಾಜದ ಜನರೆಲ್ಲರಿಗೂ ಸಮಾನವಾಗಿ ಒದಗುತ್ತವೆ ಎಂಬುದು ಇಲ್ಲಿನ ಮತ್ತೊಂದು ಗೃಹೀತವಾದ ಅಂಶ. ಈ ಬಗೆಯ ಅಭಿವೃದ್ಧಿ ಪ್ರಣಾಳಿಕೆಯಲ್ಲಿ ಮಹಿಳೆಯರ ಸಮಸ್ಯೆಗಳು ಅನ್ನುವುದು ಪ್ರತ್ಯೇಕವಾಗಿ ನಿರ್ವಹಿಸಬೇಕಾದ ಸಂಗತಿಯಲ್ಲ. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಹಿಂದುಳಿದ ವರ್ಗ, ಅಲ್ಪಸಂಖ್ಯಾತರು ಮುಂತಾದ ಸಾಮಾಜಿಕ ಗುಂಪುಗಳ ಬಗ್ಗೆ ವಿಶೇಷ ಗಮನ ನೀಡುವ ಅಗತ್ಯವಿಲ್ಲ ಎಂಬ ಪ್ರಮೇಯವೂ ಇಲ್ಲಿ ಕೆಲಸ ಮಾಡುತ್ತಿದೆ. ವರಮಾನದಲ್ಲಿ, ಅಂದರೆ ಜಿಡಿಪಿಯಲ್ಲಿ ಏರಿಕೆಯಾಗಿಬಿಟ್ಟರೆ ಸಮಾಜದಲ್ಲಿರುವ ಎಲ್ಲ ಜನವರ್ಗಗಳಿಗೂ ಅದರ ಫಲಗಳು ದೊರೆಯುತ್ತವೆ ಎಂಬುದು ಇಲ್ಲಿ ಇರುವ ಮತ್ತೊಂದು ನಂಬಿಕೆ. ವ್ಯಕ್ತಿಗಳು ಶ್ರೀಮಂತರಾದರೆ ಆರ್ಥಿಕತೆಯೂ ಶ್ರೀಮಂತ ವಾಗುತ್ತದೆ ಎಂಬುದು ಇಲ್ಲಿನ ಪ್ರಣಾಳಿಕೆಯಾಗಿದೆ.

ಅಭಿವೃದ್ಧಿ ಅನ್ನುವುದು ಕೇವಲ ಜಿಡಿಪಿಯ ಏರಿಕೆಗೆ, ಬಂಡವಾಳ ಹೂಡಿಕೆಗೆ, ಥಳಥಳನೆ ಹೊಳೆಯುವ ರಸ್ತೆಗಳಿಗೆ, ಝಗಮಗಿಸುವ ಕಟ್ಟಡಗಳಿಗೆ ಸಂಬಂಧಿಸಿದ ಸಂಗತಿಯಲ್ಲ. ಅಭಿವೃದ್ಧಿಗೆ ಬಂಡವಾಳ ಬೇಕು, ವರಮಾನದಲ್ಲಿ ಏರಿಕೆಯಾಗಬೇಕು ಮತ್ತು ಉತ್ಪಾದನೆಯಲ್ಲಿ ಹೆಚ್ಚಳವಾಗಬೇಕು. ರಸ್ತೆಗಳು ಬೇಕು. ಭಾರಿ ಕಟ್ಟಡಗಳು ಬೇಕು. ಆದರೆ ಈ ಪ್ರಕ್ರಿಯೆಗಳೇ ಅಭಿವೃದ್ಧಿಯಲ್ಲ. ಈ ಕಾರಣಕ್ಕೆ ಜೋಸೆಫ್ ಸ್ಟಿಗ್‌ಲಿಟ್ಜ್ ಅಭಿವೃದ್ಧಿಯನ್ನು ಹೀಗೆ ನಿರ್ವಚಿಸುತ್ತಾನೆ :

"ಅಭಿವೃದ್ಧಿ ಅನ್ನುವುದು ಸಮಾಜದ ಪರಿವರ್ತನೆಗೆ, ಬಡವರ ಬದುಕನ್ನು ಉತ್ತಮಪಡಿಸುವುದಕ್ಕೆ ಮತ್ತು ಪ್ರತಿಯೊಬ್ಬರಿಗೂ ಆರೋಗ್ಯ ಸೇವೆ ಮತ್ತು ಶಿಕ್ಷಣ ದೊರಕಿಸಿಕೊಳ್ಳುವುದರಲ್ಲಿ ಯಶಸ್ವಿಯಾಗುವ ಪ್ರಕ್ರಿಯೆಗೆ ಸಂಬಂಧಿಸಿದೆ." ಇಲ್ಲಿ ವರಮಾನದ ಬಗ್ಗೆ ಉಲ್ಲೇಖವಿಲ್ಲ. ಬಂಡವಾಳದ ಮಾತಿಲ್ಲ. ಇಲ್ಲಿ ಬಡವರ ಬಗ್ಗೆ, ಶಿಕ್ಷಣದ ಬಗ್ಗೆ, ಆರೋಗ್ಯ ಸೇವೆಯ ಬಗ್ಗೆ ಮತ್ತು ಪ್ರತಿಯೊಬ್ಬರಿಗೂ ಇವು ದೊರೆಯಬೇಕು ಎಂಬುದರ ಬಗ್ಗೆ ಚರ್ಚೆಯಿದೆ.

**ಅಭಿವೃದ್ಧಿ ಅಂದರೇನು ?**

ಮೂಲಭೂತವಾಗಿ ಅಭಿವೃದ್ಧಿ ಅನ್ನುವುದು ಜನರಿಗೆ ಸಂಬಂಧಿಸಿದ ಸಂಗತಿ. ಅಭಿವೃದ್ಧಿಯು ಯಾವುದೋ ಜಡ / ನಿರ್ಜೀವ ಅಂಕಿಅಂಶಗಳಿಗೆ ಸಂಬಂಧಿಸಿದ ಸಂಗತಿಯಲ್ಲ. ಅದೊಂದು ಜೀವಂತ, ಸೃಜನಶೀಲ ಪ್ರಕ್ರಿಯೆ. ಅದು ಜನರನ್ನು ಒಳಗೊಳ್ಳುವ ಒಂದು ಕ್ರಮ. 'ಜನರು' ಅನ್ನುವುದು ಅಖಂಡವಾದ ಸಂಗತಿಯಲ್ಲ. ಅರ್ಥಶಾಸ್ತ್ರದಲ್ಲಿ ಪ್ರತಿಯೊಂದನ್ನು ಅಖಂಡವಾಗಿ ಪರಿಭಾವಿಸಿಕೊಳ್ಳುವ ರೂಢಿಯಿದೆ. ಆದರೆ ಅದು ನಮ್ಮನ್ನು ದಾರಿ ತಪ್ಪಿಸುತ್ತದೆ. ಅವುಗಳನ್ನು ಇಡಿಯಾಗಿ




ನೋಡುವುದಕ್ಕೆ ಪ್ರತಿಯಾಗಿ ಬಿಡಿಬಿಡಿಯಾಗಿ ನೋಡುವ ಅಗತ್ಯವಿದೆ. ಅಲ್ಲಿ ಲಿಂಗ ಸಂಬಂಧಿ ಆಯಾಮವಿದೆ. ಸಾಮಾಜಿಕ ಪ್ರತ್ಯೇಕತನದ ಸಂಗತಿ ಇದೆ. ಅಲ್ಪಸಂಖ್ಯಾತರ ಸಮಸ್ಯೆಗಳಿವೆ. ಈ ಎಲ್ಲ ಜನವರ್ಗಕ್ಕೂ ಏರಿಕೆಯಾದ ವರಮಾನದ ಮೇಲೆ ಅಧಿಕಾರವಿದೆ. ಈ ಅಧಿಕಾರವನ್ನು ಸ್ಥಾಪಿಸಲು, ಚಲಾಯಿಸಲು, ಜನರಲ್ಲಿ ಧಾರಣಾ ಸಾಮರ್ಥ್ಯವಿರಬೇಕು. ಏರಿಕೆಯಾದ ವರಮಾನದಲ್ಲಿ ತಮ್ಮ ಪಾಲನ್ನು ಪಡೆಯಲು, ಅಭಿವೃದ್ಧಿಯ ಫಲಗಳನ್ನು, ಧಾರಣೆ ಮಾಡಿಕೊಳ್ಳಲು, ಅದನ್ನು ಅನುಭವಿಸಲು ಜನರು ಅಕ್ಷರಸ್ಥರಾಗಿರಬೇಕು, ಆರೋಗ್ಯಕಾಯರಾಗಿರ ಬೇಕು, ಜನರು ಘನತೆಯಿಂದ ಬದುಕುವುದು ಸಾಧ್ಯ ವಾಗಬೇಕು. ಸಮಾನತೆ ಅನ್ನುವುದು ತನ್ನಷ್ಟಕ್ಕೆ ತಾನೆ ಪ್ರಾಪ್ತವಾಗುವ ಸಂಗತಿಯಲ್ಲ. ಅದಕ್ಕೆ ಪ್ರಜ್ಞಾಪೂರ್ವಕ ಪ್ರಯತ್ನ ಬೇಕಾಗುತ್ತದೆ. ಜನರಿಗೆ ಧಾರಣಾ ಸಾಮರ್ಥ್ಯ ಅನ್ನುವುದು ಅಕ್ಷರ ಸಂಸ್ಕೃತಿಯಿಂದ, ಆರೋಗ್ಯದಿಂದ, ಸಮಾನತೆ ಮೌಲ್ಯದಿಂದ, ಸ್ವಾತಂತ್ರ್ಯದಿಂದ, ಆಹಾರ ಭದ್ರತೆಯಿಂದ ಪ್ರಾಪ್ತವಾಗುವ ಸಂಗತಿಯಾಗಿದೆ. ಅಕ್ಷರ, ಆರೋಗ್ಯ, ಆಹಾರ, ಆದಾಯ, ಸಮಾನತೆ, ಸ್ವಾತಂತ್ರ್ಯ, ಸಾಮಾಜಿಕ ನ್ಯಾಯ, ಮಹಿಳೆಯರಿಗೆ ಗೌರವ ಮುಂತಾದುವು ಅಭಿವೃದ್ಧಿಯ ಅವಿಭಾಜ್ಯ ಅಂಗಗಳು.

ಅಭಿವೃದ್ಧಿ ಅನ್ನುವುದು ಜನರ ಹಕ್ಕು. ಅದು ಹಂಗಿನ ಅಥವಾ ಚಾರಿಟಿಯ ಸಂಗತಿಯಲ್ಲ. ಆದರೆ ಇಲ್ಲಿ ಉಂಟಾಗಿರುವ ವಿಕೃತಿಯನ್ನು ಗಮನಿಸಬೇಕು. ಇಂದು ಬಂಡವಾಳದ, ಬಂಡವಾಳಿಗರ, ಉದ್ದಿಮೆಗಳ, ವ್ಯಾಪಾರದ, ವ್ಯಾಪಾರಿಗಳ ಹಕ್ಕುಗಳ ಬಗ್ಗೆ ಹೆಚ್ಚು ಮಾತನಾಡ ಲಾಗುತ್ತಿದೆಯೇ ವಿನಾ ಕಾರ್ಮಿಕರ, ರೈತಾಪಿಗಳ, ನೌಕರರ, ಮಹಿಳೆಯರ, ಅಲ್ಪಸಂಖ್ಯಾತರ ಹಕ್ಕುಗಳ ಬಗ್ಗೆ ಮಾತನಾಡುತ್ತಿಲ್ಲ. ಇಂದು ಅಭಿವೃದ್ಧಿಯನ್ನು ದಾನ–ದತ್ತಿಯ ಸಂಗತಿಯನ್ನಾಗಿ ಮಾಡಲಾಗಿದೆ. ದೇಶ ಮುಖ್ಯ, ನಿಜ. ಆದರೆ ದೇಶ ಅನ್ನುವುದು ಜನರಿಗೆ ಸಂಬಂಧಿಸಿದ ಸಂಗತಿ ತಾನೇ! ಈ ಕಾರಣಕ್ಕೆ ಅಭಿವೃದ್ಧಿಯ ನಿರ್ವಚನಕ್ಕೆ ಸಂಬಂಧಿಸಿದಂತೆ ಅಮರ್ತ್ಯ ಸೇನ್ ಮತ್ತೆ ಮತ್ತೆ ಹೇಳುವ ಮಾತುಗಳು ಇವು :

"ಅಭಿವೃದ್ಧಿ ಅನ್ನುವುದು ಜನರ ಬದುಕನ್ನು ಉತ್ತಮ ಪಡಿಸುವ ಪ್ರಕ್ರಿಯೆಗೆ ಸಂಬಂಧಿಸಿದ ಸಂಗತಿಯೇ ವಿನಾ ಅದು ಆರ್ಥಿಕತೆಯನ್ನು ಸಮೃದ್ಧಗೊಳಿಸು ವುದಕ್ಕೆ ಸಂಬಂಧಿಸಿದ ಸಂಗತಿಯಲ್ಲ."

**ಅಭಿವೃದ್ಧಿಯಲ್ಲಿ ಸಮಾನತೆಯ ಪ್ರಶ್ನೆ**

ವಿಶ್ವಸಂಸ್ಥೆಯ 'ರೈಟು ಟು ಡೆವಲಪ್‌ಮೆಂಟ್'ನ ಆರ್ಟಿಕಲ್ ಆಗಲಿ, ಜೋಸೆಫ್ ಸ್ಟಿಗ್‌ಲಿಟ್ಜ್‌ರ ವಿಮರ್ಶೆ ಆಗಲಿ, ಅಮರ್ತ್ಯ ಸೇನ್‌ನ ಅಭಿವೃದ್ಧಿ ಮೀಮಾಂಸೆ ಯಾಗಲಿ ಏನನ್ನು ಹೇಳುತ್ತವೆ ? ಇವೆಲ್ಲವೂ ಅಭಿವೃದ್ಧಿಯಲ್ಲಿ ಸಮಾನತೆಯ ಪ್ರಶ್ನೆಯನ್ನು ಮುಂಚೂಣಿಗೆ ತಂದಿವೆ. 'ಅಭಿವೃದ್ಧಿ ಯಾರಿಗಾಗಿ ?' ಎಂಬ ನನ್ನ ಮಾತಿನಲ್ಲಿಯೂ ಸಮಾನತೆಯ ಬಗೆಗಿನ ಸೂಚನೆಯಿದೆ. ಅಸಮಾನತೆಗೆ ಅನೇಕ ಮುಖಗಳಿವೆ. ಅದು ಎಲ್ಲ ದೇಶಗಳಲ್ಲಿಯೂ ಇದೆ. ಆದರೆ ನಮ್ಮ ಸಮಾಜದ ಸಂದರ್ಭದಲ್ಲಿ ಅಸಮಾನತೆಗೆ ಒಳಗಾಗಿರುವ ಜನರು ಕೇವಲ ವರಮಾನಕ್ಕೆ ಸಂಬಂಧಿಸಿದ ಅಸಮಾನತೆಯನ್ನು ಎದುರಿಸುತ್ತಿಲ್ಲ. ಇಲ್ಲಿ ವರ್ಗದ, ಜಾತಿಯ, ಲಿಂಗದ ಸಂಗತಿಗಳಿವೆ. ಅಸಮಾನತೆಯನ್ನು ಎದುರಿಸುತ್ತಿರುವವರು ಚಾರಿತ್ರಿಕ ಹಿಂಸೆಯನ್ನು, ಸಾಮಾಜಿಕ ಪ್ರತ್ಯೇಕತನವನ್ನು, ಧಾರ್ಮಿಕ ತಾರತಮ್ಯವನ್ನು, ಆರ್ಥಿಕ ತುಳಿತವನ್ನು ಎದುರಿಸುತ್ತಿದ್ದಾರೆ. ಈ ಕಾರಣಕ್ಕೆ ಬೇರೆಲ್ಲ ಸಮಾಜಗಳಿಗಿಂತಲೂ ಹೆಚ್ಚಾಗಿ ನಮ್ಮ ಸಮಾಜದ ಸಂದರ್ಭದಲ್ಲಿ ಸಮಾನತೆಯು ಅಭಿವೃದ್ಧಿಯ ಮುಖ್ಯ ಭಾಗವಾಗಬೇಕಾಗುತ್ತದೆ. ಆದರೆ ಇಂದಿಗೂ ನಾವು 'ಉತ್ಪಾದನೆ ಮೊದಲು, ವಿತರಣೆ ನಂತರ' ಅನ್ನುವ ನೀತಿಗೆ ಗಂಟು ಬಿದ್ದಿದ್ದೇವೆ. ಎರಡನ್ನೂ ಏಕಕಾಲಕ್ಕೆ ಎದುರಿಸುವ ಕ್ರಮಗಳ ಬಗ್ಗೆ ನಾವು ಚಿಂತಿಸುತ್ತಿಲ್ಲ.

**ಅಭಿವೃದ್ಧಿಗೆ ಸಂಬಂಧಿಸಿದಂತೆ ಕರ್ನಾಟಕದ ಅನುಭವವೇನು ?**

ಕರ್ನಾಟಕ ಒಂದು ಮಧ್ಯಮಗತಿ ಸಮಾಜ. ಅದರ ಆರ್ಥಿಕತೆ ಆರಕ್ಕೆ ಹಿಗ್ಗದ ಮೂರಕ್ಕೆ ಕುಗ್ಗದ ಆರ್ಥಿಕತೆ. ರಾಜಕೀಯವಾಗಿ ಅಲ್ಲಿ ಉಗ್ರವಾದವಾಗಲಿ ಅಥವಾ ಜಡತ್ವವಾಗಲಿ ಕಂಡುಬರುವುದಿಲ್ಲ. ಅದು ಬಡ ಆರ್ಥಿಕತೆ ಯೇನಲ್ಲ. ಅದೇ ಸಮಯದಲ್ಲಿ ಅದೊಂದು ಸಮೃದ್ಧವಾದ ಆರ್ಥಿಕತೆ ಎಂದು ಹೇಳಲೂ ಬರುವುದಿಲ್ಲ. ಕರ್ನಾಟಕದ ಸಂದರ್ಭದಲ್ಲಿ ಅಭಿವೃದ್ಧಿಯಲ್ಲಿ ಸಾಮಾಜಿಕ ನ್ಯಾಯದ ಸಂಗತಿ ಯಾಕೆ ಮುಖ್ಯವಾಗಬೇಕು ಎಂಬುದಕ್ಕೆ ಕೆಲವು ನಿದರ್ಶನಗಳನ್ನು ಇಲ್ಲಿ ನೀಡಬಯಸುತ್ತೇನೆ :

**೧) ದಿನಗೂಲಿ ದುಡಿಮೆಗಾರರು**

ಕೃಷಿಯನ್ನು ಅವಲಂಬಿಸಿಕೊಂಡಿರುವವರನ್ನು ಸಾಮಾನ್ಯವಾಗಿ ಜನಗಣತಿಯಲ್ಲಿ ಎರಡು ವರ್ಗಗಳನ್ನಾಗಿ ಪರಿಭಾವಿಸಿಕೊಳ್ಳಲಾಗುತ್ತದೆ. ಮೊದಲನೆಯದು, ಕೃಷಿ ಸಾಗುವಳಿಗಾರರು / ಭೂಮಾಲಿಕರು. ಎರಡನೆಯದು, ಭೂರಹಿತ ದಿನಗೂಲಿ ದುಡಿಮೆಗಾರರು. ಈ ಎರಡು ವರ್ಗ ಕೂಡಿದರೆ ಕೃಷಿ ಅವಲಂಬಿತರು ದೊರೆಯುತ್ತಾರೆ.

ಅ) ಜನಗಣತಿ ೨೦೦೧ರ ಪ್ರಕಾರ ನಮ್ಮ ರಾಜ್ಯ ದಲ್ಲಿದ್ದ ಸಾಗುವಳಿಗಾರರ ಸಂಖ್ಯೆ ೬೮.೮೪ ಲಕ್ಷ. ಆದರೆ ಇವರ ಸಂಖ್ಯೆ ೨೦೧೧ರಲ್ಲಿ ೬೫.೮೧ ಲಕ್ಷಕ್ಕೆ ಇಳಿದಿದೆ. ರಾಜ್ಯದಲ್ಲಿನ ಒಟ್ಟು ದುಡಿಮೆಗಾರರಲ್ಲಿ ಸಾಗುವಳಿಗಾರರ

ಪ್ರಮಾಣ ೨೦೦೧ರಲ್ಲಿ ಶೇ. ೨೯.೩೫ರಷ್ಟಿದ್ದರೆ ೨೦೧೧ರಲ್ಲಿ ಅವರ ಪ್ರಮಾಣ ಶೇ. ೨೩.೬೧ಕ್ಕೆ ಇಳಿದಿದೆ. ಇಲ್ಲಿ ಸಾಗುವಳಿಗಾರರನ್ನು ಅಖಂಡವಾಗಿ ಪರಿಭಾವಿಸಿಕೊಳ್ಳಲಾಗಿದೆ. ಇದನ್ನು ಬಿಡಿಸಿ ನೋಡಿದರೆ ನಮಗೆ ಇನ್ನೂ ಆತಂಕಕಾರಿಯಾದ ಚಿತ್ರ ದೊರೆಯುತ್ತದೆ. ಅದನ್ನು ಮುಂದೆ ಚರ್ಚಿಸಲಾಗಿದೆ.

ಆ) ರಾಜ್ಯದಲ್ಲಿ ಒಟ್ಟು ದುಡಿಮೆಗಾರರಲ್ಲಿ ಭೂರಹಿತ ದಿನಗೂಲಿ ದುಡಿಮೆಗಾರರ ಸಂಖ್ಯೆ ೨೦೦೧ರಲ್ಲಿ ೭೨.೨೭ ಲಕ್ಷದಷ್ಟಿದ್ದುದು ೨೦೧೧ರಲ್ಲಿ ೭೧.೫೬ ಲಕ್ಷಕ್ಕೆ ಇಳಿದಿದೆ. ಒಟ್ಟಾರೆಯಾಗಿ, ಕೃಷಿಯನ್ನು ಅವಲಂಬಿಸಿಕೊಂಡಿದ್ದವರ ಸಂಖ್ಯೆಯು ೨೦೦೧ರಲ್ಲಿ ೧೪೦.೮೪ ಲಕ್ಷದಷ್ಟಿದ್ದುದು ೨೦೧೧ರಲ್ಲಿ ೧೩೭.೩೭ ಲಕ್ಷಕ್ಕೆ ಇಳಿದಿದೆ.

ಇದು ಒಂದು ಚಿತ್ರ. ಮತ್ತೊಂದು ಚಿತ್ರ ಭೂ ಹಿಡುವಳಿಗಾರರ ರಚನೆಗೆ ಸಂಬಂಧಿಸಿದೆ. ಇತ್ತೀಚಿಗಿನ ಕೃಷಿ ಗಣತಿ ಪ್ರಕಾರ ನಮ್ಮ ರಾಜ್ಯದಲ್ಲಿರುವ ಭೂ ಹಿಡುವಳಿಗಳ ಸಂಖ್ಯೆ ೧೨೧.೬೧ ಲಕ್ಷವಾದರೆ ಭೂ ಹಿಡುವಳಿಗಳ ವಿಸ್ತೀರ್ಣ ೭೮.೩೨ ಲಕ್ಷ ಹೆಕ್ಟೇರುಗಳು. ಒಟ್ಟು ಭೂ ಹಿಡುವಳಿಗಾರರಲ್ಲಿ ಎರಡು ಹೆಕ್ಟೇರುಗಳಿಗಿಂತ ಕಡಿಮೆ ವಿಸ್ತೀರ್ಣದ ಅತಿ ಸಣ್ಣ ಮತ್ತು ಸಣ್ಣ ಭೂ ಹಿಡುವಳಿಗಾರರ ಪ್ರಮಾಣ ಶೇ. ೭೬.೪೪. ಒಟ್ಟು ಭೂ ಹಿಡುವಳಿ ವಿಸ್ತೀರ್ಣದಲ್ಲಿ ಅತಿ ಸಣ್ಣ ಮತ್ತು ಸಣ್ಣ ಭೂ ಹಿಡುವಳಿಗಾರರ ಬಳಿಯಲ್ಲಿರುವ (೫೯.೮೮ ಲಕ್ಷ) ಭೂಮಿಯ ಪ್ರಮಾಣ ಕೇವಲ ಶೇ. ೪೦.೦೫ (೪೮.೭೦ ಲಕ್ಷ ಹೆಕ್ಟೇರು). ಆದರೆ ಒಟ್ಟು ಭೂ ಹಿಡುವಳಿಗಾರರಲ್ಲಿ ಶೇ. ೨೩.೫೬ರಷ್ಟು ಇರುವ ದೊಡ್ಡ ಭೂ ಹಿಡುವಳಿಗಾರರ (೧೮.೪೪ ಲಕ್ಷ) ವಶದಲ್ಲಿರುವ ಭೂಮಿಯ ವಿಸ್ತೀರ್ಣದ ಪ್ರಮಾಣ ಶೇ. ೫೯.೯೫ (೭೨.೯೧ ಲಕ್ಷ ಹೆಕ್ಟೇರು). ಇಲ್ಲಿರುವ ಅಸಮಾನತೆಯನ್ನು ಸೂಕ್ಷ್ಮವಾಗಿ ಗಮನಿಸಬೇಕು.

# ಈ ನಾಯಿಗಳು ನಗುವದಿಲ್ಲ ಏಕೆ ?






**ನಾ**ಯಿ ನಾಯಿಗಳೆಂದರೆ ರಾಮನ ಬಂಟ ಹನುಮನ ಗುಣ
ನಂಬಿಗಸ್ತ ಬಿಳಿ ಕರಿ ಕಂದು ಹಣೆ ಚಿಕ್ಕಿ ಬೆನ್ನ ಚಿಕ್ಕಿ ಬಾಲ ಚಿಕ್ಕಿ
ಕಪ್ಪು ಮೂಗಿನ ಕೆಂಪು ನಾಲಿಗೆ ಋಣಭಾರ ಕರುಣೆ ತುಂಬಿದ
ಒಳ್ಳೆಯ ಸಾಕು ನಾಯಿ, ಬೀದಿ ಬಡ ನಾಯಿ ಭಾವಪರ ಕಣ್ಣು
ವಿನೋದಶೀಲ–ಗಂಭೀರ ಹಾಸ್ಯಗಾರನಂತಿರುವ ನಾಯಿ
ಬೊಗಳುತ್ತ ಗುರ್‌ಗುಟ್ಟುತ್ತ ಕುಯ್‌ಗುಟ್ಟುತ್ತ ತಲೆ ಜಾಡಿಸಿ
ಬಾಲ ಅಲ್ಲಾಡಿಸಿ ಮುಖ ಮೇಲೆ ಮಾಡಿ ರೋದಿಸುತ್ತದೆ
ಸಮಾಜ ಕಂಟಕರ ಕಾಟಾಚಾರಕೆ ರೋಸಿಹೋಗುತ್ತಿದೆ
ಅವರ ವೇದನೆಯ ಗುಂಗಿನಲಿ ನಗುವುದನ್ನೇ ಮರೆತಂತಿದೆ.

ಹೇನು ಚಿಕ್ಕಾಡು ಕಜ್ಜಿ ಹತ್ತಿದ ನಾಯಿ ನೆಕ್ಕಲು ಬಾರದ
ಮೆದುಳುಗಳಲ್ಲಿ ಹುಳ ಹುಚ್ಚು ಜೊಲ್ಲು ಸುರಿಸಿ ತಲೆ ತಗ್ಗಿಸಿ
ಬಾಲ ಮುದುಡಿ ಮುನ್ನುಗ್ಗಿ ಭಯದ ನೆರಳಲ್ಲಿ ತಿರಸ್ಕಾರ
ಕ್ಕೊಳಗಾದ ನಾಯಿ ಅಳುವುದನ್ನು ಬಿಟ್ಟು ನಕ್ಕೀತು ಹೇಗೆ ?

ಖಾದಿ–ಖಾಕಿ–ಕಾವಿ ಕರಿಕೋಟಗಳಂತೆ ಬಣ್ಣ ಬದಲಿಸುವುದು
ವಚನವಿತ್ತ ಪ್ರೇಮಿ ಓಡಿಹೋಗುವಂತೆ ವೇದಿಕೆ ಆಶ್ವಾಸನೆ–
ಕೆಳಗೆ ಟುಸ್ಸೆನ್ನುವ ಜನನಾಯಕರಂತೆ ನಟಿಸುವ, ಗುರುದೀಕ್ಷೆ ನೀಡುವ
ನೆಪದಿ ಬೂದಿ ಎರಚಿ ಮೂರ್ಛೆ ಬರಿಸುವವರಂತೆ, ಕಪಟಿಗಳ ಕಳ್ಳಾಟವಾಡಿ
ಸತ್ಯ–ಸುಳ್ಳಾಗಿಸಿ ಖೊಟ್ಟಿ ಸಾಕ್ಷಿ ಸೃಷ್ಟಿ ದುಷ್ಟಕೂಟದಂತೆ, ನಕ್ಷತ್ರ ತೋರಿಸಿ
ನಕ್ಷತ್ರಿಕರಂತೆ ನಟಿಸುವವರನು ಕಂಡು ಕಣ್ಣಲ್ಲಿ ಕಿಡಿಕಾರುವ
ಕಚ್ಚುವ ರೋಷದಲಿ ನಾಯಿ ನಗುವುದನ್ನೇ ಮರೆತಂತಿದೆ.

ಹೊಡೆದು ಬಡಿದರೂ ಆಶ್ರಿತರ ಕೈ ಕಚ್ಚದಂತೆ
ಹಸಿದರೂ ಹದ್ದುಮೀರಿ ತಟ್ಟೆಗೆ ಬಾಯಿಹಾಕದಂತೆ
ಮಳೆ–ನೆನೆದು ಚಳಿ–ನಡುಗಿದರೂ ಹೊದಿಕೆ ಬೇಕೆನ್ನುವಂತೆ
ಕಾಲು ಮಡಚಿ ಗೋಣು ಸಿಗಸಿ ಕಣ್ಮುಚ್ಚಿ ನಿದ್ರಿಸುವ ಭರದಲ್ಲಿ
ಗಾಢಾಲೋಚನೆ–ಗಂಭೀರತೆಯಲ್ಲಿ ನಾಯಿ ನಗುವುದನ್ನೇ ಮರೆತಂತಿದೆ.

ಜನ್ಮಕೊಟ್ಟ ತಾಯಿಯನ್ನೇ ನಾಯಿಯಂತೆ ಕಂಡ ತಾಯ್ಗಂಡರನು
ವಿದ್ಯೆ ಪಡೆವ ಮಕ್ಕಳ ತೊಡೆ ಸಂದಿ ನೆಕ್ಕುವ ಕಾಮಿ ಕಂಟಕರನು
ಬೆದೆ ಬರದೇ ಹದವರಿಯದೇ ಹಾರುವ ಚಪಲ ಪುರುಷರನು
ಕಂಡೂ ಕಾಣದಂತೆ ಮೌನದಲ್ಲಿ ತನ್ನಷ್ಟಕ್ಕೆ ತಾನೇ ಬದುಕು
ಸಾಗಿಸುವ ನಾಯಿ ನಗುವುದನ್ನೇ ಮರೆತಂತಿದೆ.
ತಿಪ್ಪೆಯಲ್ಲಿ ಮಲಗಿ ಉಪ್ಪರಿಗೆ ಬಯಸದೆ ಉಪ್ಪುಂಡ ಮನೆಗೆ ತುತ್ತಿಟ್ಟ ಕೈಗಳ
ಋಣವ ತೀರಿಸುವ ನಿಷ್ಠೆಯಲ್ಲಿ ನಾಯಿ ನಗುವುದೇ ಇಲ್ಲ.

**ಶಂಕರ ಎಂ. ಮುತ್ತಣ್ಣವರ,** ಆರೋಗ್ಯ ಮೇಲ್ವಿಚಾರಕರು, ಚಿಕನೂರ ಅಂಚೆ, ಜಮಖಂಡಿ ತಾಲೂಕು, ಬಾಗಲಕೋಟೆ ಜಿಲ್ಲೆ

ಕೃಷಿಯ ಅಭಿವೃದ್ಧಿಯು ಯಾರ ಪರವಾಗಿ ನಡೆಯುತ್ತಿದೆ ಎಂಬುದನ್ನರಿಯಬೇಕು. ಒಟ್ಟು ಭೂ ಹಿಡುವಳಿಗಾರರಲ್ಲಿ ಶೇ. ೭೬.೪೪ರಷ್ಟಿರುವ ಭೂ ಹಿಡುವಳಿಗಾರರ ವಶದಲ್ಲಿ ಶೇ. ೪೦.೦೫ರಷ್ಟು ಭೂಮಿ ಮತ್ತು ಶೇ. ೨೩.೫೬ರಷ್ಟಿರುವ ಭೂ ಹಿಡುವಳಿಗಾರರ ವಶದಲ್ಲಿ ಶೇ. ೫೯.೯೫ರಷ್ಟು ಭೂಮಿ !! ನಿಜಕ್ಕೂ ನಮ್ಮ ರೈತರ ಆತ್ಮಹತ್ಯೆಯ ಮೂಲದಲ್ಲಿ ಇದು ಒಂದು ಕಾರಣವಾಗಿ ಕೆಲಸ ಮಾಡುತ್ತಿರುವ ಸಾಧ್ಯತೆಯಿದೆ. ಅಸಮಾನತೆ ಮತ್ತು ಅದರ ವಿವಿಧ ಮುಖಗಳು ಬಡವರಿಗೆ, ಹಸಿದವರಿಗೆ, ಮಹಿಳೆಯರಿಗೆ, ಅಲ್ಪ ಸಂಖ್ಯಾತರಿಗೆ ಹೆಚ್ಚು ಅಪಾಯವನ್ನುಂಟುಮಾಡುತ್ತದೆ.

**೨) ವರಮಾನದಲ್ಲಿ ಅಸಮಾನತೆ**

ನಮ್ಮ ರಾಜ್ಯದ ನಿವ್ವಳ ಜಿಲ್ಲಾ ಆಂತರಿಕ ಉತ್ಪನ್ನ ೨೦೧೦-೨೦೧೧ನೆಯ ಸಾಲಿನಲ್ಲಿ ಚಾಲ್ತಿ ಬೆಲೆಗಳಲ್ಲಿ ರೂ. ೩೬೧೩೭೧ ಕೋಟಿ. ನಮ್ಮ ರಾಜ್ಯದಲ್ಲಿನ ಅತ್ಯಂತ ಮುಂದುವರಿದ ಏಳು ಜಿಲ್ಲೆಗಳಲ್ಲಿರುವ ೧೮೭.೩ ಲಕ್ಷ ಜನರು ರಾಜ್ಯದ ನಿವ್ವಳ ಜಿಲ್ಲಾ ಆಂತರಿಕ ಉತ್ಪನ್ನದ ಶೇ. ೫೦ಕ್ಕಿಂತ (ರೂ. ೧೮೧೯೯ ಕೋಟಿ) ಹೆಚ್ಚಿನ ಪಾಲು ಪಡೆದಿದ್ದಾರೆ. (ರಾಜ್ಯದ ಸರಾಸರಿ ತಲಾ ವರಮಾನ ರೂ. ೬೧೦೭೩ ಮೀರಿದ ತಲಾ ವರಮಾನ ಇರುವ ಏಳು ಜಿಲ್ಲೆಗಳೆಂದರೆ ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಗ್ರಾಮೀಣ ಜಿಲ್ಲೆ, ದಕ್ಷಿಣ ಕನ್ನಡ ಜಿಲ್ಲೆ, ಉಡುಪಿ ಜಿಲ್ಲೆ, ಧಾರವಾಡ ಜಿಲ್ಲೆ, ಕೊಡಗು ಜಿಲ್ಲೆ, ಬಳ್ಳಾರಿ ಜಿಲ್ಲೆ). ಉಳಿದ ಶೇ. ೫೦ರಷ್ಟು ವರಮಾನವನ್ನು ಉಳಿದ ೨೩ ಜಿಲ್ಲೆಗಳ ೪೨೩.೬೫ ಲಕ್ಷ ಜನರು ಪಡೆದಿದ್ದಾರೆ. ಇಲ್ಲಿರುವ ಅಸಮಾನತೆಯ ತೀವ್ರತೆಯನ್ನು ಗಮನಿಸಬೇಕು. ಮುಂದುವರಿದ ಏಳು ಜಿಲ್ಲೆಗಳ ೧೮೭.೩ ಲಕ್ಷ ಜನರ ತಲಾ ವರಮಾನ ರೂ. ೯೭೧೬೫ರಷ್ಟಾದರೆ ಉಳಿದ ೨೩ ಜಿಲ್ಲೆಗಳ ೪೨೩.೬೫ ಲಕ್ಷ ಜನರ ತಲಾ ವರಮಾನ ಕೇವಲ ರೂ. ೪೨೪೧೦ ಮಾತ್ರ. ರಾಜ್ಯ ಸರಾಸರಿ ತಲಾ ವರಮಾನ ೨೦೧೦-೧೧ರಲ್ಲಿ (ಚಾಲ್ತಿ ಬೆಲೆಗಳಲ್ಲಿ) ರೂ. ೬೧೦೭೩.

ಇವೆಲ್ಲವೂ ಅಖಂಡ ಲೆಕ್ಕಾಚಾರಗಳು. ಜನರನ್ನು ಸಾಮಾಜಿಕ ಗುಂಪುಗಳಾಗಿ ವರ್ಗೀಕರಿಸಿದರೆ ನಮಗೆ ವರಮಾನಕ್ಕೆ ಸಂಬಂಧಿಸಿದ ಅಸಮಾನತೆಯ ಮತ್ತೊಂದು ಕರಾಳರೂಪ ದೊರೆಯುತ್ತದೆ. ವರಮಾನದಲ್ಲಿನ ಅಸಮಾನತೆಗೆ ಲಿಂಗ ಸಂಬಂಧಿ ಆಯಾಮವೂ ಇದೆ. ಸಮಾಜದ ವಿವಿಧ ಸಾಮಾಜಿಕ ಗುಂಪುಗಳ ವರಮಾನದ ಮಟ್ಟ ಸಮಾನವಾಗಿರುವುದಿಲ್ಲ. ಪ.ಜಾ, ಪ.ಪಂ, ಒಬಿಸಿಗಳು, ಅಲ್ಪಸಂಖ್ಯಾತರು ಮುಂತಾದ ಸಾಮಾಜಿಕ ಗುಂಪುಗಳ ತಲಾ ವರಮಾನವು ರಾಜ್ಯ ಸರಾಸರಿಗಿಂತ ಕೆಳಮಟ್ಟದಲ್ಲಿದೆ. ನಮ್ಮ ರಾಜ್ಯದ ಅತಿ ಹೆಚ್ಚಿನ ತಲಾ ವರಮಾನ ರೂ. ೧೧೧೮೨೮ ಬೆಂಗಳೂರು ನಗರ ಜಿಲ್ಲೆಯಲ್ಲಿದ್ದರೆ ಚಾಮರಾಜನಗರ ಜಿಲ್ಲೆಯಲ್ಲಿನ ತಲಾ ವರಮಾನ ರೂ. ೩೧೫೯೫. ಇಲ್ಲಿನ ವ್ಯತ್ಯಾಸ ರೂ. ೮೦೨೩೩. ಇದು ಅಸಮಾನತೆಯ ಪ್ರಮಾಣ. ಅಸಮಾನತೆಗೆ ಅನೇಕ ಮುಖಗಳಿವೆ. ಅದನ್ನು ಕೇವಲ ಬಡವರು-ಶ್ರೀಮಂತರು ಎಂಬುದಕ್ಕೆ ಸೀಮಿತಗೊಳಿಸಬಾರದು.

**೩) ಅಭಿವೃದ್ಧಿಯಲ್ಲಿ ಲಿಂಗ ತಾರತಮ್ಯ**

ಅಭಿವೃದ್ಧಿ ಮತ್ತು ಲಿಂಗ ಸಂಬಂಧಗಳ ನಡುವಿನ ಕೊಡು-ಕೊಳೆ ಬಗ್ಗೆ ಅಮರ್ತ್ಯ ಸೇನ್ ಒಂದು ಬೀಜದಂತಹ ಮಾತನ್ನು ಹೇಳಿದ್ದಾರೆ. 'ಅಭಿವೃದ್ಧಿ ಅರ್ಥಶಾಸ್ತ್ರದಲ್ಲಿ ಮಹಿಳೆಯರ ಸಮಸ್ಯೆಗಳನ್ನು ಪ್ರತ್ಯೇಕವಾದ ಮುಖ್ಯವಾದ ಸಮಸ್ಯೆ ಎಂದು ಪರಿಗಣಿಸಲು ಅರ್ಥಶಾಸ್ತ್ರಜ್ಞರು ಹಿಂಜರಿಯುತ್ತಾರೆ' ಎಂಬುದು ಅವರ ಮಾತು ! ನಾವು ನಿರ್ವಹಿಸಿಕೊಂಡು ಬರುತ್ತಿರುವ ಅಭಿವೃದ್ಧಿ ಪ್ರಣಾಳಿಕೆಯೇನಿದೆ ಅದು ಲಿಂಗ ನಿರಪೇಕ್ಷ (ಜೆಂಡರ್ ನ್ಯೂಟ್ರಲ್) ಪ್ರಣಾಳಿಕೆಯಾಗಿದೆ. ಅವರ ದುಡಿಮೆಯನ್ನು ದುಡಿಮೆಯೆಂದು ಪರಿಗಣಿಸಲು ನಾವು ಸಿದ್ಧವಿಲ್ಲ. ಮಹಿಳೆಯರ ಕಾರ್ಯಕ್ಷೇತ್ರವನ್ನು ಕುಟುಂಬಕ್ಕೆ, ಗಂಡ, ಮಕ್ಕಳಿಗೆ ಸೀಮಿತಗೊಳಿಸಲಾಗಿದೆ. ಈ ಬಗೆಯ ಲಿಂಗ ನಿರಪೇಕ್ಷತೆಯಿಂದಾಗಿ ನಮ್ಮ ಸಮಾಜದಲ್ಲಿ ಅನೇಕ ಲಿಂಗ ಸಂಬಂಧಿ ವಿಕೃತಿಗಳು ಉಂಟಾಗಿವೆ. ಅದರಲ್ಲಿ ಬಹುಮುಖ್ಯವಾದುದು ಲಿಂಗ ಅನುಪಾತದಲ್ಲಿನ ಕುಸಿತ. ಒಟ್ಟು ಜನಸಂಖ್ಯೆಗೆ ಸಂಬಂಧಿಸಿದಂತೆ ಲಿಂಗ ಅನುಪಾತ ಸಾವಿರಕ್ಕಿಂತ ಕಡಿಮೆಯಿದೆ. ಆದರೆ ೦-೬ ವಯೋಮಾನದ ಮಕ್ಕಳಲ್ಲಿ ಲಿಂಗ ಅನುಪಾತ ಕುಸಿಯುತ್ತಿದೆ. ಇಂದು ಹೆಣ್ಣುಮಕ್ಕಳು ಹುಟ್ಟುವುದೇ ದುರ್ಲಭವಾಗುತ್ತಿದೆ. ಹೆಣ್ಣು ಭ್ರೂಣಹತ್ಯೆಯ ಸಮಸ್ಯೆಯು ನಮ್ಮನ್ನು ಕಾಡುತ್ತಿದೆ. ಇದನ್ನು ಒಂದು ಗಂಭೀರವಾದ ಸಮಸ್ಯೆಯೆಂದು ಪರಿಗಣಿಸಲು ನಾವು ಸಿದ್ಧವಿಲ್ಲ. ಒಟ್ಟು ಜನಸಂಖ್ಯೆಯಲ್ಲಿ ಲಿಂಗ ಅನುಪಾತ ಕರ್ನಾಟಕದಲ್ಲಿ ೨೦೧೧ರಲ್ಲಿ ೯೭೩ರಷ್ಟಿದ್ದರೆ ೦-೬ ವಯೋಮಾನದ ಮಕ್ಕಳ ಲಿಂಗ ಅನುಪಾತ ೯೪೮ರಷ್ಟಿತ್ತು.

ಕರ್ನಾಟಕದಲ್ಲಿ ಲಿಂಗ ಅನುಪಾತ ೨೦೧೧ರಲ್ಲಿ ೯೭೩ಕ್ಕೆ ಪ್ರತಿಯಾಗಿ ೧೦೩೦ರಷ್ಟಿದ್ದಿದ್ದರೆ ಮಹಿಳೆಯರ ಸಂಖ್ಯೆ ೩೦೧.೨೮ ಲಕ್ಷಕ್ಕೆ ಪ್ರತಿಯಾಗಿ ೩೧೮.೯೬ರಷ್ಟಿರ ಬೇಕಾಗಿತ್ತು. ಅಂದರೆ ವಾಸ್ತವವಾಗಿ ನಮ್ಮ ರಾಜ್ಯದಲ್ಲಿ ೨೦೦೧-೨೦೧೧ರ ಅವಧಿಯಲ್ಲಿ ಸುಮಾರು ೧೭.೬೮ ಲಕ್ಷ ಮಹಿಳೆಯರು ಕಾಣೆಯಾಗಿದ್ದಾರೆ. ಇದು ಲಿಂಗ ತಾರತಮ್ಯದ ಪರಮೋಚ್ಚ ಸೂಚಿಯಾಗಿದೆ. ಕರ್ನಾಟಕ ರಾಜ್ಯದ ಅಭಿವೃದ್ಧಿಯು ಮಹಿಳೆಯರಿಗೆ ಪ್ರತಿಕೂಲವಾಗಿದೆ. ಅದು ಪರಿಸರಕ್ಕೆ ಮಾರಕವಾಗಿದೆ. ಅದು ಬಡವರಿಗೆ ವಿಮುಖವಾಗಿದೆ. ಹಿಂದುಳಿದ ಪ್ರದೇಶ ಮತ್ತು ಮುಂದುವರಿದ ಪ್ರದೇಶಗಳ ನಡುವೆ ಅಸಮಾನತೆ ಉಲ್ಬಣಗೊಳ್ಳುತ್ತಿದೆ. ಬೆಂಗಳೂರೇ ಕರ್ನಾಟಕ ಅನ್ನುವಂತಾಗಿದೆ. ಪ್ರಾದೇಶಿಕ ಅಸಮಾನತೆಯು ನಮ್ಮ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಪ್ರಮುಖವಾಗಿ ಎದುರಿಸಬೇಕಾದ ಸಂಗತಿಯಾಗಬೇಕಾಗಿತ್ತು. ಆದರೆ ಸರ್ಕಾರ ಇರಲಿ, ನಾವೇ ಅದಕ್ಕೆ ಸಿದ್ಧವಿಲ್ಲ. ಉದಾಹರಣೆಗೆ, ಕೇಂದ್ರ ಸರ್ಕಾರ ಮಂಜೂರು ಮಾಡಿರುವ ಐಐಟಿ ಸಹಜವಾಗಿ ಹಿಂದುಳಿದ ಜಿಲ್ಲೆಯಲ್ಲಿ ಸ್ಥಾಪನೆಯಾಗಬೇಕು ಎಂಬುದು ನಿಯಮವಾಗಬೇಕು. ಆದರೆ ರಾಜ್ಯದಲ್ಲಿ ಅದನ್ನು ಪಡೆಯಲು ಮುಂದುವರಿದ ಜಿಲ್ಲೆಗಳು, ಧಾರವಾಡವನ್ನೂ ಸೇರಿಸಿಕೊಂಡಂತೆ, ಪೈಪೋಟಿ ನಡೆಸುತ್ತಿವೆ. ಅಪೌಷ್ಟಿಕತೆ-ಅನೀಮಿಯಾ ನಮ್ಮಲ್ಲಿ ಗಂಭೀರವಾದ ಸಮಸ್ಯೆಗಳೇ ಅಲ್ಲ !! ನಮ್ಮ ಶಾಸನ ಸಭೆಗಳಲ್ಲಿ ಇವುಗಳ ಬಗ್ಗೆ ಚರ್ಚೆ ನಡೆಯುವುದಿಲ್ಲ. ಬಡವರು, ಅಂಚಿನಲ್ಲಿರುವವರು, ವಂಚಿತರು ಅನ್ನುವ ಕಾರಣಕ್ಕೆ ಅವರ ಮಕ್ಕಳು ಹೋಗುವ ಶಾಲೆಗಳು ಹೇಗಿದ್ದರೂ ನಡೆಯುತ್ತವೆ, ಅವರಿಗೆ ಚಿಕಿತ್ಸೆ ನೀಡಬೇಕಾದ ಆಸ್ಪತ್ರೆಗಳು ಹೇಗಿದ್ದರೂ ನಡೆಯುತ್ತವೆ, ಬಡ ಕುಟುಂಬಗಳ ಮಕ್ಕಳು ಬರುತ್ತಾರೆ ಅನ್ನುವ ಕಾರಣಕ್ಕೆ ಅಂಗನವಾಡಿಗಳು ಹೇಗಿದ್ದರೂ ನಡೆಯುತ್ತವೆ ಎಂಬ ಭಾವನೆ ನಮ್ಮಲ್ಲಿ ನೆಲೆಯೂರಿಬಿಟ್ಟಿದೆ. ಇದು ತಾರತಮ್ಯವಾದಿ ಪ್ರಣಾಳಿಕೆ. ಜಾತಿ, ವರ್ಗ, ಲಿಂಗ, ಧರ್ಮ, ಪ್ರದೇಶ, ಅಂತಸ್ತು ... ಮುಂತಾದ ಸಂಗತಿಗಳನ್ನು ಆಧರಿಸಿ ತಾರತಮ್ಯವನ್ನು ಎಣಿಸಲಾಗುತ್ತದೆ. ತಾರತಮ್ಯ ಪ್ರವೃತ್ತಿಗಳು ಸಮಾಜದಲ್ಲಿ ಬಡವರಿಗೆ, ಹಸಿದವರಿಗೆ, ಅಂಚಿನಲ್ಲಿರುವವರಿಗೆ ಹೆಚ್ಚು ಅಪಾಯಕಾರಿಯಾಗುತ್ತದೆ. ಅಸಮಾನತೆ, ತಾರತಮ್ಯ, ಸಾಮಾಜಿಕ ಪ್ರತ್ಯೇಕತನ, ಮಹಿಳೆಯರ ಮೇಲಿನ ದೌರ್ಜನ್ಯ ಮುಂತಾದುವು ಅಭಿವೃದ್ಧಿಗೆ ಸಂಬಂಧಿಸಿದ ಸಂಗತಿಗಳು.

**ಒಟ್ಟಾರೆ ತಾತ್ಪರ್ಯ ಇಷ್ಟು**

ಅಭಿವೃದ್ಧಿ ಅನ್ನುವುದು, ಮಹಿಳೆಯರನ್ನೂ ಸೇರಿಸಿಕೊಂಡಂತೆ, ಜನರಿಗೆ ಸಂಬಂಧಿಸಿದ ಸಂಗತಿ. ಅದು ಸಾಮಾಜಿಕ ನ್ಯಾಯಕ್ಕೆ ಸಂಬಂಧಿಸಿದ ಸಂಗತಿ. ಅಲ್ಲಿ ಸಮಾನತೆ, ಸ್ವಾತಂತ್ರ್ಯ, ಘನತೆಯಿಂದ ಕೂಡಿದ ಬದುಕು, ಮಹಿಳೆಯರಿಗೆ ಗೌರವ ನೀಡುವುದು, ಸುಸ್ಥಿರ ಗತಿ ಮುಖ್ಯವಾಗಬೇಕು. ಪ್ರಜಾಪ್ರಭುತ್ವ ಅನ್ನುವುದು ಕೇವಲ ಜನರಿಗಾಗಿ – ಮುಂತಾದ ಸಂಗತಿಗಳು ಮಾತ್ರವಲ್ಲ. ಪ್ರಜಾಪ್ರಭುತ್ವಕ್ಕೆ 'ಗವರ್ನ್‌ಮೆಂಟ್ ಬೈ ಡಿಸ್‌ಕಶನ್' ಅನ್ನುವ ವಿವರಣೆ ಕೂಡ ಇದೆ. ಚರ್ಚೆಯ ಮೂಲಕ, ವಿಚಾರ ವಿನಿಮಯದ ಮೂಲಕ, ಸಂವಾದದ ಮೂಲಕ, ಅನುಸಂಧಾನದ ಮೂಲಕ ನಾವು ಅಭಿವೃದ್ಧಿಯನ್ನು ಪರಿಭಾವಿಸಿಕೊಳ್ಳುವ ಕ್ರಮವನ್ನು ರೂಪಿಸಿಕೊಳ್ಳುವ, ಕಂಡುಕೊಳ್ಳುವ ಅಗತ್ಯವಿದೆ. ಜನರನ್ನು ಒಳಗೊಳ್ಳುವುದರಲ್ಲಿ ನಮ್ಮ ಅಭಿವೃದ್ಧಿ ಯಾಕೆ ಸೋತಿದೆ ? ಉತ್ತರ ಸ್ಪಷ್ಟ, ಅದು ನಮ್ಮ ಗುರಿಯೇ ಆಗಿಲ್ಲ. ಬಡವರನ್ನು, ವಂಚಿತರನ್ನು, ಅಂಚಿನಲ್ಲಿರುವವರನ್ನು ಯಾಕೆ ಅಭಿವೃದ್ಧಿಯು ತನ್ನ ವ್ಯಾಪ್ತಿಯಲ್ಲಿ ಸೇರಿಸಿಕೊಳ್ಳುತ್ತಿಲ್ಲ ? ಜನರನ್ನು ಒಳಗೊಳ್ಳುವ ಅಭಿವೃದ್ಧಿಯ ಬಗ್ಗೆ ಇಂದು ಅಧಿಕಾರಸ್ಥರಿಗೆ ನಂಬಿಕೆಯಿಲ್ಲ. ಇಂದು ನಮ್ಮ ಕಾಳಜಿ ದೇಶವನ್ನು ಸಮೃದ್ಧಿಗೊಳಿಸುವುದಾಗಿದೆ. ಜನರ ಬದುಕು ಎರಡನೆಯದಾಗಿದೆ. ಭೂ ಸ್ವಾಧೀನ ಮಸೂದೆಯ ಬಗ್ಗೆ ಮಾತನಾಡುವಾಗ ಉತ್ಪಾದನೆಯ ಮಹತ್ವವನ್ನು, ಅದಕ್ಕಾಗಿ ಜನರು ತ್ಯಾಗ ಮಾಡಬೇಕು ಎಂಬ ಮಾತುಗಳನ್ನು ಕೇಳುತ್ತಿದ್ದೇವೆ. ಈ ಬಗೆಯ ಅಭಿವೃದ್ಧಿ ಮೀಮಾಂಸೆಯ ಬಗ್ಗೆ ನಾವು ಎಚ್ಚರದಿಂದ ಇರಬೇಕು. "ಜನರಿಗಾಗಿ ಅಭಿವೃದ್ಧಿಯೇ ವಿನಾ ಅಭಿವೃದ್ಧಿಗಾಗಿ ಜನರಲ್ಲ" ಅನ್ನುವುದನ್ನು ಇಂದು ನಾವು ಗಟ್ಟಿಯಾಗಿ ಪ್ರತಿಪಾದಿಸಬೇಕಾಗಿದೆ. ಕರ್ನಾಟಕವು ಇಂತಹ ಅಭಿವೃದ್ಧಿಗೆ ನಿದರ್ಶನವಾಗಲಿ.

ಟಿ. ಆರ್. ಚಂದ್ರಶೇಖರ
'ವಚನ', ಸೊಸೈಟಿ ರಸ್ತೆ, ಅಮರಾವತಿ, ಹೊಸಪೇಟೆ-೫೮೩೨೦೧

# ಕ್ಷ - ಕಿರಣ

- ಸಾನ್ವಿ ಪಿ.


GDP
ಹೆಮ್ಮೆಪಡು GDP ಏರುತ್ತಾ ಇದೆ


ಪುಕ್ಕಟ್ಟೆ ಅಕ್ಕಿ ಕೊಟ್ಟರೆ ಜನ ಸೋಮಾರಿಗಳಾಗ್ತಾರೆ ಅವರಿಗೆ ನನ್ನ 'ಯಾನ' ಓದಲು ಕೊಡಿ.
ಯಾನ
ಎಸ್. ಎಲ್ ಭೈರಪ್ಪ


ಅಂತರರಾಷ್ಟ್ರೀಯ ಯೋಗ ದಿನಾಚರಣೆ
ಯೋಗಾಯೋಗ



# ಋಗ್ವೇದ ಪ್ರವೇಶಿಕೆ



## ಐತಿಹ್ಯ ಮತ್ತು ವಾಸ್ತವ

**ಪ್ರಾಪಂಚಿಕ ಸಂಗತಿಗಳನ್ನು ವ್ಯಾಪಕವಾಗಿ ದಾಖಲಿಸಿರುವ ಅತ್ಯಂತ ಪ್ರಾಚೀನ ಗ್ರಂಥ ಋಗ್ವೇದ. ಅದರಲ್ಲಿ ಬುಡಕಟ್ಟು ಜೀವನದ ಚಿತ್ರಣಗಳಿವೆ; ಅಂತೆಯೇ ಬುಡಕಟ್ಟುಗಳನ್ನು ವಿಘಟನೆಗೊಳಿಸಲು ಕಾತುರತೆಯನ್ನು ತೋರುವ ಜನಸಮುದಾಯವೂ ಇದೆ. ಈ ಸಮುದಾಯವನ್ನು ಸಾಮಾನ್ಯವಾಗಿ 'ಆರ್ಯರು' ಎಂದು ಕರೆಯಲಾಗಿದೆ. ತಮ್ಮ ಸಂಪತ್ತನ್ನು ಹೆಚ್ಚಿಸಿಕೊಳ್ಳಲು ಮತ್ತು ಸಂರಕ್ಷಿಸಿಕೊಳ್ಳಲು ಋಗ್ವೇದದ ಕವಿಗಳು ದೇವತೆಗಳನ್ನು ಆಶ್ರಯಿಸುತ್ತಾರೆ. ಪ್ರಸ್ತುತ ಇಪ್ಪತ್ತೈದನೆಯ ಕಂತಿನಲ್ಲಿ ಕೆಲವು ಸಂಕೀರ್ಣಾಂಶಗಳತ್ತ ಗಮನ ಹರಿಸೋಣ.**

**ಜಿ. ರಾಮಕೃಷ್ಣ**

ಈಗಾಗಲೆ ನಾವು ಗಮನಿಸಿರುವಂತೆ ಋಗ್ವೇದದಲ್ಲಿ ೧೦೨೮ ಸೂಕ್ತಗಳಿವೆ. ಅವುಗಳಲ್ಲಿ ಸುಮಾರು ೧೦,೬೦೦ ಮಂತ್ರಗಳಿವೆ. ಅವನ್ನು ನಂತರದ ಕಾಲದ ಶ್ಲೋಕಗಳಿಗೆ ಸಮಾನವೆಂದು ಬಗೆದರೆ ತಪ್ಪಿಲ್ಲ, ಆದರೆ 'ಮಂತ್ರ' ಎಂದು ಕರೆಯುವುದು ರೂಢಿಯಲ್ಲಿದೆ. ಒಂದೇ ಒಂದು ಶ್ಲೋಕದ ಸೂಕ್ತವೊಂದಿದೆ, ಅದೇ ಅತಿ ಚಿಕ್ಕದು. ೫೮ ಶ್ಲೋಕಗಳ ಸೂಕ್ತವೊಂದಿದೆ, ಅದೇ ಅತಿ ದೊಡ್ಡದು. ಮುಂಚಿನ ಕಾಲದಲ್ಲಿ ಕಲಿಕೆಯ ದೃಷ್ಟಿಯಿಂದ ಋಗ್ವೇದವನ್ನು ಅಷ್ಟಕ, ಅನುವಾಕ, ವರ್ಗ ಮತ್ತು ಮಂತ್ರ ಎಂಬ ನಿಟ್ಟಿನಲ್ಲಿ ವಿಭಜಿಸಲಾಗುತ್ತಿತ್ತು. ಅದರಂತೆ ಋಗ್ವೇದದಲ್ಲಿ ೮ ಅಷ್ಟಕಗಳಿವೆ. ಒಂದೆರಡು ದಿನಗಳಲ್ಲಿ ಐದಾರು ಮಂತ್ರಗಳ ಒಂದು ವರ್ಗದ ಬಾಯಿಪಾಠ ಮಾಡಲಾಗುತ್ತಿತ್ತೆಂದು ತೋರುತ್ತದೆ. ವಿಷಯದ ದೃಷ್ಟಿಯಿಂದ ಮಾಡಲಾದ ವಿಭಾಗವಲ್ಲ ಇದು. ಹಾಗೆ ವಿಷಯಗಳನ್ನಾಧರಿಸಿದ ವಿಭಜನೆಯು ಸರಳವಾಗಿದೆ. ಅದರಲ್ಲಿ ಮಂಡಲ ಮತ್ತು ಸೂಕ್ತ ಎಂಬ ವಿಭಾಗಗಳಿವೆ; ಅದರಂತೆ ೧೦ ಮಂಡಲಗಳಲ್ಲಿ ೧೦೨೮ ಸೂಕ್ತಗಳಿವೆ. ಪ್ರತಿಯೊಂದು ಸೂಕ್ತವೂ ಸ್ವತಂತ್ರವಾದ್ದು, ಸ್ವಯಂಪೂರ್ಣವಾದದ್ದು. ಇಂದಿನ ಪರಿಭಾಷೆಯಲ್ಲಿ ಬೇಕಾದರೆ ಅವನ್ನು ೧೦೨೮ ಕವನಗಳೆಂದು ಪರಿಭಾವಿಸಿಕೊಳ್ಳಬಹುದು.

ಗಣಕಯಂತ್ರವೇನೂ ಇಲ್ಲದಿದ್ದಾಗ ಜರುಗಿದ ಎರಡು ಪ್ರಾಚೀನ ಅದ್ಭುತಗಳು ನಮ್ಮಲ್ಲಿವೆ : ಒಂದು, ಋಗ್ವೇದವನ್ನು ವಿಂಗಡಿಸಿ ಜೋಡಿಸಿರುವ ವಿಧಾನ; ಇನ್ನೊಂದು, ಪಾಣಿನಿಯ "ಅಷ್ಟಾಧ್ಯಾಯೀ" ಎಂಬ ವ್ಯಾಕರಣ ಗ್ರಂಥ. ಎಲ್ಲೆಲ್ಲೋ ಹರಡಿಹೋಗಿದ್ದ ಸೂಕ್ತಗಳನ್ನು ಅಡ್ಡಾದಿಡ್ಡಿಯಾಗಿ ಜೋಡಿಸದೆ ಒಂದು ಕ್ರಮದಲ್ಲಿ ಅವನ್ನು ಋಗ್ವೇದದಲ್ಲಿ ಒಟ್ಟು ಮಾಡಲಾಗಿದೆ. ಒಂದು ಮತ್ತು ಹತ್ತನೆಯ ಮಂಡಲಗಳಲ್ಲಿ ತಲಾ ೧೯೧ ಸೂಕ್ತಗಳಿವೆ. ಅವೆರಡು ಹಾಗೂ ೮ನೆಯ ಮಂಡಲವು ರಚನೆಯಾದ್ದು ನಿರ್ದಿಷ್ಟವಾದ ಕುಟುಂಬಗಳಿಗೆ ಸೇರಿದವರಿಂದಲ್ಲ. ಒಂದು ರೀತಿಯಲ್ಲಿ ಅವು ಬೆರಕೆ ಕವನಗಳು. ಆದರೆ ೨ರಿಂದ ೭ನೆಯ ಮಂಡಲಗಳು ನಿರ್ದಿಷ್ಟ ಕುಟುಂಬಗಳಿಗೆ ಸೇರಿದವರಿಂದ ರಚಿತವಾಗಿವೆ. ಅಲ್ಲಿಯ ಸೂಕ್ತಗಳಲ್ಲಿ ಒಂದು ಕ್ರಮವಿದೆ. ಮೊದಲು ಅಗ್ನಿಯನ್ನುದ್ದೇಶಿಸಿದವು, ನಂತರ ಇಂದ್ರನನ್ನು ಉದ್ದೇಶಿಸಿದವು, ಇತ್ಯಾದಿ. ಅಗ್ನಿಯನ್ನುದ್ದೇಶಿಸಿದ ಹತ್ತು ಸೂಕ್ತಗಳಿದ್ದರೆ ಅವನ್ನು ಜೋಡಿಸುವಾಗ ಮಂತ್ರಗಳ ಸಂಖ್ಯೆಯು ಇಳಿಯುತ್ತಾ ಬರುವಂತೆ ನೋಡಿಕೊಳ್ಳಲಾಗಿದೆ. ನಂತರದಲ್ಲೂ ಇದೇ ಕ್ರಮ : ಬ್ರಹ್ಮಣಸ್ಪತಿ, ವರುಣ, ರುದ್ರ, ಮರುತ್ತುಗಳು, ಇತ್ಯಾದಿ ದೇವತೆಗಳಿಗೆ ಸಂಬಂಧಿಸಿದ ಸೂಕ್ತಗಳು. ಎರಡನೆಯ ಮಂಡಲದಲ್ಲಿ ೪೩ ಸೂಕ್ತಗಳಿವೆ, ಮೂರನೆಯದರಲ್ಲಿ ೬೨, ಏಳನೆಯದರಲ್ಲಿ ೧೦೪ : ಹೀಗೆ ಸಾಮಾನ್ಯವಾಗಿ ಸಂಖ್ಯೆಯು ಹೆಚ್ಚುತ್ತಾ ಹೋಗಿದೆ. ಎರಡನೆಯ ಮಂಡಲದಲ್ಲಿ





ಗೃತ್ಸಮದನ ಕುಟುಂಬದ ಕವಿಗಳು, ಮೂರನೆಯದರಲ್ಲಿ ವಿಶ್ವಾಮಿತ್ರನ ಕುಟುಂಬದವರು, ಆಮೇಲೆ ವಾಮದೇವ, ಅತ್ರಿ, ಭರದ್ವಾಜ ಮತ್ತು ವಸಿಷ್ಠ ಕುಟುಂಬದವರು. ಈ ಹೆಸರುಗಳು ಅಷ್ಟಾಗಿ ಯಾವ ಚಾರಿತ್ರಿಕ ಅಂಶಗಳನ್ನೂ ಹೊರಗೆಡಹುವುದಿಲ್ಲ. ತಿಳಿಯಬಹುದಾದ್ದೇನಿದ್ದರೂ ಸೂಕ್ತಗಳ ಅಧ್ಯಯನದಿಂದ ತಿಳಿಯಬೇಕು, ಅಷ್ಟೆ. ಎಂಟನೆಯ ಮಂಡಲದಲ್ಲಿ ಬಹುತೇಕ ಕಣ್ವ ಕುಟುಂಬದ ಕವಿಗಳೇ ಇರುತ್ತಾರೆ. ಒಂಬತ್ತನೆಯ ಮಂಡಲದ ಸೂಕ್ತಗಳನ್ನು ಎಲ್ಲ ಕುಟುಂಬಗಳವರೂ ರಚಿಸಿದ್ದಾರೆ ಮತ್ತು ಅದರಲ್ಲಿರುವ ಎಲ್ಲ ಸೂಕ್ತಗಳೂ ಸೋಮವನ್ನು ಕುರಿತಾದವು. ಒಂದು ಮತ್ತು ಹತ್ತನೆಯ ಮಂಡಲಗಳ ಕರ್ತೃಗಳು ವಿಭಿನ್ನ ಕುಟುಂಬಗಳವರು ಮತ್ತು ಅವೆರಡೂ ಋಗ್ವೇದದ ಉತ್ತರಕಾಲಕ್ಕೆ ಸೇರುವಂಥವು. ಅಂದರೆ, ಎರಡನೆಯ ಮಂಡಲದ ಸೂಕ್ತಗಳಿಗಿಂತಲೂ ನೂರಿನ್ನೂರು ವರ್ಷಗಳ ನಂತರದವು. ಯಜ್ಞಾದಿ ಕ್ರಿಯೆಗಳು ವಿಶೇಷವಾಗಿ ಪ್ರಾಧಾನ್ಯ ಪಡೆದಿದ್ದರಿಂದ ಒಂಬತ್ತನೆಯ ಮಂಡಲದಲ್ಲಿ ಇಡಿಯಾಗಿ ಸೋಮ ಪವಮಾನ ಸೂಕ್ತಗಳನ್ನು ಸಂಕಲಿಸಲಾಗಿದೆ. ಏಳನೆಯ ಮಂಡಲದಲ್ಲಿ ವರುಣನ ಸಲ್ಲಕ್ಷಣಗಳೇನಿವೆಯೋ ಅವು ಹತ್ತನೆಯ ಮಂಡಲದಲ್ಲಿ ಕಾಣಸಿಗುವುದಿಲ್ಲ. ಏಕೆಂದರೆ, ಸಾಮಾಜಿಕ ಜೀವನದಲ್ಲಿ ಮತ್ತು ಆದ್ಯತೆಯ ವಿಷಯಗಳಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ. ಚಾರಿತ್ರಿಕ ಮತ್ತು ಸಾಮಾಜಿಕ ಪಲ್ಲಟಗಳ ಹಿನ್ನೆಲೆಯಲ್ಲಿ ಋಗ್ವೇದದ ಅಧ್ಯಯನದಿಂದ ಎಷ್ಟು ಸಮಗ್ರವಾದ ಚಿತ್ರಣಗಳು ದೊರೆಯುತ್ತವೋ ಅವು ಸಾಂಪ್ರದಾಯಿಕ ವ್ಯಾಸಂಗದಿಂದ ದೊರೆಯಲಾರವು. ಸಂಪ್ರದಾಯದಂತೆ ಅವು 'ಅಪೌರುಷೇಯ'; ಅಂದರೆ, ಅವು ಮಾನವನು ರಚಿಸಿದ್ದಲ್ಲ. ಬದಲಾಗಿ, ಅವನ್ನು ಋಷಿಗಳು ಕಂಡುಕೊಂಡರು. ಅವರು "ಮಂತ್ರಕರ್ತೃ"ಗಳಲ್ಲ, ಬದಲಾಗಿ ಅವರು "ಮಂತ್ರದ್ರಷ್ಟಾರರು." ಹೀಗೆ ನೋಡಿದಾಗ ಇತಿಹಾಸದಲ್ಲಿ ವಿಕಾಸ ಕ್ರಮವೆಂಬುದು ಋಗ್ವೇದಕ್ಕೆ ಅನ್ವಯಿಸುವುದಿಲ್ಲ. ಇಂತಹ ಅಸಂಗತ ಭಾವನೆಯು ಪ್ರಚೋದಿಸುವ ತೀರ್ಮಾನವು ಇನ್ನೂ ಹೆಚ್ಚು ಅಸಂಗತವಾಗಿರುತ್ತದೆ. ಅದರ ಪ್ರಕಾರ ಋಗ್ವೇದದ ಸೂಕ್ತಗಳಲ್ಲಿ ಮಾನವ ಮತ್ತು ಅವನ ಪರಿಸರ, ಅವನ ಸಂಘರ್ಷಗಳು, ವಿಸ್ಮಯಗಳು, ಕವಿತ್ವ ಶಕ್ತಿ, ಸಾಮಾಜಿಕ ಸನ್ನಿವೇಶ, ಇವೆಲ್ಲಾ ಪೂರ್ತಿಯಾಗಿ ಗೌಣವಾಗಿ ಬಿಡುತ್ತವೆ. ಅಲ್ಲಿಲ್ಲದ ದಾರ್ಶನಿಕ ದೃಷ್ಟಿ, ಸರ್ವಜ್ಞತ್ವ, ಅಪರೋಕ್ಷಾನುಭೂತಿ, ತೀರಾ ಸಾಂಕೇತಿಕವಾದ ಭಾಷೆ, ಇವುಗಳೇ ಋಗ್ವೇದದ ಸಾರ ಎಂಬ ತಪ್ಪು ಕಲ್ಪನೆ ಉಂಟಾಗುವುದು ಚಾರಿತ್ರಿಕ–ಸಾಮಾಜಿಕ ದೃಷ್ಟಿ ಇಲ್ಲದಿದ್ದಾಗ ಮಾತ್ರವೇ ಸಾಧ್ಯ. ಈವರೆಗಿನ ವಿಶ್ಲೇಷಣೆಗಳಲ್ಲಿ ಇದು ಸ್ಪಷ್ಟವಾಗಿರಬೇಕು. ಯಜ್ಞಕ್ರಿಯೆಯಷ್ಟೇ ಋಗ್ವೇದ ಸೂಕ್ತಗಳ ವಸ್ತುವಲ್ಲ. ಅಂತಹ ಕ್ರಿಯೆಗಳಿಗೆ ಸಂಬಂಧವಿರದ ಸೂಕ್ತಗಳ ಮಂತ್ರಗಳನ್ನು ನಂತರದ ಕಾಲಗಳಲ್ಲಿ ಹಲವು ವಿಧಗಳ ಆಚರಣೆಗಳ ಸಂದರ್ಭಗಳಲ್ಲಿ ಬಳಸಿಕೊಳ್ಳುವುದು ರೂಢಿಗೆ ಬಂದಿದೆ. ಅದನ್ನೂ ಆಗಾಗ್ಗೆ ನಾವು ಗುರುತಿಸಿಕೊಂಡು ಬಂದಿದ್ದೇವೆ.

ಋಗ್ವೇದದಲ್ಲಿ ಆ ಕಾಲದ ಘಟನೆಗಳ ಪ್ರತಿಫಲನೆಗಳಿರುವುದು ಸಹಜ. ಅಂಥದೇನೂ ಇಲ್ಲವೆಂದು ಬಗೆಯುವುದು ಋಗ್ವೇದವನ್ನು ತೀರಾ ಅಮೌಲಿಕವಾಗಿಸಿಬಿಡುತ್ತದೆ. ನಾವು ಆಯ್ದುಕೊಂಡ ಸೂಕ್ತಗಳ ವಿಶ್ಲೇಷಣೆಯು ಇದನ್ನು ಮನದಟ್ಟು ಮಾಡಿಕೊಟ್ಟಿದೆ. ಬೇರೆ ಕೆಲವು ಪ್ರಸಂಗಗಳನ್ನು ಪರಿಚಯಿಸಿಕೊಂಡರೆ ಇದು ಇನ್ನೂ ಹೆಚ್ಚು ಸಾಂದ್ರವಾಗಿ ಮನಸ್ಸಿಗೆ ಬರುತ್ತದೆ. ಉದಾಹರಣೆಗೆ, ಋಗ್ವೇದದ ಕೆಲವು ಸೂಕ್ತಗಳನ್ನು 'ದಾನಸ್ತುತಿ' ಎನ್ನುತ್ತಾರೆ. ಅಂದರೆ, ದಾನವನ್ನು ಮಾಡಿದವನ ಸ್ತುತಿ. ಹಾಗೆ ದಾನ ಮಾಡುವುದು ಯಾವುದೋ ದೇವತೆಯಲ್ಲ. ಅದನ್ನು ಸುದಾಸ, ದೇವವ್ರತ, ದಿವೋದಾಸ, ಮುಂತಾದ ವ್ಯಕ್ತಿಗಳು ಮಾಡುತ್ತಾರೆ. "ಕುಶಿಕರೇ, ಮುನ್ನುಗ್ಗಿ; ಸುದಾಸನ ಕುದುರೆಯನ್ನು ಬಿಚ್ಚಿಬಿಡಿ, ಆಗ ಅವನ ಸಂಪತ್ತು ವರ್ಧಿಸುತ್ತದೆ" (ಋ.೩.೫೩.೧೧). ಅಂದರೆ, ಅವನು ಯಾರೊಡನೆಯೋ ಸಂಘರ್ಷಕ್ಕಿಳಿದು ಸಂಪತ್ತನ್ನು ಸೆಳೆದು ತರುತ್ತಾನೆ. "ಅಶ್ವಿನಿ ದೇವತೆಗಳೇ, ನಮ್ಮಲ್ಲಿಗೆ ಬನ್ನಿ. ಶಂಬರನನ್ನು ಕೊಂದಾಗ ನೀವು ಅತಿಥಿಗ್ವ, ದಿವೋದಾಸ, ಕಶೋಜು ಮತ್ತು ತ್ರಸದಸ್ಯು ಎಂಬುವವರನ್ನು ಕಾಪಾಡಿದಿರಿ. ಅವರ ಕೋಟೆಗಳು ಭಗ್ನಗೊಂಡಾಗ ಅವರನ್ನು ರಕ್ಷಿಸಿದವರು ನೀವು" (೧.೧೧೨.೧೪). ಅವರ ಕೋಟೆಗಳನ್ನು ಭಗ್ನಗೊಳಿಸಿದವರು ಯಾರು ? ಭಗ್ನಗೊಳ್ಳುವಷ್ಟು ಅವು ಶಿಥಿಲವಾಗಿದ್ದುವೆ ? ಏನೇ ಇರಲಿ, ಇಲ್ಲಿ ಎರಡು ಪ್ರತ್ಯೇಕ ಬಣಗಳ ನಡುವೆ ಸಂಘರ್ಷ ನಡೆಯುತ್ತಿದೆ ಮತ್ತು ಅದು ಸಂಪತ್ತಿಗಾಗಿ. ಇವೆಲ್ಲಾ ದಿನನಿತ್ಯದ ವ್ಯವಹಾರಗಳಿಗೆ ಸಂಬಂಧಿಸಿದ ಅಂಶಗಳು. "ನಿನ್ನ ಅಮೋಘ ಶಕ್ತಿಯಿಂದ ಪಿಪ್ರುವಿನ ಕೋಟೆಗಳನ್ನು ಧ್ವಂಸ ಮಾಡಿದೆ, ದಸ್ಯುಗಳನ್ನು ಸದೆಬಡಿದು ಋಜಿಶ್ವನ್‌ನನ್ನು ಸಲಹಿದೆ" ಎಂದು ಇಂದ್ರನಿಗೆ ಹೇಳಿದರೆ (೧.೫೧.೫) ಅದು ಅಂದಿನ ಒಂದು ಸಂಘರ್ಷದ ದಾಖಲೆಯೆಂದೇ ಅರ್ಥ. ಆರನೆಯ ಮಂಡಲದ ೭೫ನೆಯ ಸೂಕ್ತವು ಕಾಳಗದಲ್ಲಿ ಬಳಸುವ ಆಯುಧಗಳಿಗೆ ಸಂಬಂಧಿಸಿದ್ದು. ಅದರ ಒಂದೆರಡು ಮಂತ್ರಗಳನ್ನು ನೋಡಿ : "ಯುದ್ಧಕ್ಕೆ ಸಜ್ಜಾಗಿರುವವನ ಮುಖದಲ್ಲಿ ಸಿಡಿಲಿನ ಛಾಯೆಯಿದೆ. ...ಬಿಲ್ಲು ಹಿಡಿದು ನಡೆಯಿರಿ, ಹಸುಗಳನ್ನು ಗೆದ್ದು ತರೋಣ. ಶತ್ರುವಿಗೆ ನಮ್ಮ ಬಿಲ್ಲೆಂದರೆ ದುಃಖಕ್ಕೆ ಆಹ್ವಾನ. ...ಬಿಲ್ಲಿನ ಎರಡು ಕೊನೆಗಳೂ ಒಂದನ್ನೊಂದು ಪ್ರೀತಿಸುತ್ತವೆ : ಒಬ್ಬ ಮಹಿಳೆಯನ್ನು ಪ್ರಿಯಕರನು ಪ್ರೀತಿಸುವಂತೆ. ನಮ್ಮ ವೈರಿ ಬಣವನ್ನು ಈ ಬಿಲ್ಲು ನುಚ್ಚುನೂರು ಮಾಡುತ್ತದೆ" (೬.೭೫.೧, ೨ ಮತ್ತು ೪). ಇಡೀ ಸೂಕ್ತವು ಕ್ರೋಧ, ಹಿಂಸೆ ಮತ್ತು ವಿಜಯವನ್ನು ಕೇಂದ್ರವಾಗಿಸಿಕೊಂಡಿದೆ. ಋಗ್ವೇದದ ಕವಿಗಳೆಲ್ಲಾ ಶಾಂತಿಪ್ರಿಯರೆಂಬ ಭ್ರಾಂತಿ ಬೇಡ, ಏಕೆಂದರೆ ಅವರು ಜೀವಿಸುತ್ತಿದ್ದುದು ಕಲಹಗಳ ಸಂದರ್ಭದಲ್ಲಿ. "ಸುದಾಸನನ್ನು ಬಗ್ಗುಬಡಿಯಲು ತುರ್ವಶನು ಕಾಯುತ್ತಿದ್ದ. ಮೀನುಗಳಿಗಿದ್ದ ಹಸಿವಿನಂತಹ ಹಸಿವು ಅವನದು. ಭೃಗುಗಳು ಮತ್ತು ದ್ರುಹ್ಯುಗಳು ಅವನ ಬೆಂಬಲಕ್ಕೆ ನಿಂತರು" (೭.೧೮.೬). ಇದು ಎಂತಹ ಚಿತ್ರವನ್ನು ಕಟ್ಟಿಕೊಡುತ್ತದೆ ಎಂಬುದನ್ನು ಬಿಚ್ಚಿಹೇಳಬೇಕಾಗಿಲ್ಲ. "ಸಪತ್ನನಾಶನಂ" ಎಂಬ ಸೂಕ್ತವೊಂದು ಹತ್ತನೆಯ ಮಂಡಲದಲ್ಲಿದೆ (೧೬೬). ಅದರ ಒಂದೆರಡು ಮಂತ್ರಗಳನ್ನು ನೋಡಿ : "ನನ್ನ ಸಮಾನರಲ್ಲಿ ನಾನು ಹೋರಿಯಂತಿದ್ದು ನನ್ನ ವಿರೋಧಿಗಳನ್ನು ಮಣಿಸುತ್ತೇನೆ. ನನ್ನ ಶತ್ರುಗಳನ್ನು ನಾಶ ಮಾಡುತ್ತೇನೆ. ಅವರನ್ನೆಲ್ಲಾ ನನ್ನ ಪಾದದಡಿಯಲ್ಲಿ ತುಳಿದು ಹಾಕುತ್ತೇನೆ" (೧೦.೧೬೬.೧–೨).

ಋಗ್ವೇದದ ಕರ್ತೃಗಳನ್ನು ಆರ್ಯರೆಂದು ಗುರುತಿಸಲಾಗಿದೆ. ಅವರು ಸ್ಥಳೀಯರೋ ಎಲ್ಲೋ ಹೊರಗಿನಿಂದ (ಮಧ್ಯ ಏಷ್ಯಾದಿಂದ) ಬಂದವರೋ ಎಂಬುದರ ಚರ್ಚೆಯನ್ನು ಲಭ್ಯವಿರುವ ಚಾರಿತ್ರಿಕ ಅಂಶಗಳನ್ನು ಪಕ್ಕಕ್ಕಿರಿಸಿ ನಡೆಸುವುದು ಯೋಗ್ಯವಲ್ಲ. ಪಣಿಗಳು, ಪಂಚಜನರು, ದಸ್ಯುಗಳು, ಇವರನ್ನೆಲ್ಲಾ ನಿಕೃಷ್ಟವಾಗಿ ಕಾಣುವುದು, ಅವರ ಸಂಪತ್ತನ್ನು ದೋಚುವುದು, ಅದಕ್ಕೆ ಉಗ್ರಪ್ರಾಬಲ್ಯದ ಇಂದ್ರನ ಸಹಾಯ ಪಡೆಯುವುದು, ಮುಂತಾದುವನ್ನೆಲ್ಲಾ ನೋಡಿದರೆ ಅವರ ವಿರೋಧಿಗಳು ಹೊರಗಿನಿಂದ ಬಂದವರೆಂಬುದು ಖಚಿತವಾಗುತ್ತದೆ. ಅದಕ್ಕೆ ಉತ್ಖನನಶಾಸ್ತ್ರದ ಪುರಾವೆಯೂ ದೊಡ್ಡ ಪ್ರಮಾಣದಲ್ಲಿ ದೊರೆತಿದೆ. ಸ್ಥಳೀಯ ಬುಡಕಟ್ಟುಗಳಾದ ಪಣಿಗಳು ಮತ್ತು ಪಂಚಜನರು ಕ್ರಮೇಣ ದಸ್ಯುಗಳಾಗಿ ಪರಿವರ್ತಿತರಾದರು. ಸ್ವಾರಸ್ಯದ ಸಂಗತಿಯೇನೆಂದರೆ ಈ ಬಣಗಳವರ ಯಾವ ಹೆಸರೂ ಋಗ್ವೇದದಲ್ಲಿಲ್ಲ. ಅವರನ್ನು ಸಮೂಹವೆಂದು ಗುರುತಿಸುವುದೇ ಪದ್ಧತಿ. ಆದರೆ ಆರ್ಯರ ಪೈಕಿ ಹತ್ತಾರು ಹೆಸರುಗಳು ಉಲ್ಲೇಖವಾಗಿವೆ. ಅವರೆಲ್ಲಾ ಪರಾಕ್ರಮಿಗಳು, ಸಂಪತ್ತು ಹರಣ ಮಾಡುವವರು, ದೇವತೆಗಳನ್ನು

ತಣಿಸುವವರು ಮತ್ತು ಬುಡಕಟ್ಟಿನ ಜನರನ್ನು ಹತ್ಯೆ ಮಾಡುವವರು. ನಮ್ಮ ದೇಶದ ಚರಿತ್ರೆಯಲ್ಲಿ ನಮ್ಮ ಮೇಲೆ ಮೊಟ್ಟಮೊದಲ ಆಕ್ರಮಣ ನಡೆದದ್ದು ಋಗ್ವೇದದ ಕಾಲದಲ್ಲಿ ಮತ್ತು ಋಗ್ವೇದದ ರಚನೆ ಮಾಡಿದ ಆರ್ಯರಿಂದ ಎಂಬುದು ಇದರಿಂದಲೂ ತಿಳಿಯುತ್ತದೆ. ಹಾಗೆಂದು ಋಗ್ವೇದವನ್ನು ಅವಗಣನೆಗೆ ಗುರಿ ಮಾಡುವುದು ಅಸಂಸ್ಕೃತ ನಡತೆಯಾಗುತ್ತದೆ. ಅದರ ಶ್ರೇಷ್ಠತೆಯನ್ನು ಸಾರುವ ಅನೇಕ ಭಾಗಗಳನ್ನು ನಾವೀಗಾಗಲೆ ಪರಿಚಯಿಸಿಕೊಂಡಿದ್ದೇವೆ. ವಿಶ್ವಾಮಿತ್ರ ಮತ್ತು ನದಿಗಳ ಸಂವಾದವೊಂದು ಋಗ್ವೇದದಲ್ಲಿ ಚಿತ್ರಿತವಾಗಿದೆ (೩.೩೩). ಅದರ ಕೆಲವು ಭಾಗಗಳನ್ನು ನೋಡಿ : "ಲಗಾಮು ಕಳಚಿದ ಕುದುರೆಗಳಂತೆ ಪರ್ವತಗಳಿಂದ ಎರಡು ನದಿಗಳು ಹರಿದುಬರುತ್ತಿವೆ. ಕರುವನ್ನು ಪ್ರೀತಿಯಿಂದ ನೆಕ್ಕುವ ತಾಯಿ ಹಸುವಿನಂತಿವೆ ಈ ನದಿಗಳು. ವಿಪಾಶ್ ಮತ್ತು ಶುತುದ್ರೀ ಆ ನದಿಗಳು" (೧). ವಿಪಾಶ್ ಎಂದರೆ ಈಗಿನ ಬೀಯಾಸ್ (ವ್ಯಾಸ). ಅದು ಸಟ್ಲೆಜ್ ನದಿಯನ್ನು ಕೂಡಿಕೊಳ್ಳುತ್ತದೆ. ಅದೇ ಶುತುದ್ರೀ. ಎರಡೂ ಕೂಡಿಕೊಂಡ ನಂತರ ಇಂದ್ರನಿಂದ ಪ್ರೇರಿತರಾಗಿ ಅವು ರಥವನ್ನೇರಿದವರಂತೆ ಸಮುದ್ರದತ್ತ ಧಾವಿಸುತ್ತವೆ (೨). ಇದಿಷ್ಟೂ ವಿಶ್ವಾಮಿತ್ರನು ನದಿಗಳಿಗೆ ಹೇಳುವ ಮಾತು. ಅದಕ್ಕೆ ನದಿಗಳ ಉತ್ತರ ಇದು : "ದೇವತೆಗಳ ಆಣತಿಯಂತೆ ನಾವು ಹರಿಯುತ್ತಿದ್ದೇವೆ. ನಮ್ಮ ರಭಸವನ್ನು ಯಾರೂ ತಡೆಯಲಾರರು. ಹೀಗಿರುವಾಗ ನೀನು ನಮಗೇನು ಹೇಳಲು ತವಕಿಸುತ್ತಿದ್ದೀಯೆ ?" (೪). ವಿಶ್ವಾಮಿತ್ರ ಹೇಳುತ್ತಾನೆ : "ನೇಹಿಗನಾಗಿ ಬೇಡುತ್ತಿದ್ದೇನೆ, ಸ್ವಲ್ಪ ನಿಧಾನಿಸಿ. ಕುಶಿಕನ ಮಗನಾದ ನನ್ನ ಸ್ತೋತ್ರವನ್ನು ಮನ್ನಿಸಲಾರಿರಾ ?" (೫). ನದಿಗಳ ಮುಂದಿನ ಮಾತು : "ಏನು ಹೇಳುತ್ತಿದ್ದೀಯೆ ನೀನು ? ನಮ್ಮ ಹಾದಿ ಮಾಡಿಕೊಟ್ಟವನು ಇಂದ್ರ. ನಮ್ಮನ್ನು ತಡೆಯಲು ಹೊರಟ ವೃತ್ರನನ್ನು ಪುಡಿಗುಟ್ಟಿದವನು ಅವನು. ಸವಿತೃವು ನಮ್ಮ ಕೈ ಹಿಡಿದು ನಡೆಸುತ್ತಿದ್ದಾನೆ" (೬). ಮತ್ತೆ ವಿಶ್ವಾಮಿತ್ರ ಆಗ್ರಹಿಸುತ್ತಾನೆ : "ಸೋದರಿಯರೆ, ಕವಿಯಾಗಿ ಬಿನ್ನವಿಸಿಕೊಳ್ಳುತ್ತಿದ್ದೇನೆ, ಕೇಳಿ. ದಯಮಾಡಿ ತಗ್ಗಿ ನಡೆಯಿರಿ; ದಾಟಲು ಹಾದಿ ಮಾಡಿಕೊಡಿ" (೯). ನದಿಗಳು : "ಆಯಿತು, ನಿನ್ನ ಮಾತು ಕೇಳುತ್ತೇವೆ. ರಥವನ್ನೇರಿ ನೀನು ದೂರದಿಂದ ಬಂದಿರುವೆ. ನಿನಗೆ ಮೊಲೆಯುಣಿಸುವ ತಾಯಿಯಂತೆ ತಗ್ಗಿ ನಡೆಯುವೆವು, ಪ್ರಿಯಕರನನ್ನು ಸಂತೈಸುವ ಪ್ರೇಯಸಿಯಂತಲ್ಲವೆ ನಾವು ?" (೧೦). ವಿಶ್ವಾಮಿತ್ರ : "ನಾನು ಭರತ ಕುಲದವನು, ಸಂಘರ್ಷದಲ್ಲಿ ಪ್ರಸಿದ್ಧರಾದವರ ಬಣ ನಮ್ಮದು. ನಮಗೆ ಇಂದ್ರನೇ ಪ್ರೇರಣೆ ನೀಡುತ್ತಾನೆ. ನಾನು ನಿಮ್ಮ ಮೊರೆ ಹೋಗುತ್ತೇನೆ" (೧೧). ಈಗ ಕವಿ ಹೇಳುತ್ತಾನೆ : "ಭರತ ಕುಲದವರು ನದಿಯನ್ನು ದಾಟಿ ಹೋದರು. ನದಿಗಳ ಸಂಪ್ರೀತಿ ಅವರಿಗೆ ದೊರೆಯಿತು. ನದಿಗಳೇ, ಈಗ ತುಂಬಿ ಹರಿಯಿರಿ." (೧೨).

ಈ ಸಂವಾದದಲ್ಲಿ ವಿಶ್ವಾಮಿತ್ರನ ಪಾತ್ರವೇನು ? ನಂತರದ ಪುರಾಣಗಳಲ್ಲಿನ ವಿಶ್ವಾಮಿತ್ರನನ್ನು ಇಲ್ಲಿ ಎಳೆದು ತರಬಾರದು. ಸದ್ಯದಲ್ಲಿ ಅವನೊಬ್ಬ ಆಗಂತುಕ, ಅವನ ಹಾದಿಯನ್ನು ಅರಸುತ್ತಿದ್ದಾನೆ, ಅಡ್ಡಿಯುಂಟುಮಾಡುವ ನದಿಗಳನ್ನು ಓಲೈಸುತ್ತಿದ್ದಾನೆ. ಕಾವ್ಯದಲ್ಲಿ ಇತಿಹಾಸವು ಪ್ರಕಟವಾಗುವ ಪರಿ ಇದೇ. ಇಂದ್ರನನ್ನು ಕುರಿತು ವಸಿಷ್ಠ ಹೇಳುತ್ತಾನೆ : "ಇಂದ್ರನೇ, ಸಂಗ್ರಾಮದಲ್ಲಿ ಸೆಣಸುತ್ತಿದ್ದ ಕುತ್ಸನಿಗೆ ನೀನು ಸಹಾಯಹಸ್ತ ಚಾಚಿದೆ. ಆರ್ಜುನೇಯನಾದ ಅವನನ್ನು ಬೆಂಬಲಿಸಿ ನೀನು ಕುಯವ ಮತ್ತು ದಾಸನಾದ ಶುಷ್ಣನನ್ನು ಮಣಿಸಿದೆ. ಅಂತೆಯೇ ನಿನ್ನನ್ನು ತಣಿಸಿದ ಸುದಾಸನನ್ನು ನೀನು ಕಾಯ್ದುಕೊಂಡೆ. ಭೂಮಿಯನ್ನು ಪಡೆಯಲು ಪುರುವಿನ ಶತ್ರುಗಳನ್ನು ಸಂಹರಿಸಿ ಅವನನ್ನು ವಿಜಯಿಯಾಗಿಸಿದೆ, ಅಂತೆಯೇ ಪುರುಕುತ್ಸನ ಮಗನಾದ ತ್ರಸದಸ್ಯುವಿಗೂ ನೀನು ಬೆಂಬಲ ನೀಡಿದೆ" (೧೭.೧೯.೨–೩). ಇಂತಹ ಹತ್ತಾರು ಸೂಕ್ತಗಳು ಋಗ್ವೇದದಲ್ಲಿವೆ. ಅವೆಲ್ಲಾ ಅಂದಿನ ಚರಿತ್ರೆಯನ್ನು ಸೂಚಿಸುವಂಥವೇ ಆಗಿವೆ ಮತ್ತು ಪ್ರತಿಯೊಂದು ಸಂದರ್ಭದಲ್ಲೂ ದೇವತೆಗಳು ಆರ್ಯರ ರಕ್ಷಣೆಗೆ ಧಾವಿಸುತ್ತಾರೆ. ಏನಾದರೂ ಆರ್ಯರೇ ಸೃಷ್ಟಿಸಿದ್ದ ದೇವತೆಗಳಲ್ಲವೆ ಅವರು !




ಯಜ್ಞಗಳ ಭರಾಟೆ ಹೆಚ್ಚುತ್ತಿದ್ದಂತೆ ಪುರೋಹಿತರಿಗೆ ಸಲ್ಲುವ ದಕ್ಷಿಣೆಯೂ ಹೆಚ್ಚಾಗುತ್ತದೆ ಮತ್ತು ಕಡೆಗೆ ಅದೊಂದು ಉದ್ಯಮದ ಸ್ವರೂಪ ಪಡೆದುಕೊಳ್ಳುತ್ತದೆ. ದಕ್ಷಿಣೆಯ ಮಹಿಮೆಯನ್ನು ಎತ್ತಿಹಿಡಿಯಲು ಋಗ್ವೇದದಲ್ಲಿ ಹನ್ನೊಂದು ಮಂತ್ರಗಳ ಒಂದು ಸೂಕ್ತವನ್ನು (೧೦.೧೦೭) ಸೇರಿಸಲಾಗಿದೆ. ದಕ್ಷಿಣೆಯಿಂದ ಇಡೀ ವಿಶ್ವದ ಜೀವವು ಕತ್ತಲೆಯಿಂದ ಹೊರಗೆ ಬಂದಿತಂತೆ, ಪಿತೃಗಳು ನೀಡಿದ್ದ ಜ್ಯೋತಿಯು ಮತ್ತೆ ಬೆಳಗಿತಂತೆ (೧). ದಕ್ಷಿಣೆ ನೀಡುವವರಿಗೆ ಉಚ್ಚ ಹಂತದ ದ್ಯುಲೋಕವು ಲಭಿಸುತ್ತದೆ; ಕುದುರೆಗಳನ್ನು ಕೊಡುವವರು ಸೂರ್ಯನನ್ನೇ ಸೇರಿಕೊಂಡು ಬಿಡುತ್ತಾರೆ (೨). ಕೃಪಣರು ದಕ್ಷಿಣೆ ನೀಡುವುದಿಲ್ಲ, ಆದರೆ ಗೌರವ ಉಳಿಸಿಕೊಳ್ಳಬೇಕೆನ್ನುವವರು ಅದನ್ನು ನೀಡುತ್ತಾರೆ (೩). ದಕ್ಷಿಣೆ ಸ್ವೀಕರಿಸುವವನು ಪ್ರಥಮ ಆಹ್ವಾನಿತ ವ್ಯಕ್ತಿ ; ದಕ್ಷಿಣೆಯ ಪದ್ಧತಿಯನ್ನು ಆರಂಭಿಸಿದವನು ನಿಜಕ್ಕೂ ಜನರ ಯಜಮಾನನೇ (ನೃಪತಿ) ಆಗಿದ್ದಿರಬೇಕು (೫).

ಈ ಶೈಲಿಯಲ್ಲಿ ಮುಂದುವರಿಯುವ ಸೂಕ್ತವನ್ನು ನೋಡಿದರೆ ಮುಂದಿನ ಹಂತದಲ್ಲಿ ಬ್ರಾಹ್ಮಣಗಳೆಂದು ಪ್ರಸಿದ್ಧವಾದ ಗ್ರಂಥಗಳಿಗೆ ಇದು ಉಪೋದ್ಘಾತವೋ ಎನಿಸುತ್ತದೆ. ಅದೇ ಇನ್ನೂ ಅಸಹ್ಯವಾಗಿ ಬೆಳೆದಾಗ ಗರುಡ ಪುರಾಣ ಮತ್ತು ಸತ್ಯನಾರಾಯಣ ವ್ರತದ ಕತೆಯ ರೂಪ ಪಡೆಯುತ್ತದೆ ! ಸೂಕ್ತದ ಈ ಮಂತ್ರಗಳನ್ನು ನೋಡಿ : "ಧನಾದಿಗಳನ್ನು ನೀಡುವವರು ಎಂದಿಗೂ ಮೃತರಾಗುವುದಿಲ್ಲ, ನಾಶಹೊಂದುವುದಿಲ್ಲ, ಕಷ್ಟಗಳಿಗೆ ಗುರಿಯಾಗುವುದಿಲ್ಲ ; ಅವರು ದ್ಯುಲೋಕದ ಜ್ಯೋತಿಗೆ ಪಾತ್ರರಾಗುತ್ತಾರೆ (೮). ಅವರು ಅಂದಚೆಂದದ ವಸತಿಗಳನ್ನು ಪಡೆಯುತ್ತಾರೆ, ಒಳ್ಳೆಯ ಉಡುಪು ಧರಿಸಿದ ಸುಂದರ ಯುವತಿಯನ್ನು ಹೊಂದುತ್ತಾರೆ, ಸೋಮರಸ ಅವರದಾಗುತ್ತದೆ, ಮತ್ತು ಎಲ್ಲರನ್ನೂ ಮೀರಿಸುವ ವಿಜಯಿಗಳಾಗುತ್ತಾರೆ (೯). ಹೆಣ್ಣು ಒಂದು ಸರಕು, ಕೇವಲ ಭೋಗ್ಯವಸ್ತು, ಎಂಬ ಧೋರಣೆಗೆ ಇದು ನಾಂದಿ ; ಬುಡಕಟ್ಟು ಸಮಾಜದಲ್ಲಿ ಅಂತಹ ದುರ್ಭಾವನೆಗೆ ಅವಕಾಶ ಇರಲಿಲ್ಲ. ದಕ್ಷಿಣೆ ನೀಡುವವನನ್ನು ಸಂಧಿಸಲು ಹೆಣ್ಣು ಅಲಂಕೃತಳಾಗಿ ಕಾಯುತ್ತಿರುತ್ತಾಳಂತೆ ; ಅವನ ಮನೆಯು ತಾವರೆ ತುಂಬಿದ ಪುಷ್ಕರಿಣಿಯಂತಿರುತ್ತದಂತೆ, ದೇವತೆಗಳ ಪ್ರಾಸಾದದಂತೆ ಅದು ಕಂಗೊಳಿಸುತ್ತದಂತೆ (೧೦.೧೦೭.೧೦) ! ಋಗ್ವೇದ ಸಮಾಜದ ಸ್ಥಿತ್ಯಂತರಕ್ಕೆ ಇದೊಂದು ಉತ್ತಮ ಪುರಾವೆ. ಆಮೇಲೆ ಸುಂದರಳಾದ ಪತ್ನಿಯು ಗಂಡನ ಉಪಪತ್ನಿಯರನ್ನು ವಶಪಡಿಸಿಕೊಂಡು ಗಂಡನ ಮನೆಯಲ್ಲಿ ರಾಜ್ಞಿಯಾಗಿ ಬಾಳಬೇಕು. ಅದಕ್ಕಾಗಿ "ಸಪತ್ನೀಬಾಧನಂ" ಎಂಬ ಸೂಕ್ತವು (೧೦.೧೪೫) ಅವಳ ಸಹಾಯಕ್ಕೆ ಬರುತ್ತದೆ ! ಋಗ್ವೇದದ ಆರ್ಯರ ಭವ್ಯ ಸಮಾಜವು ವಿಕಸಿಸುವುದರ ಚರಿತ್ರೆ ಹೀಗಿದೆ. ಆರ್ಯರ ವಿರೋಧಿಗಳಾದ ಬುಡಕಟ್ಟಿನ ಜನರನ್ನು ದೂಷಿಸುವ ವಿಧಾನಕ್ಕೆ ಒಂದು ಉದಾಹರಣೆಯಾಗಿ ಈ ಮಂತ್ರವನ್ನು ಗಮನಿಸಬಹುದು : "ಆ ರಾಕ್ಷಸರನ್ನು ನಿನ್ನ ತಾಪದಿಂದ ಸುಟ್ಟುಹಾಕು, ಎಲೈ ಅಗ್ನಿಯೆ ; ನಿನ್ನ ಜ್ವಾಲೆಯು ಅವರನ್ನು ಕರುಕಲಾಗಿಸಲಿ. ಮಾರಕ ದೇವತೆಗಳನ್ನು ಪೂಜಿಸುವ ಅವರನ್ನು ನಾಶಮಾಡು. ಅವರಿಗೆ ತೃಪ್ತಿಯೆಂಬುದೇ ಇಲ್ಲ, ಆ ರಾಕ್ಷಸರನ್ನು ಹೊಸಕಿಹಾಕು" (೧೦.೮೭.೧೪). ಅಂದರೆ, ಆರ್ಯರ ಮತ್ತು ಸ್ಥಳೀಯ ಬುಡಕಟ್ಟು ಜನಾಂಗಗಳವರ ನಡುವೆ ಘರ್ಷಣೆಗಳು ನಿರಂತರವಾಗಿದ್ದವು. ಆಕ್ರಮಣಕಾರಿಯು ಸ್ಥಳೀಯರನ್ನು ಹಾಗೆ ಮೂದಲಿಸಿದ್ದು ನಮ್ಮ ದೇಶದಲ್ಲಿ ಸತತವಾಗಿ ನಡೆದುಬಂದ ಪದ್ಧತಿ. ಋಗ್ವೇದದ ಆರ್ಯರು ಆರಂಭಿಸಿದ ಪದ್ಧತಿ ಅದು.

ಋಗ್ವೇದದ ಆರ್ಯರಿಗೆ ದೇವತೆಗಳ ಕೊರತೆ ಏನೂ ಇಲ್ಲ. ಆದರೂ ಅವರ ನಡುವೆ ಹಸಿದ ಜನರಿದ್ದಾರೆ, ತುಂಡು ರೊಟ್ಟಿಗೆ ಬಾಯಿ ಬಿಡುವವರಿದ್ದಾರೆ. ಋಗ್ವೇದದ ಅಂತಿಮ ಘಟ್ಟದ ವೇಳೆಗೆ ಯಜ್ಞಗಳನ್ನು ಆಯೋಜಿಸುವ ಧನಿಕರು ಕಾಣಬರುತ್ತಾರೆ, ಕೃಷಿಯ ಬೆಳವಣಿಗೆ ಗಮನಾರ್ಹ ಮಟ್ಟಕ್ಕೇರಿರುತ್ತದೆ. ಸಮಾಜದ ಎರಡು ಧ್ರುವಗಳು ಇವು. ಅಂತಹ ಹಿನ್ನೆಲೆಯಲ್ಲಿ ಧನ ಮತ್ತು ಅನ್ನದ ದಾನದ

ಮಹತ್ವವನ್ನು ಸಾರುವ ಸೂಕ್ತವೊಂದು (೧೦.೧೧೭) ಋಗ್ವೇದದಲ್ಲಿ ಸೇರ್ಪಡೆಗೊಂಡಿದೆ. ಕವಿಯ ಹೆಸರು ತಿಳಿಯದು, ಆದ್ದರಿಂದ "ಭಿಕ್ಷು ಎಂಬ ಹೆಸರಿನ ಆಂಗಿರಸ ಬಣದವನು" ಕವಿ ಎಂದು ಸಾಯಣ ವ್ಯಾಖ್ಯಾನಿಸಿದ್ದಾನೆ. ಸೂಕ್ತದಲ್ಲಿ ಉಕ್ತವಾಗಿರುವುದನ್ನು ಸ್ಥೂಲವಾಗಿ ಹೀಗೆ ನಿರೂಪಿಸಬಹುದು : "ಹಸಿವಿನಿಂದ ನಾವು ಸಾಯಬೇಕೆಂದು ದೇವತೆಗಳು ವಿಧಿಸಿಲ್ಲ ; ಚೆನ್ನಾಗಿ ಉಣ್ಣುವವನೂ ಒಂದು ದಿನ ಹೇಗೋ ಸಾಯುತ್ತಾನೆ. ಮುಕ್ತವಾಗಿ ದಾನ ಮಾಡುವವನ ಸಂಪತ್ತು ಕರಗಿಹೋಗುವುದಿಲ್ಲ ಮತ್ತು ಏನೂ ಕೊಡದವನಿಗೆ ಸಾಂತ್ವನ ಹೇಳಲು ಯಾರೂ ಬರುವುದಿಲ್ಲ. ಆಹಾರದ ರಾಶಿ ಅವನಲ್ಲಿದೆ, ನಿರ್ಗತಿಕರು ರೊಟ್ಟಿ ಬೇಡಿ ಬಂದಾಗ ಅವನು ಕಲ್ಲು ಹೃದಯಿಯಾದರೆ ಅವನಿಗೆ ಒಳ್ಳೆಯ ಮಾತನ್ನಾಡುವವರು ಯಾರು ! ಹಿಂದೆಂದೋ ಅವನು ಕೊಡುಗೈಯವನಾಗಿದ್ದನೆಂಬುದು ಗಣನೆಗೆ ಬರುವುದಿಲ್ಲ. ಅನ್ನವನ್ನು ಆಶಿಸಿ ಬರುವ ಕೃಶನಾದವನೊಬ್ಬನಿಗೆ ದಾನ ಮಾಡುವವನು ಸಂಗ್ರಾಮದಲ್ಲಿ ಗರ್ಜನೆಗೆ ಹಿಮ್ಮೆಟ್ಟುವುದಿಲ್ಲ, ಅವನಿಗೆ ಕಷ್ಟ ಬಂದಾಗ ಸಹಾಯ ನೀಡುವವರು ಇರುತ್ತಾರೆ. ಮಿತ್ರನು ಅಂಗಲಾಚಿ ಬಂದಾಗ ಏನನ್ನೂ ಕೊಡದವನು ಎಂತಹ ಮಿತ್ರನಾಗಬಲ್ಲ ! ಅವನ ಮನೆಯಿಂದ ಹೊರಹೋಗುವುದು ಉಚಿತ. ಹಾಗಿರುವಾಗ ಯಾರೋ ಅಪರಿಚಿತನ ಬಳಿ ಹೋಗಿ ಬೇಡುವುದು ಶ್ರೇಯಸ್ಕರ. ಶ್ರೀಮಂತಿಕೆಯೇನೂ ಶಾಶ್ವತವಲ್ಲ. ಅದು ಉರುಳುವ ಚಕ್ರದಂತೆ ಮೇಲೇರುತ್ತದೆ ಮತ್ತು ಕೆಳಗೆ ಬರುತ್ತದೆ. ಆದ್ದರಿಂದ ಯಾಚಿಸಿ ಬರುವವನಿಗೆ ಕೊಡುವುದು ಮುಂದಿನ ಹಾದಿಯನ್ನು ಸುಗಮಗೊಳಿಸುತ್ತದೆ. ಯಾರನ್ನೂ ಪೋಷಿಸದವನು ಶ್ರಮದಿಂದ ಗಳಿಸಿದ ಸಂಪತ್ತಿನಿಂದ ಏನು ಪಡೆಯಬಲ್ಲ ! ಆ ಸಂಪತ್ತೇ ಅವನಿಗೆ ವಿಪತ್ತು ತರುತ್ತದೆ. ಒಬ್ಬನೇ ಕೂತು ತಿನ್ನುವವನು ಸ್ವತಃ ತಾನೇ ಪಾಪದ ಕೂಪವಾಗುತ್ತಾನೆ (ಕೇವಲಾಘೋ ಭವತಿ ಕೇವಲಾದೀ). ಉಳುವ ನೇಗಿಲಿನಿಂದ, ನಮ್ಮನ್ನು ಪೋಷಿಸುವ ಆಹಾರ ಉತ್ಪನ್ನವಾಗುತ್ತದೆ. ನೇಗಿಲು ಹೇಗೆ ತನ್ನ ಹಾದಿಯನ್ನು ಕ್ರಮಿಸುತ್ತದೆ, ನೋಡಿ. ಪುರೋಹಿತನನ್ನು ಕರೆತಂದಾಗ ಅವನು ತೆಪ್ಪಗೆ ಕೂತರೆ ಏನುಪಯೋಗ ! ಕೊಡುಗೈ ದಾನಿಯು ಕೃಪಣನನ್ನು ಹಿಂದಿಕ್ಕುತ್ತಾನೆ. ಸಂಪತ್ತಿದ್ದವರಿಗೆ ಯಶಸ್ಸು ಕಟ್ಟಿಟ್ಟ ಬುತ್ತಿ ಎಂದೇನಿಲ್ಲ. ಎರಡು ಕಾಲಿನ ಮನುಷ್ಯನು ಒಂದು ಕಾಲಿನ ಸೂರ್ಯನನ್ನು ಮೀರಿಸಬಲ್ಲನೆ ? ಊರುಗೋಲು ಹಿಡಿದು ಓಡಾಡುವ ಮೂರು ಕಾಲಿನ ಮುದುಕನು ಎರಡು ಕಾಲಿನ ಶಕ್ತಿವಂತನಾಗಿದ್ದವನೇ ಅಲ್ಲವೆ ? ನಾಲ್ಕು ಕಾಲಿನ ನಾಯಿಯು ಎರಡು ಕಾಲಿನ ಮನುಷ್ಯ ಕರೆದಾಗ ಓಡಿಬರುತ್ತದೆ, ನಾಲ್ಕು ಕಾಲಿದ್ದೇನು ಪ್ರಯೋಜನವಾಯಿತು ! ಜನರ ಗುಂಪಿದೆಯೆನ್ನಿ, ಅವರಿದ್ದಲ್ಲಿಗೆ ಬಂದ ನಾಯಿಗೆ ಆ ಗುಂಪಿನಲ್ಲಿ ತನ್ನ ಯಜಮಾನನಿದ್ದಾನೋ ಇಲ್ಲವೋ ಎಂದು ತಿಳಿದೀತೆ ? ಎಲ್ಲರ ಕೈಗಳೂ ಒಂದೇ ತೆರನಾದವು, ಆದರೆ ಅವುಗಳ ಶ್ರಮದಲ್ಲಿ ಭಿನ್ನತೆಯುಂಟು ; ಎಲ್ಲ ಹಸುಗಳೂ ಒಂದೇ ಪ್ರಮಾಣದಲ್ಲಿ ಹಾಲು ಕರೆಯುತ್ತವೆಯೆ ? ಅವಳಿ ಮಕ್ಕಳ ಪೌರುಷವು ಸದಾ ಸಮನಾಗಿರುವುದಿಲ್ಲವಲ್ಲ, ಅಂತೆಯೇ ಜ್ಞಾತಿಗಳಾದ ಇಬ್ಬರು ಏಕಪ್ರಕಾರವಾಗಿ ದಾನಿಗಳಾಗಿಲ್ಲದಿರುವುದು ಸಹಜ" (೧೦.೧೧೭.೧-೯).

ಇಂಥದೊಂದು ಕವನವು ಎಂತಹ ಸಾಮಾಜಿಕ ಸಂರಚನೆಯಲ್ಲಿ ಹೊಮ್ಮಬಹುದೆಂದು ವಿಚಾರ ಮಾಡಿದರೆ ಋಗ್ವೇದದ ಆರ್ಯರ ಸಮಾಜದಲ್ಲಿ ಇರಬಹುದಾಗಿದ್ದ ಏರುಪೇರನ್ನು ತಿಳಿಯಬಹುದು. ಪಣಿಗಳ ಬುಡಕಟ್ಟು ಸಮಾಜದಲ್ಲಿ ಇಂತಹ ಸನ್ನಿವೇಶಕ್ಕೆ ಅವಕಾಶ ಇರಲಿಲ್ಲ, ಆದರೆ ಬುಡಕಟ್ಟು ವ್ಯವಸ್ಥೆಯು ಚಿರಂತನವಾಗಿ ಉಳಿದಿರುವುದೂ ಸಾಧ್ಯವಿರಲಿಲ್ಲ. ಸಮಾಜದ ವಿಕಾಸವು ಉತ್ಪಾದನಾ ತಂತ್ರಗಳನ್ನನುಸರಿಸಿ ಮುಂದುವರಿಯುತ್ತಲೇ ಇರುತ್ತದೆ. ಅಯ್ಯೋ, ಹಿಂದಿನ ವೈಭವೋಪೇತ ಸಮಾನತೆಯ ಸಮಾಜ ಇಲ್ಲವಾಯಿತೇ ಎಂದು ಕೊರಗಬಹುದು, ಅಂದಿನ ಋತ ಎಲ್ಲಿ ಹೋಯಿತು ಎಂದು ಬಿಸುಸುಯ್ಯಬಹುದು, ಆದರೆ ವಿಕಾಸವನ್ನು ನಿರೋಧಿಸಲು ಸಾಧ್ಯವಾಗದು. ಇಂದಿನ ಸಾಮಾಜಿಕ ವ್ಯವಸ್ಥೆಗೆ ಋಗ್ವೇದವು ಕೂಗಿಹೇಳುತ್ತಿದೆ : "ಆಹಾ ವ್ಯವಸ್ಥೆಯೇ, ನೀನು ಶಾಶ್ವತವೆಂದು ಬಗೆದಿದ್ದೀಯಾ ? ನಾನೂ ನನ್ನ ಬಗೆಗೆ ಹಾಗೇ ಬಗೆದಿದ್ದೆ. ಆದರೆ ಜರುಗಿದ್ದೇ ಬೇರೆ." ಅಂದರೆ, ಅಸಮಾನತೆಯ ನಮ್ಮ ಇಂದಿನ ವ್ಯವಸ್ಥೆಯು ಶಾಶ್ವತವಲ್ಲ. ಬುಡಕಟ್ಟು ಸಮಾಜದ ಸಮಾನತೆಯಿಂದ ವೇದಕಾಲೀನ ಸಮಾಜದ ಅಸಮಾನತೆಯತ್ತ ವ್ಯವಸ್ಥೆಯು ದಾಪುಗಾಲು ಹಾಕಿತು ; ಇಂದು ಅಸಮಾನತೆಯಿಂದ ಸಮಾನತೆಯತ್ತ ಹೊರಳಿ ಋಗ್ವೇದದ ಕವಿಯೊಬ್ಬನ ಆಶಯವನ್ನು ಈಡೇರಿಸಬಹುದು. ಋಗ್ವೇದದ ಕೊನೆಯ ಮಂಡಲದ ಕೊನೆಯ ಸೂಕ್ತವು ನೀಡಿರುವ ಘೋಷವಾಕ್ಯ ಅಂಥದು : "ಮಹತ್ಫಲಗಳನ್ನು ನೀಡುವ ಅಗ್ನಿಯೇ, ನಿನ್ನವರಾದ ನಮಗೆ ಯೋಗ್ಯವಾದುದನ್ನೆಲ್ಲಾ ತುಂಬಿಕೊಡು ; ಯಜ್ಞಗೃಹದಲ್ಲಿ ರಾರಾಜಿಸುತ್ತಿದ್ದೀಯೆ, ನಮಗೆ ಸಂಪತ್ತು ತಂದುಕೊಡು. (ಅಣ್ಣ ತಮ್ಮಂದಿರೇ, ಅಕ್ಕ ತಂಗಿಯರೇ) ಒಟ್ಟಾಗಿ ನಡೆಯಿರಿ, ಒಂದೇ ದನಿಯಲ್ಲಿ ಮಾತನಾಡಿ, ನಿಮ್ಮ ಮನಸ್ಸುಗಳು ಒಂದಾಗಿರಲಿ. ನಮ್ಮ ಪ್ರಾಚೀನ ದೇವತೆಗಳನ್ನು ಅನುಕರಿಸಿ ; ಅವರೆಲ್ಲಾ ಅವರವರ ಭಾಗಗಳನ್ನು ಏಕಮತ್ಯದಿಂದ ಸ್ವೀಕರಿಸುತ್ತಿದ್ದರು ಎಂಬುದನ್ನು ತಿಳಿಯಿರಿ. ನಮ್ಮ ಮಾತು ಒಂದೇ, ಸಭಾ ಸಮಿತಿಯೂ ಒಂದೇ ; ನಮ್ಮ ಮನಸ್ಸುಗಳು ಏಕೀಭವಿಸಿಕೊಳ್ಳಲಿ, ನಮ್ಮ ಚಿಂತನೆ ಏಕಪ್ರಕಾರವಾಗಿರಲಿ. ನಮ್ಮ ಮುಂದಿರುವ ಆಶಯವು ಒಂದೇ, ಸಮಾನವಾಗಿಯೇ ನಾವು ಆಹುತಿ ನೀಡೋಣ. ನಮ್ಮ ಸಂಕಲ್ಪಗಳು ಒಂದೇ ಆಗಿರಲಿ, ನಮ್ಮ ಹೃದಯಗಳ ಮಿಡಿತವು ಒಂದೇ ತೆರನಾಗಿರಲಿ. ನಮ್ಮ ಮನಸ್ಸುಗಳು ಒಂದೇ ಆಗಿದ್ದರೆ ನಮ್ಮ ನಡುವಣ ನಿರ್ಣಯವು ಸರ್ವರ ಅನುಮತಿಯನ್ನು ಹೊಂದಿರುತ್ತದೆ" (೧೦.೧೯೧.೧-೪ : ಸಂಸಮಿದ್ಯುವಸೇ ವೃಷನ್ ಅಗ್ನೇ ವಿಶ್ವಾನಿ ಅರ್ಯಃ ಆ । ಇಳಸ್ಪದೇ ಸಮಿಧ್ಯಸೇ ಸ ನೋ ವಸೂನಿ ಆ ಭರ ॥ ಸಂ ಗಚ್ಛಧ್ವಂ ಸಂ ವದಧ್ವಂ ಸಂ ವಃ ಮನಾಂಸಿ ಜಾನತಾಂ । ದೇವಾ ಭಾಗಂ ಯಥಾ ಪೂರ್ವೇ ಸಂಜಾನಾನಾಃ ಉಪಾಸತೇ ॥ ಸಮಾನೋ ಮಂತ್ರಃ ಸಮಿತಿಃ ಸಮಾನೀ ಸಮಾನಂ ಮನಃ ಸಹ ಚಿತ್ತಂ ಏಷಾಂ । ಸಮಾನಂ ಮಂತ್ರಂ ಅಭಿ ಮಂತ್ರಯೇ ವಃ ಸಮಾನೇನ ವಃ ಹವಿಷಾ ಜುಹೋಮಿ ॥ ಸಮಾನೀ ವಃ ಆಕೂತಿಃ ಸಮಾನಾ ಹೃದಯಾನಿ ವಃ । ಸಮಾನಂ ಅಸ್ತು ವಃ ಮನಃ ಯಥಾ ವಃ ಸುಸಹಾಸತಿ ॥).

ಸಮಾನತೆಯ ಸಮಾಜವು ಕಳೆದುಹೋಗಿರುವುದು ಋಗ್ವೇದದ ಕವಿಗೆ ತಿಳಿದಿದೆ, ಅದರಿಂದ ಅವನಿಗೆ ವ್ಯಥೆಯಾಗಿದೆ ಮತ್ತು ಅದು ಮರುಕಳಿಸಬೇಕೆಂದು ಅವನು ಆಶಿಸುತ್ತಾನೆ. ಸಮಾನತೆಯ ಸಮಾಜವನ್ನು ಋಗ್ವೇದವು ಹತ್ತಿರದಿಂದ ಕಂಡಿತ್ತು, ಅದನ್ನು ಅನುಭವಿಸಿತ್ತು, ಅದರ ಬದಲಾವಣೆಯನ್ನು ಗ್ರಹಿಸಿತ್ತು. ನಂತರದ ಶತಮಾನಗಳಲ್ಲಿ ಯಜ್ಞ, ಯಜಮಾನ, ಪುರೋಹಿತ, ವರ್ಣ ವಿಭಜನೆ, ಏರುಪೇರು ಸಮಾಜ, ಹೀಗೆ ಏನೇನೋ ಘಟಿಸಿವೆ. ಆದರೆ ಸಮಾನತೆಯ ಆಕಾಂಕ್ಷೆಯು ಕರಗಿಹೋಗಿಲ್ಲ. ಋಗ್ವೇದದ ಈ ಭಾವನೆಯು ನಮ್ಮ ಭಾವನೆಯೂ ಹೌದು.

**ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ
ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫

## ಶಕ್ತಿ

ಎಣ್ಣೆ ಇಲ್ಲದೆ
ದೀಪ ಬೆಳಗದು
ಬ್ಯಾಟರಿ ಇಲ್ಲದೆ
ಮೊಬೈಲ್
ಮೊಳಗದು !

**ಲಾಲಸಾಬ ಎಚ್. ನದಾಫ**
ಬಾಗಲಕೋಟ

## ಸಮೇತನಹಳ್ಳಿ ರಾಮರಾಯರ ಹೆಸರಿನಲ್ಲಿ ಬಹುಮಾನ

ಬೆಂಗಳೂರಿನ ಸಿಂಧುಭೈರವಿ ಕಲಾ ಕುಟೀರವು ಸಮೇತನಹಳ್ಳಿ ರಾಮರಾಯರ ಹೆಸರಿನಲ್ಲಿ 'ಹೊಸತು' ಪತ್ರಿಕೆಯಲ್ಲಿ ಪ್ರಕಟವಾಗುವ ಎರಡು ಉತ್ತಮ ಲೇಖನಗಳಿಗೆ ತಲಾ ರೂ. ೫೦೦೦/– ಬಹುಮಾನ ಕೊಡಲು ತೀರ್ಮಾನಿಸಿದೆ. ಪುರುಷರು ಬರೆದ ಉತ್ತಮ ಮಹಿಳಾಪರ ಲೇಖನ, ಮಹಿಳೆಯರು ಬರೆದ ಉತ್ತಮ ಸಣ್ಣಕತೆಗೆ ಈ ಬಹುಮಾನಗಳನ್ನು ಕೊಡಲು ಸಿಂಧುಭೈರವಿ ಕುಟೀರದ ಅಧ್ಯಕ್ಷರಾದ ಭಾರತಿ ಕಾಸರಗೋಡು ಅವರು ಕೋರಿದ್ದಾರೆ. ಪ್ರತಿ ವರ್ಷ ನವೆಂಬರ್ ತಿಂಗಳಲ್ಲಿ ಈ ಬಹುಮಾನಗಳನ್ನು ಘೋಷಿಸಿ, ಕೊಡಲಾಗುವುದು.

– ಸಂ.

## ಸ್ವಾತಂತ್ರ್ಯಾನಂತರದ ಭಾರತ – ೧೯

# ಅಮೆರಿಕದೊಂದಿಗೆ ನ್ಯೂಕ್ಲಿಯರ್ ಒಪ್ಪಂದ ಯುಪಿಎಗೆ ಎಡಪಕ್ಷಗಳ ಬೆಂಬಲ ವಾಪಸು



ಮನಮೋಹನ್ ಸಿಂಗ್, ಜಾರ್ಜ್ ಬುಷ್

ದೇಶದ ಜನಸಂಖ್ಯೆಯಲ್ಲಿ ಅರ್ಧದಷ್ಟು ಮಹಿಳೆಯರೇ ಇದ್ದಾಗ್ಯೂ ರಾಜಕೀಯದಲ್ಲಿ ಅವರ ಪ್ರಾತಿನಿಧ್ಯ ತುಂಬ ಕಡಿಮೆ. ಎಡ, ಬಲ ಯಾವುದೇ ರಾಜಕೀಯ ಪಕ್ಷ ತೆಗೆದುಕೊಂಡರೂ ಮಹಿಳೆಯರ ಭಾಗವಹಿಸುವಿಕೆ ಬೆರಳೆಣಿಕೆಯಷ್ಟು. ಮಹಿಳಾ ಪ್ರಧಾನಿ, ಮಹಿಳಾ ಮುಖ್ಯಮಂತ್ರಿಗಳು, ಮಹಿಳಾ ರಾಷ್ಟ್ರಪತಿ, ಸಭಾಪತಿ ಎಲ್ಲ ಬಂದು ಹೋದರೂ ಲೋಕಸಭೆ, ಶಾಸನಸಭೆಗಳಲ್ಲಿ ಪ್ರಾತಿನಿಧ್ಯ ಮಾತ್ರ ಬೆರಳೆಣಿಕೆಯಷ್ಟು. ಇದಕ್ಕೆ ಯಾರು ಕಾರಣ ಎಂಬ ಚರ್ಚೆ ಇಲ್ಲಿ ಅನಗತ್ಯ. ರಾಜಕೀಯ ಪಕ್ಷಗಳು ಮಹಿಳಾ ವಿಭಾಗಗಳನ್ನು ಹೊಂದಿದ್ದರೂ ಅವರ ರಾಜಕೀಯ ಪ್ರವೇಶಕ್ಕೆ ಅಷ್ಟಾಗಿ ಗಮನ ನೀಡಿಲ್ಲ ಎನ್ನಬಹುದು. ಗ್ರಾಮ ಪಂಚಾಯಿತಿ ಮಟ್ಟದಲ್ಲಿ ಮಹಿಳೆಯರ ಪ್ರಾತಿನಿಧ್ಯ ಈಚಿನ ವರ್ಷಗಳಲ್ಲಿ ಹೆಚ್ಚಾಗಿರುವುದು ಸ್ವಾಗತಾರ್ಹ. ಕೆಲವು ಕ್ಷೇತ್ರಗಳನ್ನು ಮಹಿಳೆಯರಿಗಾಗಿಯೇ ಮೀಸಲಾಗಿರಿಸುವ ಪರಿಪಾಠ ಸ್ಥಳೀಯ ಸಂಸ್ಥೆಗಳಲ್ಲಿ ಜಾರಿಯಲ್ಲಿವೆ. ಪ್ರಮುಖ ಪಕ್ಷಗಳು ಚುನಾವಣೆಗಳ ಸಮಯದಲ್ಲಿ ಗೆಲುವಿಗೇ ಪ್ರಾಧಾನ್ಯತೆ ನೀಡುವುದರಿಂದ ಸ್ತ್ರೀಯರಿಗೆ ಪ್ರವೇಶ ಕಡಿಮೆ. ಈ ಕೊರತೆಯನ್ನು ನೀಗಿಸುವುದಕ್ಕಾಗಿಯೇ ಹುಟ್ಟಿಕೊಂಡಿದ್ದು ಲೋಕಸಭೆ ಹಾಗೂ ಶಾಸನಸಭೆಗಳಲ್ಲಿ ಮೂರನೇ ಒಂದು ಭಾಗ ಸೀಟುಗಳನ್ನು ಮಹಿಳಾ ಪ್ರತಿನಿಧಿಗಳಿಗೆ ಮೀಸಲಾಗಿರಿಸಬೇಕು ಎಂಬ ವಿಚಾರ. ಸಾಕಷ್ಟು ಪ್ರಚಾರ ಪಡೆದುಕೊಂಡ ಈ ವಿಚಾರ ಕಾಯಿದೆ ರೂಪದಲ್ಲಿ ಆಚರಣೆಗೆ ಬರಲೇ ಇಲ್ಲ. ಮಸೂದೆಯೊಂದು ಸಿದ್ಧವಾಗಿದ್ದರೂ ರಾಜಕೀಯ ಪಕ್ಷಗಳಲ್ಲಿ ಏಕಾಭಿಪ್ರಾಯ ಮೂಡದೇ ಹೋದ್ದರಿಂದ ಲೋಕಸಭೆಯಲ್ಲಿ ಮಂಡನೆಯಾಗಲೇ ಇಲ್ಲ ಈವರೆಗೆ. ಯುಪಿಎ ಸರಕಾರದ ಅಂಗಪಕ್ಷಗಳಲ್ಲೇ ಈ ಬಗ್ಗೆ ಒಮ್ಮತದ ಕೊರತೆ ಇತ್ತು. ಯುಪಿಎ ಸರಕಾರದ ಅವಧಿಯಲ್ಲಿ ಅನುಮೋದನೆಯಾದ್ದು ಎಂದರೆ ಗೃಹಿಣಿಯರ ಮೇಲೆ ನಡೆಯುವ ದೌರ್ಜನ್ಯದಿಂದ ಮಹಿಳೆಯನ್ನು ಕಾಪಾಡಲು ತಂದ ಕಾಯಿದೆ. ಅನುಮೋದನೆಯಾಗದೇ ಹೋದ ಇನ್ನೊಂದು ಕಾಯಿದೆ ಶಿಕ್ಷಣದ ಹಕ್ಕು ಮಸೂದೆ. ಕೇಂದ್ರ ಶಿಕ್ಷಣ ಸಲಹಾ ಮಂಡಳಿಯು ಎರಡು ವರ್ಷ ಚರ್ಚಿಸಿ ಸಿದ್ಧಗೊಳಿಸಿದ ಈ ಮಸೂದೆ ಕೇಂದ್ರ ಮತ್ತು ರಾಜ್ಯ ಸರಕಾರಗಳ ಮಧ್ಯೆ ಪರದಾಡಿ ಹಣಕಾಸಿನ ಕೊರತೆಯಿಂದಾಗಿ ಮಂಡನೆಯಾಗಲೇ ಇಲ್ಲ. ಎರಡನೇ ಅವಧಿಯಲ್ಲಿ ಅನುಮೋದನೆಯಾಯಿತು.

ಯುಪಿಎ ಸರಕಾರ ಅಧಿಕಾರಕ್ಕೆ ಬಂದಾಗಿನಿಂದ ಕಳಂಕಿತರಿಗೆ ಸಚಿವ ಸ್ಥಾನ ನೀಡಿರುವುದರ ಬಗ್ಗೆ ಪ್ರತಿಪಕ್ಷಗಳ ವಾಗ್ದಾಳಿ ನಡೆದಿತ್ತು. ಪ್ರಮುಖವಾಗಿ ಬಿಹಾರದ ಲಾಲೂಪ್ರಸಾದ್ ಯಾದವ್ ಮತ್ತು ಚತ್ತೀಸ್‌ಘಡದ ಶಿಬು ಸೋರೇನ್ ಇವರನ್ನು ಸಂಪುಟದಿಂದ ಕೈಬಿಡಬೇಕೆಂಬ ಒತ್ತಾಯ ಇತ್ತು. ಈ ವಿಷಯದಲ್ಲಿ ಪ್ರತಿಪಕ್ಷಗಳು ಹಿಡಿದಪಟ್ಟು,

ಸಿ. ಆರ್. ಕೃಷ್ಣರಾವ್

ನಡೆಸಿದ ಧರಣಿ ಇವುಗಳಿಂದಾಗಿ ಲೋಕಸಭೆಯ ಕಾರ್ಯಕಲಾಪಗಳಿಗೆ ಅಡ್ಡಿಯಾಗಿ ಸಭೆಯನ್ನು ಹಲವು ಬಾರಿ ಮುಂದೂಡುವ ಸಂದರ್ಭ ಉಂಟಾಯಿತು. ಜರೂರು ಪ್ರಶ್ನೆಗಳು ಉದ್ಭವಿಸಿದಾಗ ಪೂರ್ವ ನಿಗದಿತ ಕಲಾಪವನ್ನು ಮುಂದಕ್ಕೆ ಹಾಕಿ, ಪ್ರತಿಪಕ್ಷಗಳು ಮಂಡಿಸಿರುವ ವಿಷಯವನ್ನು ಚರ್ಚೆಗೆ ಎತ್ತಿಕೊಳ್ಳಬೇಕೆಂಬುದಾಗಿ ಒತ್ತಾಯಪಡಿಸುವುದು ಪ್ರಜಾಪ್ರಭುತ್ವದಲ್ಲಿ ಮೂಲಭೂತವಾದ ಹಕ್ಕು. ಆಡಳಿತ ಪಕ್ಷ ಅದಕ್ಕೆ ಸಮ್ಮತಿಸದಿದ್ದಾಗ ಆಕ್ರೋಶ ವ್ಯಕ್ತಗೊಳಿಸಿ ಸದನದಲ್ಲಿ ಧರಣಿ ನಡೆಸುವುದು ಒಂದು ಬಗೆಯ ಪ್ರತಿಭಟನೆ, ಅದು ನ್ಯಾಯಸಮ್ಮತವೂ ಕೂಡ. ವಿಷಯದ ಗಂಭೀರತೆಯನ್ನು ಅದು ವ್ಯಕ್ತಗೊಳಿಸುತ್ತದೆ. ಇದು ಮೊದಲಿನಿಂದಲೂ ಬಂದದ್ದು. ಇಂಥ ಪ್ರತಿಭಟನೆ ಮಿತಿ ಇಲ್ಲದೆ ನಡೆದು ಇಡೀ ಅಧಿವೇಶನದ ಕಲಾಪಗಳನ್ನೇ ನುಂಗಿದಾಗ ಆತಂಕ ಉಂಟಾಗುವುದು ಸಹಜ. ಯುಪಿಎ ಸರಕಾರದ ಎರಡನೇ ಅವಧಿಯಲ್ಲಂತೂ ಪಾರ್ಲಿಮೆಂಟಿನ ಉಭಯಸದನಗಳಲ್ಲೂ ಕಲಾಪ ನಡೆದುದೇ ಕಡಿಮೆ. ಇದಕ್ಕೆ ಪರಿಹಾರವೇನು? ಸಾರ್ವಜನಿಕರ ಹಣ ಪೋಲಾದಂತೆ ಅಲ್ಲವೆ? ಇದನ್ನು ತಪ್ಪಿಸುವುದಕ್ಕೆ ಕ್ರಮ ಆಲೋಚಿಸಬೇಕಾದ ಸಂಗತಿ. ಹಗರಣಗಳ ಸರಮಾಲೆಯೇ ಕಲಾಪಕ್ಕೆ ಕುತ್ತಾಯಿತು. ಕಳಂಕಿತ ಸಚಿವರುಗಳಾದ ಲಾಲೂಪ್ರಸಾದ್ ಯಾದವ್ ಹಾಗೂ ಶಿಬು ಸೋರೇನ್ ಇಬ್ಬರೂ ಸಚಿವ ಸ್ಥಾನ ತ್ಯಜಿಸಿದ್ದು ಅಪರಾಧ ಸಾಬೀತಾಗಿ ಕಾರಾಗೃಹ ಸೇರಿದ ಮೇಲೆ. ಲಾಲೂಪ್ರಸಾದ್ ಯಾದವ್



ಪ್ರಕಾಶ್ ಕಾರಟ್

ಬಿಹಾರದ ಮುಖ್ಯಮಂತ್ರಿಯಾಗಿದ್ದಾಗ ಬಹು ಕೋಟಿ ಮೇವು ಹಗರಣದಲ್ಲಿ ಆಪಾದಿತರಾಗಿದ್ದರು. ಮುಖ್ಯಮಂತ್ರಿ ಸ್ಥಾನ ತ್ಯಜಿಸಿ ಪತ್ನಿ ರಾಬ್ರಿ ದೇವಿಯನ್ನು ಮುಖ್ಯಮಂತ್ರಿಯನ್ನಾಗಿಸಿ ಕೇಂದ್ರ ಸಂಪುಟ ಸೇರಿದ್ದರು. ಅದೇ ರೀತಿಯಲ್ಲೇ ಶಿಬು ಸೋರೇನ್ ಚತ್ತೀಸ್‌ಘಡದ ಮುಖ್ಯಮಂತ್ರಿಯಾಗಿದ್ದವರು. ಅವರ ಮೇಲಿದ್ದುದು ಕೊಲೆ ಆರೋಪ.

ವಿದೇಶಾಂಗ ನೀತಿಯ ಕ್ಷೇತ್ರದಲ್ಲಿ ಯುಪಿಎ ಸರಕಾರದ ನೀತಿ ಎನ್‌ಡಿಎ ನೀತಿಯ ಮುಂದುವರಿಕೆಯೇ ಆಗಿತ್ತು. ಮನಮೋಹನ್ ಸಿಂಗ್ ಪ್ರಧಾನಿಯಾದ ಮೇಲೆ ಅಮೆರಿಕ ಪರ ಒಲವು, ಹೊಂದಾಣಿಕೆ ನಿರೀಕ್ಷಿತವಾಗಿಯೇ ಅಧಿಕಗೊಂಡಿತು. ಭಾರತದ ಸ್ವಾತಂತ್ರ್ಯ ಸಾರ್ವಭೌಮತ್ವಗಳನ್ನು ಎತ್ತಿ ಹಿಡಿಯುವ ನಿಲುವಿಗೆ ಪ್ರತಿಯಾಗಿ ಅದನ್ನು ಅಮೆರಿಕದ ಮರ್ಜಿಗೆ ಅನುಸಾರವಾಗಿ ಲಗತ್ತಿಸುವ ಕಾರ್ಯ ಎಂದೋ ಆರಂಭವಾಗಿತ್ತು. ಅದು ಈಗ ಇನ್ನಷ್ಟು ಪ್ರಬಲವಾಗಿ ವ್ಯಕ್ತವಾಗತೊಡಗಿತು. ಯುಪಿಎ ಸರಕಾರ ಅಧಿಕಾರ ವಹಿಸಿಕೊಂಡ ಮೇಲೆ ಭಾರತಕ್ಕೆ ಭೇಟಿ ನೀಡಿದ ಅಮೆರಿಕದ ವಿದೇಶಾಂಗ ಸಚಿವೆ ಕಾಂಡಲೀಸ ರೈಸ್ ಭಾರತವನ್ನು ಜಗತ್ತಿನ ಪ್ರಬಲಶಕ್ತಿಯಾಗಿಸುವ ಭರವಸೆಯನ್ನು ನೀಡಿದರು. ಜುಲೈ ೨೦೦೫ರಲ್ಲಿ ಮನಮೋಹನ್ ಸಿಂಗ್ ವಾಷಿಂಗ್ಟನ್‌ಗೆ ಭೇಟಿ ನೀಡಿದ್ದಾಗ ನ್ಯೂಕ್ಲಿಯರ್ ಶಕ್ತಿ ಕ್ಷೇತ್ರದಲ್ಲಿ ಪರಸ್ಪರ ಸಹಕಾರದ ಬಗ್ಗೆ ಪ್ರಸ್ತಾಪ ಮಾಡಲಾಯಿತು. ಭೇಟಿಯ ನಂತರ ನೀಡಿದ ಜಂಟಿ ಹೇಳಿಕೆಯಲ್ಲಿಯೂ ನಾಗರಿಕ ಹಾಗೂ ಮಿಲಿಟರಿ ಕ್ಷೇತ್ರದಲ್ಲಿ ನ್ಯೂಕ್ಲಿಯರ್ ಸಹಕಾರದ ವಿವರಗಳನ್ನು ಗುರುತಿಸಿ ಒಂದು ಒಪ್ಪಂದಕ್ಕೆ ಬರುವ ಸೂಚನೆ ಇತ್ತು. ಇದು ಭಾರತದಲ್ಲಿ ಭಾರಿ ವಿವಾದವನ್ನೇ ಸೃಷ್ಟಿಸಿತು. ವಿಜ್ಞಾನಿಗಳು, ಮುಖ್ಯವಾಗಿ ನ್ಯೂಕ್ಲಿಯರ್ ವಿಜ್ಞಾನಿಗಳು, ನಾಗರಿಕರು, ಎಡಪಕ್ಷಗಳು ಈ ಪ್ರಸ್ತಾಪ ಕುರಿತು ಆತಂಕ ವ್ಯಕ್ತಗೊಳಿಸಿದುವು. ಅಂಥ ಸಹಕಾರ ಒಪ್ಪಂದವಾದಲ್ಲಿ ಭಾರತದ ನ್ಯೂಕ್ಲಿಯರ್ ಕ್ಷೇತ್ರ ಅಮೆರಿಕದ ಅಧೀನಕ್ಕೆ ಒಳಪಡುವುದೆಂದೂ, ಭಾರತದ ಭದ್ರತೆಗೆ ಧಕ್ಕೆಯಾಗುವುದು ಎಂಬುದು ವಾದವಾಗಿತ್ತು. ಈ ವಿವಾದ ತೀವ್ರವಾಗಿದ್ದರೂ ಲೆಕ್ಕಿಸದೆ ೨೦೦೮ರ ಜುಲೈ ತಿಂಗಳಲ್ಲಿ ಭಾರತ ಮತ್ತು ಅಮೆರಿಕ ಸರಕಾರಗಳು ಒಪ್ಪಂದಕ್ಕೆ ಸಹಿ ಹಾಕಿದುವು. ಪ್ರಧಾನಿ ಮನಮೋಹನ್ ಸಿಂಗ್ ಅಮೆರಿಕದೊಂದಿಗೆ ನ್ಯೂಕ್ಲಿಯರ್ ಸಹಕಾರ ಒಪ್ಪಂದ ಮಾಡಿಕೊಳ್ಳಲು ಪಟ್ಟುಹಿಡಿದದ್ದರಿಂದ ಎಡಪಕ್ಷಗಳು ಯುಪಿಎ ಸರಕಾರಕ್ಕೆ ನೀಡಿದ್ದ ಬೆಂಬಲವನ್ನು ಹಿಂಪಡೆದುವು.

ಮುಲಾಯಮ್ ಸಿಂಗ್ ನಾಯಕತ್ವದಲ್ಲಿದ್ದ ಉತ್ತರ ಪ್ರದೇಶದ ಸಮಾಜವಾದಿ ಪಕ್ಷ, ಮಾಯಾವತಿ ನೇತೃತ್ವದ ಬಹುಜನ ಸಮಾಜವಾದಿ ಪಾರ್ಟಿ ಮುಂತಾದ ಪಕ್ಷಗಳ ನೆರವಿನಿಂದ ಮನಮೋಹನ್ ಸಿಂಗ್ ಸರಕಾರ ಮುಂದುವರಿಯಿತು. ಆದರೆ ಅಮೆರಿಕದೊಂದಿಗೆ ನ್ಯೂಕ್ಲಿಯರ್ ಒಪ್ಪಂದ ಅನುಷ್ಠಾನವಾಗದೆ ಹಾಗೇ ಉಳಿಯಿತು. ಇಲ್ಲಿಯವರೆಗೆ ವಿವರಗಳು ಇನ್ನೂ ಅಪೂರ್ಣ. ಮುಖ್ಯವಾಗಿ ಅಪಘಾತ ಸಂಭವಿಸಿದಾಗ ಹೊಣೆ ಯಾರು ಎಂಬುದು ವಿವಾದಾಸ್ಪದ, ಮೋದಿ ಸರಕಾರ ಇನ್ಶೂರೆನ್ಸ್ ಕವಚದ ಪ್ರಸ್ತಾಪವನ್ನು ಪರಿಹಾರವಾಗಿ ಸೂಚಿಸಿದ್ದರೂ ಅನಿಶ್ಚಿತತೆ ಮುಂದುವರಿಯುತ್ತಿದೆ.



ಶಿಬು ಸೋರೇನ್

ಒಪ್ಪಂದದ ಮೂಲಕ ಅಮೆರಿಕ ಭಾರತಕ್ಕೆ ಹಲವು ಹಳೆಯ ತಂತ್ರಜ್ಞಾನದ ರಿಯಾಕ್ಟರುಗಳನ್ನು ಸರಬರಾಜು ಮಾಡಲು ಹವಣಿಸಿತ್ತು. ಜೊತೆಗೆ ಭಾರತದ ನ್ಯೂಕ್ಲಿಯರ್ ಕ್ಷೇತ್ರದ ಮೇಲೆ ಉಸ್ತುವಾರಿ ನಡೆಸಲು ಅಮೆರಿಕಕ್ಕೆ ಅವಕಾಶವಾಗುತ್ತದೆ. ಹಾಗಾಗಿ ಈ ಒಪ್ಪಂದ ಎಂದಿದ್ದರೂ ಅಪಾಯಕಾರಿಯೆ. ಯುಪಿಎ ಸರಕಾರಕ್ಕೆ ನೀಡಿದ್ದ ಬೆಂಬಲವನ್ನು ಹಿಂಪಡೆದ ಎಡಪಕ್ಷಗಳ ನಿರ್ಧಾರ ಸರಿಯೆನ್ನುವುದು ವಿವಾದಾಸ್ಪದ. ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷ, ಭಾರತ ಕಮ್ಯುನಿಸ್ಟ್ ಪಕ್ಷಗಳಲ್ಲಿಯೇ ಈ ವಿಚಾರದ ಕುರಿತು ಭಿನ್ನಾಭಿಪ್ರಾಯಗಳಿವೆ. ಏನೇ ಆದರೂ ಈ ತೀರ್ಮಾನ ದುಬಾರಿ ನಷ್ಟವಾಗಿ ಪರಿಣಮಿಸಿತು ಮುಂದಿನ ಚುನಾವಣೆಗಳಲ್ಲಿ.

ಆರ್ಥಿಕ ಕ್ಷೇತ್ರದಲ್ಲಿ ಯುಪಿಎ ಸರಕಾರದ ಮೊದಲನೆಯ ಅವಧಿಯಲ್ಲಿ ಅಂಥ ಸಾಧನೆ ಏನಿರಲಿಲ್ಲ. ಅಮೆರಿಕ, ಯುರೋಪುಗಳಲ್ಲಿ ಸಂಭವಿಸಿದ ಆರ್ಥಿಕ ಕುಸಿತದ ಪರಿಣಾಮಗಳು ಭಾರತಕ್ಕೆ ಅಷ್ಟಾಗಿ ತಟ್ಟಲಿಲ್ಲ. ಕಾರಣ ಭಾರತದ ಬ್ಯಾಂಕಿಂಗ್ ವ್ಯವಸ್ಥೆ ಬಹುತೇಕ ಸರಕಾರದ ನಿಯಂತ್ರಣದಲ್ಲಿತ್ತು. ಆರ್ಥಿಕಾಭಿವೃದ್ಧಿಯ ಗತಿ ನಿರೀಕ್ಷಿತ ಪ್ರಮಾಣವನ್ನು ತಲುಪಲೇ ಇಲ್ಲ. ಉದಾರೀಕರಣ, ಜಾಗತೀಕರಣದ ನೀತಿಯನ್ನು ಚಾಚೂ ತಪ್ಪದೆ ಪಾಲಿಸಿದ ಸರಕಾರ ವಿದೇಶೀ ಬಂಡವಾಳದ ಆಕರ್ಷಣೆಗೆ ಸತತವಾದ ಪ್ರಯತ್ನ ನಡೆಸಿತು. ಚಿಲ್ಲರೆ ಮಾರಾಟದ ಕ್ಷೇತ್ರಕ್ಕೂ ವಿದೇಶೀ ಕಂಪೆನಿಗಳಿಗೆ ಅವಕಾಶ ನೀಡಲು ಸರಕಾರ ಸಿದ್ಧವಾಗಿತ್ತು. ಪ್ರಬಲವಾದ ವಿರೋಧದಿಂದಾಗಿ ಅದು ಕಾರ್ಯಗತವಾಗಲಿಲ್ಲ. ಅಮೆರಿಕದ ಬಹು ದೊಡ್ಡ ಚಿಲ್ಲರೆ ಮಾರಾಟ ಸಂಸ್ಥೆ ಭಾರತ ಪ್ರವೇಶಿಸಲು ತುದಿಗಾಲಲ್ಲಿ ನಿಂತಿತು. ಕೃಷಿಕ್ಷೇತ್ರದಲ್ಲಿ ಪ್ರಗತಿಗಿಂತ ದುಷ್ಪರಿಣಾಮಗಳೇ ಹೆಚ್ಚು. ರೈತರ ಆತ್ಮಹತ್ಯೆ ಪ್ರಕರಣಗಳು ಎಗ್ಗಿಲ್ಲದೆ ಸಾಗಿತ್ತು. ಅದು ಇಪ್ಪತ್ತೊಂದನೆ ಶಾಪವೇನೋ ಎನ್ನುವಷ್ಟರಮಟ್ಟಿಗೆ ಮುಂದುವರಿದಿದೆ. ಸರಕಾರದ ಉದ್ದೇಶಿತ ವಿಶೇಷ ಆರ್ಥಿಕ ವಲಯದ ರಚನೆಯ ಹೆಸರಿನಲ್ಲಿ ರೈತರ ಭೂಮಿಯನ್ನು ಕಬಳಿಸುವ ಹುನ್ನಾರ ನಡೆದಿತ್ತು. ಅದನ್ನೇ ಮುಂದುವರಿಸಿರುವ ಭಾಜಪ ನೇತೃತ್ವದ




ಲಾಲೂಪ್ರಸಾದ್ ಯಾದವ್, ರಾಬ್ರಿದೇವಿ

ಮೋದಿ ಸರಕಾರ ಅಭಿವೃದ್ಧಿಯ ಹೆಸರಿನಲ್ಲಿ ಕಾರ್ಪೊರೇಟ್ ಅಧಿಪತಿಗಳಿಗೆ ರೈತರ ಭೂಮಿಯನ್ನು ಬಳುವಳಿಯಾಗಿ ನೀಡಲು ಹವಣಿಸಿದೆ. ಅದು ಜಾರಿಗೆ ತರಲು ಬಯಸಿರುವ ಭೂಸಂಬಂಧ ತಿದ್ದುಪಡಿ ಕಾಯಿದೆ ದೇಶದಲ್ಲಿ ಸಾಕಷ್ಟು ವಿವಾದ ವನ್ನುಂಟುಮಾಡಿದೆ. ರೈತರಿಂದ, ಪ್ರತಿಪಕ್ಷಗಳಿಂದ ಭಾರಿ ವಿರೋಧವನ್ನು ಎದುರಿಸುತ್ತಿದೆ. ತಿದ್ದುಪಡಿಗೆ ಪಟ್ಟುಹಿಡಿದಿರುವ ಸರಕಾರ ಸದ್ಯಕ್ಕೆ ಸುಗ್ರೀವಾಜ್ಞೆಗೆ ಮೊರೆಹೋಗಿದೆ. ಅದು ಬೇರೆಯೇ ವಿಷಯ. ವಿವಾದದ ಸುಳಿಯಲ್ಲೇ ಅಧಿಕಾರಕ್ಕೇರಿದ ಯುಪಿಎ ಸರಕಾರ ಐದು ವರ್ಷಗಳ ಅವಧಿ ಪೂರ್ಣಗೊಳಿಸಿ ಮತ್ತೆ ಅಧಿಕಾರಕ್ಕೆ ಬಂದದ್ದು ಒಂದು ದಾಖಲೆ.

ಹದಿನೈದನೆ ಲೋಕಸಭೆಯ ಚುನಾವಣೆಯು ೨೦೦೯ರ ಎಪ್ರಿಲ್ ತಿಂಗಳಲ್ಲಿ ನಡೆಯಿತು. ಯುಪಿಎ ೩೨೨ ಸ್ಥಾನಗಳನ್ನು ಪಡೆದು ಮತ್ತೆ ಅಧಿಕಾರಕ್ಕೇರಿತು. ಪಶ್ಚಿಮ ಬಂಗಾಳದಲ್ಲಿ ೧೯ ಸ್ಥಾನಗಳನ್ನು ಪಡೆದ ಮಮತಾ ಬ್ಯಾನರ್ಜಿ ನೇತೃತ್ವದ ತೃಣಮೂಲ ಕಾಂಗ್ರೆಸ್ ಯುಪಿಎ ಸರಕಾರದ ಅಂಗಪಕ್ಷವಾಯಿತು. ೨೦೦೪ರ ಚುನಾವಣೆಯಲ್ಲಿ ೧೪೫ ಸ್ಥಾನಗಳನ್ನು ಪಡೆದಿದ್ದ ಕಾಂಗ್ರೆಸ್ ಈ ಬಾರಿ ೨೦೬ ಸ್ಥಾನಗಳನ್ನು ಗಳಿಸಿತು. ಭಾಜಪದ ಸಂಖ್ಯೆ ೧೧೬ಕ್ಕೆ ಇಳಿಯಿತು. ಗಮನಾರ್ಹವಾದ ಸಂಗತಿ ಎಂದರೆ ಎಡಪಕ್ಷಗಳ ಸ್ಥಾನಗಳು ಅರ್ಧಕ್ಕಿಂತ ಹೆಚ್ಚಾಗಿ ಕುಸಿದದ್ದು. ಹಿಂದಿನ ಲೋಕಸಭೆಗೆ ಹೋಲಿಸಿದರೆ ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷದ ಸ್ಥಾನ ೧೬ಕ್ಕೆ ಇಳಿಯಿತು. ಅದು ೨೭ ಸ್ಥಾನಗಳನ್ನು ಕಳೆದುಕೊಂಡಿತು. ಭಾರತ ಕಮ್ಯುನಿಸ್ಟ್ ಪಕ್ಷದ ಸಂಖ್ಯೆ ೬ರಿಂದ ೪ಕ್ಕೆ ಇಳಿಯಿತು. ಪ್ರಧಾನವಾಗಿ ಈ ಸೋಲು ಸಂಭವಿಸಿದ್ದು ಪಶ್ಚಿಮ ಬಂಗಾಳದಲ್ಲಿ. ಪ್ರಾಯಶಃ ಇದು ಮುಂದೆ ನಡೆಯಲಿದ್ದ ಶಾಸನಸಭೆ ಚುನಾವಣೆಗಳಿಗೆ ಮುನ್ಸೂಚನೆಯಾಗಿತ್ತು. ಅಂತೂ ಅಧಿಕ ಬಲದಿಂದ ಎರಡನೇ ಬಾರಿಗೆ ಅಧಿಕಾರಕ್ಕೇರಿದ ಯುಪಿಎ ಆಡಳಿತ ಪ್ರಾರಂಭದಿಂದ ಕೊನೆಯವರೆಗೆ ಸಾವಿರಾರು ಕೋಟಿ ಹಗರಣಗಳ ಸುಳಿಯಲ್ಲಿ ಮುಳುಗಿತು.

**(ಮುಂದುವರಿಯುವುದು)**

**ಸಿ. ಆರ್. ಕೃಷ್ಣರಾವ್**
'ಚೌಬೀನ', ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂ.–೮೫



## ಅನುಭವ

**ನೆ**ಲದ ಮೇಲೆ ಹೃದಯವನ್ನು ಗೀಚಿ
'ಐ ಲವ್ ಯೂ' ಎಂದಳು ಕಿರುನಗೆಯ ಕಣ್ಣುಗಳೊಂದಿಗೆ
ಅದನ್ನು ಬಾಣದಿಂದ ತಿವಿದು
'ಹೃದಯಕ್ಕಿಂತ ನಿನ್ನ ಕಿಡ್ನಿಯೇ ಅಮೂಲ್ಯವಾದುದು ಪ್ರಿಯೇ'
ಅಂದನು ಪಾಚಿಯುಳ್ಳ ನಗುವಿನೊಂದಿಗೆ
ಗಾಯಗೊಂಡ ಹೊಳೆ ಸುಳಿದಿರುಗಿತು
ಉಗುರುಬೆಚ್ಚನೆ ಪಾರ್ಕು ಗಾಳಿ ಕತ್ತರಿಸುತ್ತ ಸಾಗಿತು
ಬೆಳದಿಂಗಳು ಒಡೆದು ಮನಸ್ಸು ಗಡ್ಡೆಕಟ್ಟತೊಡಗಿತು

ಸಿನಿಮಾ ತೆರೆ ಮೇಲೆ ಬಣ್ಣಗಳ ಕಾಮನಬಿಲ್ಲು
ಕಪ್ಪಾಗಿ ಬದಲಾಗುತ್ತಿರುವ ವೇಳೆ
ತಡವುತ್ತಿರುವ ಆತನ ಉಗುರಿನ ಸಂಕೇತಗಳಿಗೆ
ಹೊಟ್ಟೆಯೊಳಗಿನ ಚಿನ್ನಾರಿ ಅಕ್ರಮವಾಗಿ ಕದಲತೊಡಗಿತು

ಅನಾದಿ ಅನ್ಯಾಯವನ್ನು
ಅವರಿಗೆ ಅವರು ಮೊದಲ ಸಲ ಅನುಭವಿಸಿದಾಗ
ಒಡೆದೂ ಒಡೆಯದ ಮಾತುಗಳಿಗೆ
ಬಿಕ್ಕಳಿಕೆಗಳು ಜೊತೆಯಾಗುತ್ತವೆ
ತಪ್ಪೊಪ್ಪುಗಳ ಚರ್ಚೆ ಎರಡೂ ಮೊನೆಗಳ ಕತ್ತಿ ಹಾಗೆ
ಜೋತಾಡುತ್ತದೆ
ಸ್ವಂತ ಮನೆಯೇ ಶತ್ರು ಶಿಬಿರವಾಗುತ್ತದೆ

ಸಿನಿಮಾ ಕಥೆ ತಿರುವು ತಿರುಗುತ್ತಿರುವ ಘಟ್ಟದಲ್ಲಿ
ರೂಪು ತಾಳದ ಜೀವಿತದೊಂದಿಗೆ
ಆಕೆಯ ಮುಖಾಮುಖಿ ಆರಂಭವಾಗತೊಡಗಿತು
ಕಣ್ಣೀರು ತೊಡೆದುಕೊಂಡಷ್ಟು ಸುಲಭವಾಗಿ
ಗತವನ್ನು ಒರೆಸಿಹಾಕಿದಳು

ಸ್ವಪ್ನಲೋಕದ ರಹದಾರಿಯೊಳಗೆ ಬಂದು ಹೋಗುವುದ ನಿಷೇಧಿಸಿದಳು
ಮರದ ನೆರಳಲ್ಲಿ ಗುಟ್ಟಾಗಿ ಹಬ್ಬಿಕೊಂಡ ಅನುಬಂಧವನ್ನು
ಮರಕುಟುಕ ಹಕ್ಕಿಗಳಿಗೆ ಅರ್ಪಣೆಯಾಗಿಸಿದಳು
ತಮ್ಮ ಹೆಸರುಗಳ ಕೆತ್ತಿಕೊಂಡ ಕಲ್ಲು
ಪ್ರೇಮ ಸಮಾಧಿ ಮೇಲೆ ಶಿಲಾಫಲಕವಾಯಿತು
ಮನುಷ್ಯಳು ಒಂಟಿಯಾದರೂ ಹೆಜ್ಜೆಗಳು ಜಂಟಿಯಾಗಿ ಅನುಸರಿಸಿದವು

ನೇಣು ಹಗ್ಗದ ಮೇಲೆ ಉದಯಕಾಂತಿಯ ಹಾಗೆ ಆಸೆ ಹೊಸ ಶಕ್ತಿ ಕೊಡುತ್ತಿದೆ
ನಂಬಿಕೆ ಚೂರಾದ ಕಡೆ ಆತ್ಮವಿಶ್ವಾಸ ಹೊಸ ನೋಟ ಕೊಡುತ್ತಿದೆ
ಕ್ಷಣಿಕಾವೇಶಗಳ ಮನಸ್ಸು ಹೇಳುವ ಮಾರ್ಗವನ್ನು ಬೇಡವೆಂದುಕೊಂಡು
ಅನುಭವ ತೋರಿದ ಹಾದಿಯಲ್ಲಿ ಆಕೆ ನಡೆದುಹೋಗುತ್ತಿರಲು
ಕತ್ತಲೆಯಲ್ಲಿ ಒಂದು ದೀಪ ನಿರ್ಭಯವಾಗಿ ನುಗ್ಗಿ ಹೋಗುತ್ತಿರುವಂತಿದೆ.

ತೆಲುಗು ಮೂಲ : **ಅನ್ನಂಗಿ ವೇಣುಗೋಪಾಲ್**
ಕನ್ನಡಕ್ಕೆ : **ಕಸ್ತೂರಿ**
ಹ–೨೬, ೧೫ನೇ ಅಡ್ಡರಸ್ತೆ, ಎಸ್. ಎಸ್. ಪುರಂ, ತುಮಕೂರು – ೫೭೨ ೧೦೨





## ಹೊಸ ಓದು



### ಮನುಕುಲ ರಕ್ಷಣೆಗೆ ಮಹತ್ವದ ದಿನಗಳು

**(ಪರಿಸರ ಸಾಹಿತ್ಯ)**

*ನಾಗೇಶ ಹೆಗಡೆ, ಈಶ್ವರ ಪ್ರಸಾದ್*

**ಪುಟ : ೨೧೪**

**ಬೆಲೆ : ರೂ. ೧೮೦**

**ಭೂಮಿ ಬುಕ್ಸ್** ೧೫೦, ಮೊದಲನೇ ಮೇನ್ ಶೇಷಾದ್ರಿಪುರಂ, ಬೆಂಗಳೂರು – ೫೬೦ ೦೨೦

*ಮಾನವ ಇಂದು ಜೀವಿಸುತ್ತಿರುವ ಭೂ ಪರಿಸರ ಅತ್ಯಂತ ಕಲುಷಿತವಾಗಿದೆ. ನೆಲ–ಜಲ–ವಾಯು ಮಾಲಿನ್ಯ ಮಿತಿ ಮೀರಿದೆ. ಇದು ಸ್ವಯಂಕೃತಾಪರಾಧವಾದರೂ ಆತ ಇನ್ನೂ ಎಚ್ಚೆತ್ತುಕೊಳ್ಳುವ ಲಕ್ಷಣಗಳು ಕಾಣಿಸುತ್ತಿಲ್ಲ. ಸುಖ ಸೌಕರ್ಯಕ್ಕಾಗಿ ಪರಿಸರವನ್ನು ಹಾಳುಗೆಡವುದನ್ನು ಬಿಟ್ಟಿಲ್ಲ. ಅಕಾಲವೃಷ್ಟಿ–ಅತಿವೃಷ್ಟಿ–ಅನಾವೃಷ್ಟಿಗಳಿಂದಾಗಿ ಎಲ್ಲವೂ ತಾಳ ತಪ್ಪುತ್ತಿದ್ದು ಮುಂದೆ ಮನುಕುಲದ ವಿನಾಶ ಕಾದಿದೆಯೆಂದು ಜಗತ್ತಿನಾದ್ಯಂತ ಜನರನ್ನು ಜಾಗೃತಗೊಳಿಸುವ ಪ್ರಯತ್ನ ಸಾಗಿದೆ. ವಿಶ್ವಸಂಸ್ಥೆ ಈ ದಿಸೆಯಲ್ಲಿ ಹಲವು ದಿನಾಚರಣೆಗಳನ್ನು ರೂಪಿಸಿ ಪರಿಸರ ರಕ್ಷಣೆಗೆ ಮುಂದಾಗಿದೆ. ಹಲವಾರು ದಿನಾಂಕ ಗಳನ್ನು ನಿಗದಿಪಡಿಸಿ ಅಂದು ನಾವು ಮಾಡಬೇಕಾದ ಕೆಲಸಗಳ ಪಟ್ಟಿಯನ್ನೇ ನೀಡಿ ಅದರಂತೆ ನಡೆಯಲು ಕರೆನೀಡಿದೆ. ಪರಿಸರಕ್ಕೆ ಸಂಬಂಧಿಸಿದಂತೆ ಅವು ಯಾವುವೆಂದು ಈ ಕೃತಿಯಲ್ಲಿ ವಿಶದವಾಗಿ ತಿಳಿಸ ಲಾಗಿದೆ. ಅಂತಹ ಮಹತ್ವದ ದಿನಗಳಲ್ಲಿ ನಾವೇನು ಮಾಡಬಹುದು ಮತ್ತು ಯಾಕಾಗಿ ಅದನ್ನು ಮಾಡಬೇಕು ಎಂದು ತಿಳಿಸಿ ಅನೇಕ ವಿಚಾರಗಳಲ್ಲಿ ನಮ್ಮನ್ನು ಎಚ್ಚರಿಸುವ, ನಾವು ಓದಲೇಬೇಕಾದ ಕೃತಿಯಿದು. ಇಂಥ ದಿನಾಚರಣೆಗಳ ಬಗ್ಗೆ ತಿಳಿದುಕೊಂಡು ಪರಿಸರ ಸಂರಕ್ಷಿಸುವಲ್ಲಿ ನಾವೂ ಮುಂದಾಗುವಂತೆ ಪ್ರೇರೇಪಣೆ ನೀಡುವಲ್ಲಿ ಪುಸ್ತಕ ಯಶಸ್ವಿಯಾಗಿದೆ. ಅಂತಹ ಅಳಿಲು ಸೇವೆಗೆ ಮುಂದಾಗೋಣ.*

ಲೋಕ ತತ್ತ್ವಶಾಸ್ತ್ರ ಪ್ರವೇಶಿಕೆ – ೧

### ಆರಂಭಿಕ ಹಂತಗಳು

*ಡಾ॥ ದೇವಿಪ್ರಸಾದ್ ಚಟ್ಟೋಪಾಧ್ಯಾಯ, ಕನ್ನಡಕ್ಕೆ : ಡಾ॥ ಎನ್. ಗಾಯತ್ರಿ*

**ಪುಟ : ೧೪೮** **ಬೆಲೆ : ರೂ. ೧೦೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

*ತತ್ತ್ವಶಾಸ್ತ್ರದ ಆರಂಭಿಕ ಹಂತವೆಂದರೆ ಮನುಷ್ಯ ಬೌದ್ಧಿಕವಾಗಿ ವಿಕಾಸಗೊಂಡು ತನ್ನ ಸುತ್ತಲಿನ ಪ್ರಕೃತಿಯ ರಹಸ್ಯಗಳನ್ನು ಅರಿಯಲು ಪ್ರಯತ್ನಿಸಿದ ಸಮಯವೆನ್ನಬಹುದು. ಜಗತ್ತು ಎಂದರೇನು, ಇದನ್ನು ಸೃಷ್ಟಿಸಿದ್ದು ಯಾರು, ಗ್ರಹತಾರೆಗಳ ಸೋಜಿಗವೇನು, ಇದರ ಹಿಂದಿನ ಶಕ್ತಿ ಎಲ್ಲಿದೆ – ಮುಂತಾದ ಚಿಂತನೆಗಳು ಅಂದಿನ ದಾರ್ಶನಿಕರ ಅನುಭವದ ಹಿನ್ನೆಲೆಯಲ್ಲಿ ಎಲ್ಲ ಕಾಲದಲ್ಲಿ – ಎಲ್ಲ ದೇಶಗಳಲ್ಲೂ ನಡೆದಿದೆ. ಎಲ್ಲರ ದೃಷ್ಟಿಕೋನ ಒಂದೇ ರೀತಿಯಾಗಿದ್ದಿಲ್ಲ. ಇನ್ನೂ ಮುಖ್ಯ ಪ್ರಶ್ನೆಯೆಂದರೆ ಈ ಜಗತ್ತು ವಾಸ್ತವವೋ – ಭ್ರಮೆಯೋ ? ಭ್ರಮೆಯಾದರೆ ಸತ್ಯದ ಜಗತ್ತು ಎಲ್ಲಿದೆ ? ಇಂಥ ಚಿಂತನೆಗಳು ಕಾಡಿದಾಗ ಭೌತವಾದ ಮತ್ತು ಭಾವನಾವಾದಗಳೆಂಬ ಪ್ರಮುಖ ಎರಡು ವಿಚಾರಧಾರೆಗಳು ಜನ್ಮತಾಳಿದವು. ಮುಂದೆ ಬೆಳವಣಿಗೆ – ಪರಸ್ಪರ ಚರ್ಚೆ–ಗೊಂದಲಗಳು ತಲೆದೋರಿ ಜಗತ್ತಿನಾದ್ಯಂತ ಹಲವು ಶಾಖೋಪಶಾಖೆಗಳು ವಿಸ್ತರಿಸಿದವು. ಆರಂಭಿಕ ಹಂತವೆಂಬುದು ಇನ್ನೂ ಏನನ್ನೂ ನಿರ್ಧರಿಸಲಾಗದ ಅಪಕ್ವ ಸ್ಥಿತಿಯೆನ್ನಬಹುದು. ಆದರೆ ಅದರ ಮಹತ್ವವೇನೂ ಕಡಿಮೆಯದಲ್ಲ. ಇಂದಿನ ಎಲ್ಲ ತತ್ತ್ವಶಾಸ್ತ್ರದ ಮೂಲ ತಳಗಟ್ಟು ಎನ್ನಬಹುದು. ಇಂದು ಬೃಹದಾಕಾರಕ್ಕೆ ಬೆಳೆದು ನಿಂತಿರುವ ತತ್ತ್ವಶಾಸ್ತ್ರದ ಮೂಲದ ಹಂತಕ್ಕೆ ಹಿಂದಿರುಗಿ ಅದನ್ನು ಅರ್ಥೈಸಲು ಈ ಕೃತಿ ಸಹಕರಿಸುತ್ತದೆ. ಹಂತಹಂತವಾಗಿ ವಿಕಾಸಗೊಂಡಿರುವ ಬಗೆಯನ್ನೂ ಚರ್ಚಿಸುತ್ತದೆ. ತತ್ತ್ವಶಾಸ್ತ್ರವು ಮೊದಲು ಭೌತವಾದಿ ನೆಲೆಯಲ್ಲಿ ಅರ್ಥೈಸಲ್ಪಟ್ಟು ಮುಂದೆ ಭಾವನಾವಾದದತ್ತ ಹೊರಳಿದ್ದು ಈ ಕೃತಿಯಲ್ಲಿ ಉಲ್ಲೇಖಿಸಲಾಗಿದೆ. ತತ್ತ್ವಶಾಸ್ತ್ರದ ಉಗಮದತ್ತ ನಮ್ಮನ್ನು ಕರೆದೊಯ್ಯುವ ಪುಸ್ತಕ.*



### ಝೆನ್ ಮಹಾಯಾನ

*ಆರ್. ಡಿ. ಹೆಗಡೆ ಆಲ್ಮನೆ*

**ಪುಟ : ೧೨೪** **ಬೆಲೆ : ರೂ. ೯೫**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

*ಬೌದ್ಧಮತದ ಒಂದು ಶಾಖೆ ಝೆನ್ – ಇತ್ತೀಚೆಗೆ ಎಲ್ಲರನ್ನೂ ಆಕರ್ಷಿಸುತ್ತಿರುವ ಒಂದು ವಿಚಾರಧಾರೆ. ಬುದ್ಧಗುರುವಿನಿಂದ ಬೋಧಿಧರ್ಮನವರೆಗೆ ಸಾವಿರಾರು ವರ್ಷಗಳಿಂದ ಕ್ರಮಿಸಿ ಇನ್ನೂ ವಿಕಾಸಗೊಳ್ಳುತ್ತಲೇ ಇರುವ ಒಂದು ಸುದೀರ್ಘ ಪಯಣ ಝೆನ್‌ನ ಮಹಾಯಾನ. ಮಾತಿನ ಹಂಗಿಲ್ಲದ ಮೌನ ಸಂಭಾಷಣೆ ಇದರ ತತ್ವ. ನಮ್ಮಲ್ಲಿ ಮಾತು ಕಡಿಮೆ ಹೆಚ್ಚು ದುಡಿಮೆ ಎನ್ನುವಂತೆ. ಧರ್ಮವಿಲ್ಲದ ಧರ್ಮ – ಉಪದೇಶವಿಲ್ಲದ ಮೌನ ಎಂಬುದು ಇದರ ಮರ್ಮ. ಯಾವುದೇ ಪುರಾಣ ಶಾಸ್ತ್ರಗ್ರಂಥಗಳ ನಿರವಲಂಬನ ಇದರ ಹೆಚ್ಚುಗಾರಿಕೆ. ದ್ವಂದ್ವಾತೀತ – ಅಚಲ – ಉದ್ವೇಗರಹಿತ ಬುದ್ಧತತ್ವವನ್ನು ಝೆನ್ ಕಂಡುಕೊಂಡಿದೆ. ಭಾರತದಲ್ಲೇ ಹುಟ್ಟಿ ಬೆಳೆದರೂ ತವರನ್ನು ತೊರೆದು ಗಡಿದಾಟಿ ಇತರ ದೇಶಗಳಲ್ಲಿ ನೆಲೆ ಕಂಡುಕೊಂಡದ್ದು ಬೌದ್ಧಮತದ ಒಂದು ವಿಪರ್ಯಾಸ. ಇಂದು ಎಲ್ಲೆಡೆ ಝೆನ್ ಸುದ್ದಿ ಮಾಡಿದೆ. ಎಲ್ಲೆಲ್ಲೂ ಕೇಂದ್ರಗಳು ತಲೆಯೆತ್ತಿವೆ. ಉಪದೇಶವಿಲ್ಲದ ಮೌನ ದಾಟಿ ಸಾವಿರಾರು ಉಪನ್ಯಾಸಗಳು ಏರ್ಪಡುತ್ತವೆ. ಗ್ರಂಥಗಳ ನಿರವಲಂಬನ ಮೀರಿ ಅದರ ಬಗೆಗೇ ಅಸಂಖ್ಯ ಗ್ರಂಥಗಳೇ ಬಂದಿವೆ. ಒಂದು ಸರಕಾಗಿ ಮಾರ್ಪಡುವ ಅಪಾಯವನ್ನು ಝೆನ್ ಇಂದು ಎದುರಿಸುತ್ತಿದೆ. ಬುದ್ಧನ ಮುಖದ ಮೇಲಿನ ಪ್ರಸನ್ನತೆ – ಆನಂದವನ್ನು ನೆನಪಿಸುವ ಈ ಕೃತಿ ಝೆನ್ ನಡೆದುಬಂದ ದಾರಿಯನ್ನು ವಿವರವಾಗಿ ತಿಳಿಸುತ್ತದೆ.*

### ಚಪ್ಪಲಿಗಳು. ಆಯ್ದ ಕತೆಗಳು

*ನಾಡೋಜ ಡಾ॥ ಸಾರಾ ಅಬೂಬಕ್ಕರ್*

**ಪುಟ : ೨೦೬ + vi** **ಬೆಲೆ : ರೂ. ೧೭೫**

**ಚಂದ್ರಗಿರಿ ಪ್ರಕಾಶನ,** ೨–೨೧–೧೬೫೧/೨, ಸೂಕ್ಷ್ಮ ತರಂಗ ನಿಲಯ ರಸ್ತೆ, ಮಂಗಳೂರು – ೫೭೫ ೦೦೬



*ಕುಟುಂಬದ ಒಳಗಣ ಸ್ತ್ರೀ ಶೋಷಣೆಯನ್ನು ಪ್ರತಿಭಟಿಸುವ ಕತೆ–ಕಾದಂಬರಿ ರಚಿಸಿ ಸಮಾಜದ ಮುಂದೆ ಹಿಡಿಯುವಲ್ಲಿ ಡಾ॥ ಸಾರಾ ಅಬೂಬಕ್ಕರ್ ಸಿದ್ಧಹಸ್ತರು. ಸ್ತ್ರೀಯರ ಬಗೆಗಿನ ತಾತ್ಸಾರ ಪುರುಷರಲ್ಲಿ ಎಷ್ಟಿದೆಯೆಂದರೆ "ಹೆಂಗಸರನ್ನು ಚಪ್ಪಲಿಗಳಂತೆ ಬಳಸಿ ಮೂಲೆಯಲ್ಲಿಡಬೇಕು, ತಲೆಯ ಮೇಲಿಟ್ಟು ಮೆರೆಸಬಾರದು" ಎಂಬ ಗೃಹಸ್ಥರೊರ್ವರ ಸೊಕ್ಕಿನ ಮಾತು* ***ಚಪ್ಪಲಿಗಳು*** *ಕಥೆಗೆ ಮೂಲ ಪ್ರೇರಣೆ. ಸಂಕಲನದ ಇನ್ನಿತರ ಕಥೆಗಳೂ ಸಮಾಜದ ಕಪಟ ವ್ಯೂಹಗಳನ್ನು ಬಯಲಿಗೆಳೆಯುತ್ತವೆ. ಯುದ್ಧಗಳ ಅನಾಹುತಗಳನ್ನು ಕಣ್ಣಿಗೆ ಕಟ್ಟಿದಂತೆ ಬಣ್ಣಿಸುತ್ತವೆ. ಮುಸುಕಿನೊಳಗಡೆ ನಡೆವ ಅವ್ಯವಹಾರಗಳು ಇಲ್ಲಿ ಬಿಂಬಿತವಾಗಿವೆ. ಸಂಕಲನದ* ***ಸಾರಾಂಶ*** *ಎಂಬ ಕಥೆ ಎಷ್ಟು ದಾರುಣವೆಂದರೆ ಅಲ್ಲಿ ಉಲ್ಲೇಖವಾಗಿರುವ "... ಬಿತ್ತಿ ಬೆಳೆಯುವುದಕ್ಕೊಂದು ಹೊಲ, ಇನ್ನೊಂದು ಆಟದ ಮೈದಾನ..." ಎಂಬ ಮಾತು ಹೆಣ್ಣುಮಗಳ ಬಾಯಿಂದ ಬಂದಿದೆ. ಕಥೆಗಳಿಗಾಗಿ ಸಾರಾ ತಡಕಾಡುವುದಿಲ್ಲ. ಸಮಾಜದ ಒಂದೊಂದು ನಡೆಯನ್ನೂ ಕಿವಿಗಳ ಮೇಲೆ ಬಿದ್ದ ಹಲವು ಸಂಭಾಷಣೆಗಳನ್ನೂ ಕಣ್ಣ ಮುಂದೆ ನಡೆಯುತ್ತಿರುವ ವ್ಯವಹಾರಗಳನ್ನೂ ಜಾಗ್ರತೆಯಾಗಿ ಅವಲೋಕಿಸಿ ಕಥೆಗೆ ವಸ್ತುವನ್ನು ಆಯ್ಕೆ ಮಾಡುತ್ತಾರೆ. ಹಾಗಾಗಿ ಇಲ್ಲಿನ ಕಥೆಗಳು ಹಸಿಬಿಸಿಯಾಗಿ ಸತ್ಯವನ್ನೇ ಹೇಳುತ್ತಿವೆ. ನಾವು ಬದುಕುತ್ತಿರುವ ಪರಿಸರದ ಮೇಲೊಂದು ಪಕ್ಷಿನೋಟ.*

– **ಇಂದಿರಾಕುಮಾರಿ,** *ಯಶವಂತಪುರ, ಬೆಂಗಳೂರು – ೨೨*

ಎಸ್. ಸುರೇಂದ್ರ

ಮತಧರ್ಮೀಯ ಆಧಾರಿತ ರಾಷ್ಟ್ರೀಯತೆಯ ಕಲ್ಪನೆಯೇ ಮೂಲತಃ ಸಮಾಜದ ವಿರೋಧಿಯಾದುದು. ಬಹುಮುಖೀ ಸಂಸ್ಕೃತಿ, ಪರಮತ ಸಹಿಷ್ಣುತೆಯಂತಹ ಮೌಲ್ಯಗಳ ಭವ್ಯ ಪರಂಪರೆಯುಳ್ಳ ಭಾರತಕ್ಕಂತೂ ಅಂತಹ ಕಲ್ಪನೆ ಬಹಳ ಅಪಾಯಕಾರಿಯಾದುದು. ಜೊತೆಗೆ, ಇಂತಹ ಹುಸಿ ರಾಷ್ಟ್ರೀಯತೆಯ ಆರ್ಭಟಗಳಿಗೆ, ದಾಂಧಲೆಗಳಿಗೆ ಬಲಿಯಾಗುವ ಅಲ್ಪಸಂಖ್ಯಾತರ ಬದುಕು ನಿರ್ನಾಮವಾಗುವುದಂತೂ ಖಂಡಿತ. ಹಾಗಾಗುವುದು ಧರ್ಮಾಂಧ ದಾಂಧಲೆಕೋರರ ಗುರಿಗಳಲ್ಲಿ ಒಂದು. ರಾಷ್ಟ್ರದ ಎಲ್ಲ ಕೋಮಿನವರು, ಬಹುಸಂಖ್ಯಾತರು ಮತ್ತು ಅಲ್ಪಸಂಖ್ಯಾತರು, ವಿವಿಧ ಸಮುದಾಯದವರು ಸಾಮರಸ್ಯದಿಂದ ಕೂಡಿ ಬಾಳುವಂತಹ, ಇಡೀ ಸಮಾಜದ ಸರ್ವಾಂಗೀಣ ಪ್ರಗತಿಗಾಗಿ ದುಡಿಯುವಂತಹ ಸನ್ನಿವೇಶವನ್ನುಂಟುಮಾಡಲು ಶ್ರಮಿಸುವುದು ನಮ್ಮೆಲ್ಲರ ಜವಾಬ್ದಾರಿಯಾಗಿದೆ. ಮತಧರ್ಮೀಯ ರಾಷ್ಟ್ರೀಯತೆಯ ಕಲ್ಪನೆಯು ಇಂತಹ ಉದಾತ್ತ ಮೌಲ್ಯಗಳಿಗೆ, ನಮ್ಮ ಸಂವಿಧಾನದ ಮಹತ್ತರ ಆಶಯಗಳಿಗೆ ವಿರುದ್ಧವಾಗಿದೆ.

# ಗೋಡ್ಸೆಯೂ ದೇಶಭಕ್ತನೆಂದಾದರೆ...!

ಭಾರತೀಯ ಜನತಾ ಪಕ್ಷದ ಸಂಸತ್ ಸದಸ್ಯ ಸಾಕ್ಷಿ ಮಹಾರಾಜ್ ಮಹಾತ್ಮ ಗಾಂಧಿಯವರನ್ನು ಹತ್ಯೆಗೈದ ನಾಥೂರಾಮ್ ಗೋಡ್ಸೆಯನ್ನು, ಅವನೊಬ್ಬ "ದೇಶಭಕ್ತ" ಎಂದು ಘೋಷಿಸಿದ ಕೆಲವೇ ದಿನಗಳ ನಂತರ ಸಂಘಪರಿವಾರದ ಅವಿಭಾಜ್ಯ ಅಂಗವಾಗಿರುವ ಅಖಿಲ ಭಾರತೀಯ ಹಿಂದು ಮಹಾಸಭಾ ದೇಶದ ಉದ್ದಗಲಕ್ಕೂ ಸಾರ್ವಜನಿಕ ಸ್ಥಳಗಳಲ್ಲಿ ಆ ಹಂತಕನ ಪ್ರತಿಮೆಗಳನ್ನು ಸ್ಥಾಪಿಸಲು ಅನುಮತಿ ಕೋರಿ ಕೇಂದ್ರ ಸರ್ಕಾರಕ್ಕೆ ಮನವಿ ಪತ್ರ ಸಲ್ಲಿಸಿದೆ. ಗೋಡ್ಸೆ ದೇಶಭಕ್ತನಾದುದು ಇಂದು ನಿನ್ನೆಯಲ್ಲ. ಆ ಅಭಿಪ್ರಾಯ ಮುಂಚಿನಿಂದಲೂ ಹಿಂದೂ ಮಹಾಸಭಾ, ಆರೆಸ್ಸೆಸ್‌ನಂತಹ ಹಿಂದು ಕೋಮು ಸಂಘಟನೆಗಳ ಸದಸ್ಯರ ನರನಾಡಿಗಳಲ್ಲಿ ಹರಿಯುತ್ತಲೇ ಬಂದಿದೆ. ದೇಶಭಕ್ತ ಎಂದರೆ ಯಾರು, ಅಂತಹ ವ್ಯಕ್ತಿ ಎಂತಹ ಮೌಲ್ಯಗಳನ್ನು ಹೊಂದಿರಬೇಕು, ಎಂಬುದರ ಬಗ್ಗೆ ಈ ಸಂಘಟನೆಗಳು ದೇಶದ ಜನತೆಗೆ ವಿವರಿಸಿ ಹೇಳುವ ಅಗತ್ಯವಿದೆ.

ಈ ಕೋಮುವಾದಿಗಳಿಗೆ ಮೊದಲಿನಿಂದಲೂ ಗಾಂಧೀಜಿಯವರ ಮೇಲಿದ್ದ ಆರೋಪ, ಅವರು ಭಾರತದ ಮುನ್ನಡೆಗೆ ಹಿಂದು-ಮುಸ್ಲಿಮರ ನಡುವೆ ಸಾಮರಸ್ಯವಿರಬೇಕಾದುದು ಅತ್ಯಗತ್ಯ ಎಂದು ಬಲವಾಗಿ ನಂಬಿದ್ದವರು ಮತ್ತು ದೇಶದ ವಿಭಜನೆಗೆ ಅವರೇ ಮೂಲ ಕಾರಣ ಎಂಬುದು. ಇಂತಹ ಮಾನವ ವಿರೋಧಿ ಮನಸ್ಸುಳ್ಳ ಹಿಟ್ಲರ್ ಕುಡಿಗಳ ಸಂಖ್ಯೆಗೆ ಮಿತಿಯೇ ಇಲ್ಲ ಸಂಘಪರಿವಾರದ ಈ ಸಂಘಟನೆಗಳಲ್ಲಿ. ಅವುಗಳ ಸಿದ್ಧಾಂತವೇ ಅಂತಹುದು. ಈ ಮಾನವ ವಿರೋಧಿ ಸಿದ್ಧಾಂತವೇ ಗೋಡ್ಸೆಗೆ ಗಾಂಧಿಯನ್ನು ಕೊಲ್ಲಲು ಪ್ರೇರೇಪಿಸಿದ್ದು. "ದೇಶದ ಬುದ್ಧಿಜೀವಿಗಳ ನಡುವೆ ಜರುಗುವ ಹಿಂದುತ್ವ ಕುರಿತ ಚರ್ಚೆಗಳು, ವ್ಯಾಖ್ಯಾನಗಳಲ್ಲಿ ಗೋಡ್ಸೆ ನೀಡಿರುವ ಕೊಡುಗೆಗಳಿಗೆ ಪ್ರಮುಖ ಸ್ಥಾನ ಇರಬೇಕು" ಎಂದು ಹಿಂದೂ ಮಹಾಸಭಾದ ಅಧ್ಯಕ್ಷ ಚಂದ್ರಪ್ರಕಾಶ್ ಕೌಶಿಕ್ ಆಜ್ಞಾಪಿಸಿಬಿಟ್ಟಿದ್ದಾರೆ. ಅಷ್ಟೇ ಅಲ್ಲ, "ಗಾಂಧಿ ಹತ್ಯೆಗೆ ಮುನ್ನ ಜರುಗಿದ ಎಲ್ಲ ಘಟನೆಗಳ ಕುರಿತು ಸವಿವರವಾದ ತನಿಖೆಯಾಗಬೇಕಾಗಿದೆ. ಏಕೆಂದರೆ, ಅವರ ಹತ್ಯೆಗೆ ಕಾರಣವಾಗಿರುವ ಸತ್ಯಾಂಶವು ದೇಶದ ಜನತೆಗೆ ತಿಳಿಯುವಂತಾಗಬೇಕು. ಅಂತಹ ನಿಷ್ಪಕ್ಷಪಾತವಾದ ತನಿಖೆಯಿಂದ ಮಾತ್ರ ಗೋಡ್ಸೆ ಸ್ವಇಚ್ಛೆಯಿಂದ ಗಾಂಧಿಯವರನ್ನು ಕೊಲ್ಲಲಿಲ್ಲ. ಅಂದಿನ ಸನ್ನಿವೇಶದಲ್ಲಿದ್ದ ಕೆಲವು ಸಂಗತಿಗಳು ಆತನನ್ನು ಆ ಕೃತ್ಯವನ್ನೆಸಗಲು ಪ್ರೇರೇಪಿಸಿದವು" ಎನ್ನುತ್ತಾರೆ ಕೌಶಿಕ್. ಪರಿಣಾಮವಾಗಿ ಈ ಗೋಡ್ಸೆ ಕೇಂದ್ರಿತ ವಿವಾದ ಇದೀಗ ಉತ್ತರಪ್ರದೇಶದ ಮೀರತ್‌ನಿಂದ ತಮಿಳುನಾಡಿನವರೆಗೆ ಸಾಗಿಬಂದಿದೆ. ತಮಿಳುನಾಡಿನ ಹಿಂದೂ ಮಹಾಸಭಾ ಘಟಕದ ಎರಡು ಗುಂಪುಗಳು ಗೋಡ್ಸೆ ಪ್ರತಿಮೆಯನ್ನು ೧೩ ಜಿಲ್ಲೆಗಳಲ್ಲಿ ಸ್ಥಾಪಿಸುವುದಾಗಿ ಘೋಷಿಸಿವೆ.

ಗೋಡ್ಸೆ ಪ್ರತಿಮೆಯನ್ನು ಸ್ಥಾಪಿಸಬೇಕೆಂಬ ಈ ಕರೆ ಯಾವುದೋ ಕೆಲಸಕ್ಕೆ ಬಾರದ ಮೂಲಗಳಿಂದಲೋ, ಸಣ್ಣಪುಟ್ಟ ಸಂಘಟನೆಗಳಿಂದಲೊ ಬಂದಿದೆ ಎಂದು ತಳ್ಳಿಹಾಕುವಂಥದ್ದಲ್ಲ. ಈ ಕರೆ ಭಾರತದ ಇಡೀ



ರಾಜ್ಯವ್ಯವಸ್ಥೆಯನ್ನು, ರಾಜಕಾರಣವನ್ನಷ್ಟೇ ಅಲ್ಲದೆ ನಮ್ಮ ರಾಷ್ಟ್ರದ ಅಸ್ತಿತ್ವಕ್ಕೆ ಆಧಾರವಾಗಿರುವ ಮತಧರ್ಮ ನಿರಪೇಕ್ಷತೆ ಮತ್ತು ಬಹುಮುಖಿ ಸಂಸ್ಕೃತಿಯನ್ನೊಳಗೊಂಡ ಪ್ರಭುತ್ವವನ್ನು ಪುನರ್‌ರಚಿಸಲು ಹೂಡಿರುವ ಕುತಂತ್ರವಷ್ಟೆ ಎಂಬುದನ್ನು ನಾವು ಮನಗಾಣಬೇಕು.

ಭಾರತವು ಮೂಲಭೂತವಾಗಿ ಹಿಂದೂ ರಾಷ್ಟ್ರ ಮತ್ತು ಇಂದಿನ ದಿನಗಳಲ್ಲಿ ಹಿಂದುಗಳು ಹಾಗೂ ಹಿಂದುತ್ವ ಅಪಾಯದಲ್ಲಿ ಸಿಲುಕಿಕೊಂಡಿರುವ ಪರಿಸ್ಥಿತಿ ಉಂಟಾಗಿದೆ ಎಂಬ ಆತಂಕವನ್ನು ಜನಸಾಮಾನ್ಯರಲ್ಲಿ ಹುಟ್ಟುಹಾಕುವುದೇ ಹಿಂದೂ ಮಹಾಸಭಾ ಗೋಡ್ಸೆ ಬಗ್ಗೆ ಹರಿಬಿಡುವ ವ್ಯಾಖ್ಯಾನದ, ನಿರೂಪಣೆಯ ಉದ್ದೇಶ. ಬಹುಸಂಖ್ಯಾತರ ಪ್ರಜ್ಞೆಯನ್ನು ಬಡಿದೆಬ್ಬಿಸಿ ಅವರನ್ನು ಅಲ್ಪಸಂಖ್ಯಾತರ ವಿರುದ್ಧ ಎತ್ತಿಕಟ್ಟುವ ಹುನ್ನಾರವೇ ಆ ಗಾಂಧಿ ಹಂತಕನಿಗೆ ದೇಶಭಕ್ತನೆಂಬ ಬಿರುದು ನೀಡುವುದಕ್ಕೆ ಪ್ರೇರಣೆ. ಈ ಮೂಲಕ ಇತಿಹಾಸವನ್ನು ಪುನರ್‌ರಚಿಸುವ ಪ್ರಯತ್ನಗಳನ್ನು ನಡೆಸುತ್ತಲೇ ಶತಮಾನಗಳ ಹಿಂದೆ ಮುಸ್ಲಿಮ್ ರಾಜರುಗಳು ಎಸಗಿರ ಬಹುದಾದ ಕೃತ್ಯಗಳ ನೆಪದಲ್ಲಿ ಅಲ್ಪಸಂಖ್ಯಾತರ ವಿರುದ್ಧ ಸೇಡುತೀರಿಸಿಕೊಳ್ಳುವ ಸಂದರ್ಭ ಬಂದಿದೆ ಎಂದು ದೇಶದೆಲ್ಲೆಡೆ ಮತಾಂಧ ಶಕ್ತಿಗಳಿಗೆ ಕುಮ್ಮಕ್ಕು ನೀಡುವ, ಕೋಮುಗಲಭೆಗಳಿಗೆ ಎಡೆಮಾಡಿಕೊಡುವ, ಪಿತೂರಿ ಇದು. ಇಲ್ಲಿ ತರ್ಕಕ್ಕಾಗಲಿ, ವಿವೇಚನಾಯುತ ಸಂವಾದ ಕ್ಕಾಗಲಿ ಅವಕಾಶವೇ ಇಲ್ಲ. ಆಧಾರಯುತ ಐತಿಹಾಸಿಕ ಕೃತಿಗಳಿಗಂತೂ ಮೂರು ಕಾಸಿನ ಬೆಲೆ ಇಲ್ಲ.

ಹಿಂದುತ್ವಕ್ಕೆ ಸೈದ್ಧಾಂತಿಕ ಅಡಿಪಾಯ ಹಾಕಿದ ವಿನಾಯಕ್ ದಾಮೋದರ್ ಸಾವರ್ಕರ್ ತಮ್ಮ ಚಿಂತನೆ ಗಳಿಗನುಸಾರವಾಗಿ ಇತಿಹಾಸವನ್ನು ತಿರುಚುವ, ಪುನರ್‌ರಚಿಸುವ ಕ್ರಿಯೆಯಲ್ಲಿ ಸಿದ್ಧಹಸ್ತರು. ೧೯೨೨ರಲ್ಲಿ ರಚಿಸಿದ ತಮ್ಮ 'ಹಿಂದುತ್ವ : ಹಿಂದು ಎಂದರೆ ಯಾರು ?' ಎಂಬ ಪ್ರಬಂಧದಲ್ಲಿ, "ಹಿಂದು ರಾಷ್ಟ್ರದ ಕಲ್ಪನೆಯು ನಮ್ಮೀ ಮಣ್ಣಿನಲ್ಲಿ, ನಮ್ಮ ರಕ್ತದಲ್ಲಿ, ನಮ್ಮ ಸಂಸ್ಕೃತಿಯಲ್ಲಿ ಆಳವಾಗಿ ಬೇರೂರಿದೆ ಎಂದು ಗಟ್ಟಿ ಧ್ವನಿಯಲ್ಲಿ ಹೇಳಿದ್ದಾರೆ. ಅವರ ಪ್ರಕಾರ ಹಿಂದು ಅಸ್ಮಿತೆ ಎಂಬುದು ಒಳಗೊಳ್ಳುವ ಹಾಗೂ ಹೊರಹಾಕುವ ಎರಡೂ ಕ್ರಿಯೆಗಳನ್ನು ಪ್ರತಿನಿಧಿಸುತ್ತದೆ." "ಜೈನರು, ಬೌದ್ಧರು ಮತ್ತು ಸಿಖ್ಖರು ಹಿಂದುತ್ವ ಪರಂಪರೆಯ ಭಾಗವೇ ಆಗಿದ್ದಾರೆ," ಎನ್ನುತ್ತಾರೆ ಸಾವರ್ಕರ್. ಅದೇ ವೇಳೆ ಇಸ್ಲಾಂ ಮತ್ತು ಕ್ರೈಸ್ತಧರ್ಮ ಎರಡೂ ವಿದೇಶಿ ಮೂಲದವು ಎಂದು ಎಚ್ಚರಿಸಲು ಮರೆಯುವುದಿಲ್ಲ. ೧೯೨೫ರಲ್ಲಿ ಬರೆದ 'ಹಿಂದು ಪಡ್ ಪಡ್‌ಶಾಹಿ' ಎಂಬ ಮರಾಠಿ ಭಾಷೆಯ ಲೇಖನದಲ್ಲಿ ಹಿಂದುಗಳಿಗೆ ಸ್ವಯಮಾಡಳಿತ ಬೇಕು ಎಂದು ಪ್ರತಿಪಾದಿಸುತ್ತ ೧೭ನೆಯ ಶತಮಾನದಲ್ಲಿ ಶಿವಾಜಿಯು ಮುಸ್ಲಿಮ್ ದೊರೆಗಳ ವಿರುದ್ಧ ಹಲವಾರು ಯುದ್ಧಗಳಲ್ಲಿ ತೊಡಗಿದ್ದ ಎಂಬುದನ್ನು ಉಲ್ಲೇಖಿಸುತ್ತಾರೆ.

ಅಂದಿನ ದಿನಗಳಲ್ಲಿ ಒಂದಲ್ಲ ಒಂದು ಯುದ್ಧಗಳು ಜರುಗುತ್ತಲೇ ಇದ್ದುವು ಎಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಅವು ಸ್ಥಳೀಯವಾಗಿ ವಿವಿಧ ರಾಜರುಗಳ ನಡುವೆ, ವಿವಿಧ ಪ್ರಾಂತಗಳ ನಡುವೆ ಆಗಾಗ ಜರುಗುತ್ತಿದ್ದ ಯುದ್ಧಗಳಷ್ಟೆ. ಎಷ್ಟೋ ಯುದ್ಧಗಳು ಹಿಂದು ರಾಜರುಗಳ ನಡುವೆಯೇ ಜರುಗುತ್ತಿದ್ದವೆಂಬ ವಾಸ್ತವಾಂಶ ಇತಿಹಾಸದ ಪುಟಗಳನ್ನು ತಿರುವಿಹಾಕಿದರೆ ತಿಳಿಯುತ್ತದೆ. ಅಂತಹ ಯುದ್ಧಗಳಿಗೆ ಕೋಮು ಬಣ್ಣ ಬಳಿಯುವುದರಲ್ಲಿ ಅರ್ಥವಿಲ್ಲ. ಸಾವರ್ಕರ್ ಅವನ್ನು ವಿದೇಶಿ ಆಕ್ರಮಣಕಾರರ ವಿರುದ್ಧ ಸಂಭವಿಸುತ್ತಿದ್ದ ರಾಷ್ಟ್ರೀಯ ಹೋರಾಟಗಳೆಂದು ಬಣ್ಣಿಸುವುದು ಎಷ್ಟು ಸರಿ ? ಹಿಂದೂ ರಾಷ್ಟ್ರೀಯತೆ ಎಂಬ ಪರಿಕಲ್ಪನೆ ಒಂದು ನಿರ್ದಿಷ್ಟ ಭೂಪ್ರದೇಶದ ಜನಾಂಗೀಯ ಮತ್ತು ಸಾಂಸ್ಕೃತಿಕ ಅಸ್ತಿತ್ವವನ್ನು ಒಳಗೊಂಡಿರುವಂಥದ್ದು, ಎನ್ನುತ್ತಾರೆ ಸಾವರ್ಕರ್. ಅನಂತರ ಬರೆದ ಕೆಲವು ಲೇಖನಗಳಲ್ಲಿ ಮುಸ್ಲಿಮರನ್ನು ಕುರಿತಂತೆ, "ಅವರು ಬೇರೆಯದೇ ಆದ ಅಸ್ಮಿತೆಯುಳ್ಳವರು. ಹಿಂದುತ್ವಕ್ಕೆ ಅವರಿಂದ ಯಾವತ್ತಿಗೂ ಅಪಾಯವಿದ್ದೇ ಇರುತ್ತದೆ" ಎಂಬ ಮಾತನ್ನು ಪದೇ ಪದೇ ಪ್ರಸ್ತಾಪಿಸುತ್ತಾರೆ.

ಸಾವರ್ಕರ್ ಅವರ ಸಿದ್ಧಾಂತದಿಂದ ಸ್ಫೂರ್ತಿ ಪಡೆದಿರುವ ಹಿಂದುತ್ವವಾದಿ ಪ್ರತಿಪಾದಕರು ಕಳೆದೆರಡು ದಶಕಗಳಿಂದಲೂ ಎಡೆಬಿಡದೆ ತಮ್ಮ ಮೂಗಿನ ನೇರಕ್ಕನುಗುಣವಾಗಿ ನಮ್ಮ ರಾಷ್ಟ್ರೀಯ ಚಳವಳಿಯ ಇತಿಹಾಸ ಮತ್ತು ಪರಂಪರೆಯನ್ನು ಅರ್ಥೈಸುತ್ತಲೇ ಬಂದಿದ್ದಾರೆ. ಇವರ ಕೋಮುವಾದಿ ವ್ಯಾಖ್ಯಾನಗಳಿಗೆ ಸರ್ದಾರ್ ಪಟೇಲರಂತಹ ರಾಷ್ಟ್ರೀಯ ನಾಯಕರೂ ಬಲಿಪಶುಗಳಾಗಿಬಿಟ್ಟಿದ್ದಾರೆ. ವಿಪರ್ಯಾಸವೆಂದರೆ ಈ ಜನ ಗಾಂಧೀಜಿಯವರನ್ನೂ ಬಿಟ್ಟಿಲ್ಲ. ಇವರ ದೃಷ್ಟಿಯಲ್ಲಿ ಅವರೊಬ್ಬ ಹಿಂದೂಧರ್ಮದ ಚಿಂತಕರು, ರಾಮರಾಜ್ಯದ ಕನಸು ಕಂಡವರು.

ಇಲ್ಲಿ ಗಾಂಧಿಯವರನ್ನು ಕುರಿತಂತೆ ಒಂದೆರಡು ಅಂಶಗಳನ್ನು ಸ್ಪಷ್ಟಪಡಿಸುವ ಅಗತ್ಯವಿದೆ. ಅವರೂ ಸಹ ಬ್ರಿಟಿಷರ ವಿರುದ್ಧದ ಚಳುವಳಿಗಳಲ್ಲಿ ಹಿಂದುಗಳನ್ನು ತೊಡಗಿಸಲು ಪೌರಾಣಿಕ ವ್ಯಕ್ತಿಗಳ ಹೆಸರನ್ನು ಬಳಸಿ ಕೊಂಡದ್ದು ಚಾರಿತ್ರಿಕ ಸತ್ಯ. ಶ್ರೀರಾಮ ಅವರಿಗೆ ಪೂಜ್ಯನೇ. ವರ್ಣವ್ಯವಸ್ಥೆ, ಆಧುನಿಕತೆ, ಔದ್ಯೋಗೀಕರಣ ಇವುಗಳ ಕುರಿತು ತಮ್ಮದೇ ಆದ ವಿಚಿತ್ರ ನಿಲುವುಗಳನ್ನು ಹೊಂದಿದ್ದರು ಗಾಂಧೀಜಿ. ಆ ಮಾತು ಬೇರೆ. ಅವರ ಬದುಕಿನ ಶೈಲಿ, ಸ್ವಾತಂತ್ರ್ಯ ಹೋರಾಟಕ್ಕೆ ನೀಡಿದ ಸ್ಫೂರ್ತಿ, ಮಾರ್ಗದರ್ಶನ ಪ್ರಶ್ನಾತೀತವಾದುವು. ಅವರ ರಾಮ ಸಂಘಪರಿವಾರದ ರಾಮನಲ್ಲ. ಕಡೆಯ ಉಸಿರಿರುವವರೆಗೂ ಹಿಂದು-ಮುಸ್ಲಿಮರ ನಡುವಣ ಸಾಮರಸ್ಯದಲ್ಲಿ ಭಾರತದ ಭವಿಷ್ಯವಿದೆ ಎಂದು ನಂಬಿ ಆ ಆದರ್ಶದ ಈಡೇರಿಕೆಗಾಗಿ ಬದುಕಿ ಬಾಳಿದರು, ಕಡೆಗೆ ಜೀವತೆತ್ತದ್ದೂ ಅದೇ ಕಾರಣಕ್ಕೆ.

ವರ್ಣವ್ಯವಸ್ಥೆಯನ್ನು ಖಂಡಿಸುತ್ತ ಎಲ್ಲ ಕೆಳಸ್ತರದ ಜನಸಮುದಾಯಗಳ ಪರವಾಗಿ ನಿಂತು ಪುರೋಹಿತಶಾಹಿಗಳನ್ನು ಖಂಡಿಸುತ್ತ ಸನಾತನ ಹಿಂದೂಧರ್ಮಕ್ಕೆ ಹೊಸ ಅರ್ಥ ನೀಡಲು ಶ್ರಮಿಸಿದ, ಬಹುಮುಖೀ ಸಂಸ್ಕೃತಿಯಲ್ಲಿ ಏಕತೆಯನ್ನು ಬೋಧಿಸಿದ ಸ್ವಾಮಿ ವಿವೇಕಾನಂದರು ಮತ್ತು ಮಾರ್ಕ್ಸ್‌ವಾದದಿಂದ ಪ್ರೇರಿತನಾಗಿ ಸಶಸ್ತ್ರ ಹೋರಾಟದಿಂದ ಮಾತ್ರ ಸ್ವಾತಂತ್ರ್ಯ ಗಳಿಸಲು ಸಾಧ್ಯ ಎಂದು ನಂಬಿ ನೇಣುಗಂಬವನ್ನೇರಿ ಹುತಾತ್ಮನಾದ ಕ್ರಾಂತಿಕಾರಿ ಭಗತ್ ಸಿಂಗ್ ಅಂಥವರ ಭಾವಚಿತ್ರಗಳನ್ನು ಅಖಿಲ ಭಾರತೀಯ ವಿದ್ಯಾರ್ಥಿ ಪರಿಷತ್, ವಿಶ್ವ ಹಿಂದು ಪರಿಷತ್ ಮುಂತಾದ ಸಂಘಪರಿವಾರದ ಸಂಘಟನೆಗಳು ಇವರನ್ನು ಹೈಜಾಕ್ ಮಾಡಿ ತಮ್ಮ ಫ್ಲೆಕ್ಸ್ ಬ್ಯಾನರುಗಳಲ್ಲಿ ಬಳಸಿಕೊಳ್ಳುತ್ತಿರುವುದು ನಿಜಕ್ಕೂ ಒಂದು ದುರಂತ.

ಇನ್ನು, ನಮ್ಮೀ ಭಾರತದಲ್ಲಿ ದೇವದೇವತೆಗಳನ್ನು ರಾಜಕೀಯ ಉದ್ದೇಶಕ್ಕಾಗಿ ಬಳಸಿಕೊಳ್ಳುತ್ತಿರುವುದಕ್ಕಂತೂ ಒಂದು ದೀರ್ಘ ಇತಿಹಾಸವೇ ಇದೆ. ಸ್ವಾತಂತ್ರ್ಯ ಸಮರವು ತೀವ್ರ ಸ್ವರೂಪವನ್ನು ಪಡೆದುಕೊಳ್ಳುತ್ತಿದ್ದ ಹೊತ್ತಿನಲ್ಲೇ ವಿವಿಧ ಸಮುದಾಯಗಳು ತಮ್ಮ ರಾಜಕೀಯ ಗುರಿ ಸಾಧನೆಗಾಗಿ ಮತಧರ್ಮ ಮತ್ತು ಅದನ್ನು ಪ್ರತಿನಿಧಿಸುವ ಸಂಕೇತಗಳನ್ನು ಬಳಸಿಕೊಳ್ಳುವುದು ಸರ್ವೇಸಾಮಾನ್ಯ ವಾಯಿತು. ಗಾಂಧೀಜಿಯವರೂ ಇದೇ ತಂತ್ರಕ್ಕೆ ಮೊರೆಹೋದದ್ದು ಎಲ್ಲರಿಗೂ ತಿಳಿದ ಸಂಗತಿಯೇ. ಆದರೆ ಅವರು ಹಾಗೆ ಮಾಡಿದ್ದು ಯಾವುದೇ ಸಂಕುಚಿತ ಕೋಮುವಾದಿ ದೃಷ್ಟಿಕೋನದಿಂದಲ್ಲ. ಭಾರತದ ಜನತೆ ಜಾತಿಭೇದ, ಕೋಮವಾದಿ ಭಾವನೆಗಳನ್ನು ಬದಿಗಿಟ್ಟು ವಸಾಹತುಶಾಹಿ ವಿರುದ್ಧದ ಹೋರಾಟದಲ್ಲಿ ಒಮ್ಮನಸ್ಸಿನಿಂದ ಭಾಗವಹಿಸುವಂತಾದುದರಲ್ಲಿ ಗಾಂಧೀಜಿಯವರ ಕೊಡುಗೆ ಅನನ್ಯ. ಕಡುಬಡತನ ಮತ್ತು ಅನಕ್ಷರತೆಯಿಂದ ಪೀಡಿತರಾಗಿರುವ ಜನರ ಮೇಲೆ ಇಂತಹ ಪ್ರಚಾರ ವಿಧಾನಗಳು ರಾಜಕೀಯ ದೃಷ್ಟಿಯಲ್ಲಿ ಬಹಳ ಪರಿಣಾಮಕಾರಿ ಯಾಗಿರುತ್ತವೆ. ಈ ಮೂಲಕ ಬಹುಸಂಖ್ಯಾತ ಹಿಂದುಗಳನ್ನು ಹೋರಾಟದಲ್ಲಿ



## ಸಂಪ್ರದಾಯ

ಅಜ್ಜ ನೆಟ್ಟಾಲ
ಮರಕೆ
ಜೋತು ಬೀಳ
– ಬಾರದೆಂದು
ನಾನೀಗ –
ಅಜ್ಜಿಯ
ತಾಳೆಮರಕೆ
ಸೆರಗು ಸಿಕ್ಕಿಸಿಕೊಂಡೆ !

**ಶೋಭಾ ಪ್ರಮೋದ್**
ಮಾಣ್‌ಗಾಂವ, ರಾಯಗಢ, ಮಹಾರಾಷ್ಟ್ರ

ತೊಡಗಿಸಲು ಸಾಧ್ಯವಾಯಿತೆಂಬುದು ನಿಜವೇ. ಇದೇ ತಂತ್ರದಿಂದಾಗಿ ಬಹುತೇಕ ಅಲ್ಪಸಂಖ್ಯಾತ ಮುಸ್ಲಿಮ್ ಜನವಿಭಾಗಗಳು ಈ ಪ್ರಕ್ರಿಯೆಯಿಂದ ದೂರ ಉಳಿಯಲು ಕಾರಣವಾದದ್ದು ಸಹಜವೇ. ಆದರೂ ರಾಷ್ಟ್ರೀಯತಾ ಭಾವನೆ ಹೊಂದಿದ್ದ, ಇದು ಭಾರತೀಯರೆಲ್ಲರ ಹೋರಾಟ ಎಂಬ ಅಭಿಪ್ರಾಯ ಹೊಂದಿದ್ದ ಪ್ರಜ್ಞಾವಂತ ಮುಸ್ಲಿಮರು ವಸಾಹತುಶಾಹಿ ವಿರುದ್ಧದ ಸಮರಕ್ಕೆ ಮಹತ್ವವಾದ ಕೊಡುಗೆ ನೀಡಿದ್ದಾರೆ, ನಾಯಕತ್ವ ವಹಿಸಿದ್ದಾರೆ ಎಂಬ ವಾಸ್ತವಾಂಶವನ್ನು ಮರೆಯಲಾಗದು. ಆದರೆ ಹಿಂದೂರಾಷ್ಟ್ರದ ನಿರ್ಮಾಣದ ಗುರಿ ಹೊಂದಿರುವ ಬಿಜೆಪಿಯಂತಹ ಪಕ್ಷ ಮತ್ತು ಅದರ ಹಿಂದಿರುವ ಸಂಘಪರಿವಾರದ ಸಂಘಟನೆಗಳು ದೇವರ ಹೆಸರುಗಳನ್ನು ಸಂಕೇತವನ್ನಾಗಿಟ್ಟುಕೊಂಡು ತಮ್ಮ ಸಂಕುಚಿತ ರಾಜಕೀಯ ಉದ್ದೇಶಗಳ ಸಾಧನೆಗಾಗಿ ಸಮಾಜವಿರೋಧಿ ಹೋರಾಟಗಳನ್ನು ಸಂಘಟಿಸುತ್ತಲೇ ಇದ್ದಾರೆ. ಅಯೋಧ್ಯೆಯ ರಾಮಜನ್ಮಭೂಮಿ ಚಳುವಳಿ ಇದಕ್ಕೊಂದು ಇತ್ತೀಚಿನ ಉದಾಹರಣೆ.

ರಾಷ್ಟ್ರೀಯತೆಯ ಸೋಗಿನಲ್ಲಿ ಮತಧರ್ಮವನ್ನು ದುರುಪಯೋಗಪಡಿಸಿ ಕೊಳ್ಳುವುದರ ವಿರುದ್ಧ ದೃಢವಾದ ಮತ್ತು ತತ್ವಬದ್ಧ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದರು ರವೀಂದ್ರನಾಥ ಟಾಗೂರರು. ಅವರ 'ಘರೆ ಬೈರೆ' ಎಂಬ ಕಾದಂಬರಿಯಲ್ಲಿ ವಿಮರ್ಶಾರಹಿತ ಕುರುಡು ರಾಷ್ಟ್ರೀಯತೆಗೆ ಅತಿಯಾದ ಪ್ರಾಮುಖ್ಯತೆ ನೀಡಿ ಜನಸಾಮಾನ್ಯರನ್ನು ರೊಚ್ಚಿಗೆಬ್ಬಿಸಿದರೆ, ಅದು ಹೇಗೆ ಸಮಾಜದಲ್ಲಿ ವ್ಯಾಪಕ ಹಿಂಸೆ ಮತ್ತು ಸಾಮೂಹಿಕ ಹತ್ಯೆಗಳಿಗೆ ಎಡೆಮಾಡಿಕೊಡುತ್ತದೆ ಎಂಬುದನ್ನು ಬಹಳ ಆತಂಕದಿಂದ ನಿರೂಪಿಸಿದ್ದಾರೆ. ಆ ಕಾದಂಬರಿಯಲ್ಲಿ ಮಾತ್ರವಲ್ಲ, ಸಾರ್ವಜನಿಕ ಚರ್ಚೆಗಳಲ್ಲಿಯೂ ರಾಜಕೀಯ ಉದ್ದೇಶಗಳಿಗಾಗಿ ಮತಧಾರ್ಮಿಕ ಸಂಕೇತಗಳನ್ನು ಬಳಸುವುದರ ವಿರುದ್ಧ ಹಲವಾರು ಬಾರಿ ತಮ್ಮ ನಿಲುವನ್ನು ಸ್ಪಷ್ಟಪಡಿಸಿದ್ದಾರೆ.

ಮತಧರ್ಮೀಯ ಆಧಾರಿತ ರಾಷ್ಟ್ರೀಯತೆಯ ಕಲ್ಪನೆಯೇ ಮೂಲತಃ ಸಮಾಜದ ವಿರೋಧಿಯಾದುದು. ಬಹುಮುಖೀ ಸಂಸ್ಕೃತಿ, ಪರಮತ ಸಹಿಷ್ಣುತೆಯಂತಹ ಮೌಲ್ಯಗಳ ಭವ್ಯ ಪರಂಪರೆಯುಳ್ಳ ಭಾರತಕ್ಕಂತೂ ಅಂತಹ ಕಲ್ಪನೆ ಬಹಳ ಅಪಾಯಕಾರಿಯಾದುದು. ಜೊತೆಗೆ, ಇಂತಹ ಹುಸಿ ರಾಷ್ಟ್ರೀಯತೆಯ ಆರ್ಭಟಗಳಿಗೆ, ದಾಂಧಲೆಗಳಿಗೆ ಬಲಿಯಾಗುವ ಅಲ್ಪಸಂಖ್ಯಾತರ ಬದುಕು ನಿರ್ನಾಮವಾಗುವುದಂತೂ ಖಂಡಿತ. ಹಾಗಾಗುವುದು ಧರ್ಮಾಂಧ ದಾಂಧಲೆಕೋರರ ಗುರಿಗಳಲ್ಲಿ ಒಂದು. ರಾಷ್ಟ್ರದ ಎಲ್ಲ ಕೋಮಿನವರು, ಬಹುಸಂಖ್ಯಾತರು ಮತ್ತು ಅಲ್ಪಸಂಖ್ಯಾತರು, ವಿವಿಧ ಸಮುದಾಯದವರು ಸಾಮರಸ್ಯದಿಂದ ಕೂಡಿ ಬಾಳುವಂತಹ, ಇಡೀ ಸಮಾಜದ ಸರ್ವಾಂಗೀಣ ಪ್ರಗತಿಗಾಗಿ ದುಡಿಯುವಂತಹ ಸನ್ನಿವೇಶವನ್ನುಂಟುಮಾಡಲು ಶ್ರಮಿಸುವುದು ನಮ್ಮೆಲ್ಲರ ಜವಾಬ್ದಾರಿಯಾಗಿದೆ. ಮತಧರ್ಮೀಯ ರಾಷ್ಟ್ರೀಯತೆಯ ಕಲ್ಪನೆಯು ಇಂತಹ ಉದಾತ್ತ ಮೌಲ್ಯಗಳಿಗೆ, ನಮ್ಮ ಸಂವಿಧಾನದ ಮಹತ್ತರ ಆಶಯಗಳಿಗೆ ವಿರುದ್ಧವಾಗಿದೆ.

ಗಲಭೆಗಳನ್ನುಂಟುಮಾಡಿ, ಹಿಂಸಾತ್ಮಕ ಕೃತ್ಯಗಳಲ್ಲಿ ತೊಡಗುವುದು, ಚರ್ಚು, ಮಸೀದಿಗಳನ್ನು ಧ್ವಂಸಮಾಡುವುದು, 'ಘರ್ ವಾಪಸಿ' ಮತ್ತು 'ಲವ್ ಜಿಹಾದ್' ನಂತಹ ದಾಂಧಲೆಗಳು, ಗೋಮಾಂಸ ಸೇವನೆಗೆ ನಿಷೇಧ, ಪಠ್ಯಪುಸ್ತಕಗಳ ಪುನರ್‌ರಚನೆ, ಆಧಾರಪೂರ್ವಕವಾಗಿ ರಚಿಸಿರುವ ಇತಿಹಾಸ ಕೃತಿಗಳಿಗೆ ಕತ್ತರಿ ಹಾಕುವುದು, ಪ್ರಗತಿಪರ ಮತ್ತು ವೈಚಾರಿಕ ಸಾಹಿತ್ಯ ಕೃತಿಗಳನ್ನು ನಿಷೇಧಿಸುವುದು, ದೇಶಕ್ಕಾಗಿ ನಿಷ್ಠೆಯಿಂದ (ಧರ್ಮನಿರಪೇಕ್ಷ ನೀತಿಗಳನ್ನು ಮೈಗೂಡಿಸಿಕೊಂಡು) ದುಡಿದ ನೇತಾರರನ್ನು ತಮ್ಮವರೇ ಎಂದು ಘೋಷಿಸಿಕೊಳ್ಳುವುದು, ಇಂತಹ ಕೃತ್ಯಗಳು ಮುಂದೊಂದು ದಿನ "ಹಿಂದು ರಾಷ್ಟ್ರವನ್ನು" ಸ್ಥಾಪಿಸಬೇಕೆಂದಿರುವ ತಮ್ಮ ಮಹದಾಶಯವನ್ನು ಕಾರ್ಯಗತಗೊಳಿಸಲು ಹಿಂದುತ್ವವಾದಿ ಸಂಘಟನೆಗಳು ನಿರ್ಮಿಸುತ್ತಿರುವ ಬುನಾದಿಯಷ್ಟೇ ಹೊರತು ಬೇರೇನೂ ಅಲ್ಲ.

ಮತಧರ್ಮ ಮತ್ತು ರಾಷ್ಟ್ರೀಯತೆಗಳ ನಡುವಣ ಈ ಬಗೆಯ ನಂಟು ನಮ್ಮ ದೇಶದ ಪ್ರಗತಿಗೆ, ಐಕ್ಯತೆಗೆ ಮಾರಕವಾಗುವುದರಲ್ಲಿ ಯಾವ ಸಂಶಯವೂ ಇಲ್ಲ. ನಮ್ಮ ಸ್ವಾತಂತ್ರ್ಯ ಸಮರದ ಹಾಗೂ ಸಂವಿಧಾನದ ಆಶಯಗಳಾದ ಧರ್ಮನಿರಪೇಕ್ಷತೆ, ಸಮಾನತೆ, ವಿಶ್ವಬಂಧುತ್ವದಂತಹ ಭವ್ಯ ಕಲ್ಪನೆಗಳನ್ನು ಸಾರ್ಥಕಗೊಳಿಸುವ ನಿಟ್ಟಿನಲ್ಲಿ ಎಲ್ಲ ಬಗೆಯ ಕೋಮುವಾದಿ ಪ್ರಗತಿ ವಿರೋಧಿಶಕ್ತಿಗಳನ್ನು ಹಿಮ್ಮೆಟ್ಟಿಸಿ, ಕೊಳೆತು ನಾರುತ್ತಿರುವ ಈ ರಾಜಕೀಯ ಮತ್ತು ಆರ್ಥಿಕ ವ್ಯವಸ್ಥೆಯಿಂದ ಭಾರತವನ್ನು ಮುಕ್ತ ಗೊಳಿಸಲು, ಸಮಾಜವಾದಿ ಭಾರತದ ಭವ್ಯ ಭವಿಷ್ಯವನ್ನು ಸಾಕಾರಗೊಳಿಸಲು, ನಿರಂತರ ಹೋರಾಟಗಳನ್ನು ಸಂಘಟಿಸುವುದು ನಮ್ಮೆಲ್ಲರ ಆದ್ಯ ಕರ್ತವ್ಯವಾಗಿದೆ.



*ಗಾಂಧೀಜಿ ಪ್ರಾರ್ಥನಾ ಸಭೆಯಲ್ಲಿ ಗೋಡ್ಸೆ*

ಕಡೆಯದಾಗಿ, ದೇಶಭಕ್ತರು ಮತ್ತು ನೊಬೆಲ್ ಪ್ರಶಸ್ತಿ ಹಾಗೂ ಭಾರತರತ್ನ ಪುರಸ್ಕೃತರ ಕುರಿತು ಒಂದೆರಡು ಮಾತು.

ನರೇಂದ್ರ ಮೋದಿ ಸರ್ಕಾರದ ಆಡಳಿತದ ಅವಧಿಯಲ್ಲಿ ಅದರ ಬೆನ್ನೆಲುಬಿನಂತೆ ಇರುವ ಹಿಂದುತ್ವವಾದಿ ಸಂಘಟನೆಗಳ ಅಪೇಕ್ಷೆಯಂತೆ ದೇಶದ ಹಲವಾರು ಸಾರ್ವಜನಿಕ ಸ್ಥಳಗಳಲ್ಲಿ ನಿರ್ಮಿಸಲಾಗುವ, ಗಾಂಧೀಜಿಯವರನ್ನು ಗುಂಡಿಟ್ಟು ಕೊಂದ "ದೇಶಭಕ್ತ" ನಾಥೂರಾಮ್ ಗೋಡ್ಸೆಯ ಪ್ರತಿಮೆಗಳು ಜನತೆಯನ್ನು ದುರುಗುಟ್ಟಿ ನೋಡಲು ಸಜ್ಜಾಗುತ್ತಿವೆ. ಸಂಘಪರಿವಾರದ ಸಂಘಟನೆಗಳ ಉದ್ಧಟತನ, ಪುಂಡಾಟಿಕೆ ಯಾವ ಹಂತ ತಲುಪಿದೆ ಎಂದರೆ ಗೋಡ್ಸೆ ಹುಟ್ಟಿದ ದಿನವನ್ನು 'ಶೌರ್ಯ ದಿವಸ್' ಎಂಬ ಹೆಸರಿನಲ್ಲಿ ಆಚರಿಸಲಿದ್ದಾರಂತೆ! ಜನವರಿ ೩೦, ೧೯೪೮ರಂದು ಗಾಂಧೀಜಿಯವರನ್ನು ಕೊಂದು ಗೋಡ್ಸೆ ಅದಾಗಲೇ ತನ್ನ "ಅಪ್ರತಿಮ ಶೌರ್ಯ" ವನ್ನು ಮೆರೆದದ್ದನ್ನು ಯಾರೂ ಮರೆಯುವಂತಿಲ್ಲ.

ವಿಶ್ವವಿಖ್ಯಾತ ನೊಬೆಲ್ ಪ್ರಶಸ್ತಿಯನ್ನು ಪ್ರತಿವರ್ಷವೂ ವಿಜ್ಞಾನ, ಸಾಹಿತ್ಯ, ವಿಶ್ವಶಾಂತಿ, ಸಮಾಜಸೇವೆ, ಅರ್ಥಶಾಸ್ತ್ರ, ವಿವಿಧ ಕಲಾಪ್ರಕಾರಗಳು ಇವೇ ಮುಂತಾದ ಕ್ಷೇತ್ರಗಳಲ್ಲಿ ಮಹತ್ಸಾಧನೆಗಳನ್ನು ಮಾಡಿದವರಿಗೆ ನೀಡಲಾಗುತ್ತದೆ. ಹಾಗೆ ನೊಬೆಲ್ ಗಳಿಸಿದವರಲ್ಲಿ ತಮ್ಮ ತಮ್ಮ ಕ್ಷೇತ್ರಗಳಲ್ಲಿ ತೊಡಗಿ ಅಸಾಧಾರಣ ಸಾಧನೆಗಳನ್ನು ಮಾಡಿ, ನಿತ್ಯನೂತನ ಆವಿಷ್ಕಾರಗಳಲ್ಲಿ ಮನುಕುಲದ ಪ್ರಗತಿಗೆ ಕೊಡುಗೆ ನೀಡಿದ ಮಹಾನ್ ಸಾಧಕರಿದ್ದಾರೆ, ನಿಜ. ನೊಬೆಲ್ ಇತಿಹಾಸದಲ್ಲಿ ಒಮ್ಮೊಮ್ಮೆ ಆ ಪ್ರಶಸ್ತಿಯನ್ನು ಕ್ಷುಲ್ಲಕ, ಸಂಕುಚಿತ ರಾಜಕೀಯ ಉದ್ದೇಶಗಳಿಗಾಗಿ ಬಳಸಿಕೊಂಡಿರುವ ಉದಾಹರಣೆಗಳೂ ನಮ್ಮ ಅನುಭವಕ್ಕೆ ಬಂದಿವೆ. ಇಲ್ಲವೆಂದಾದರೆ ಅಂದಿನ ಸೋವಿಯೆತ್ ಒಕ್ಕೂಟದ ಭಾಗವಾಗಿದ್ದ ರಷ್ಯಾದಲ್ಲೇ ಇದ್ದುಕೊಂಡು, ಮಹಾನ್ ಅಕ್ಟೋಬರ್ ಕ್ರಾಂತಿ ಮತ್ತು ಸಮಾಜವಾದಿ ವ್ಯವಸ್ಥೆಯ ವಿರುದ್ಧದ ಹಾಗೂ ಸಾಮ್ರಾಜ್ಯಶಾಹಿಗಳ ಪರವಾದ ಪ್ರಚಾರಕಾರ್ಯದಲ್ಲಿ ತೊಡಗಿದ್ದ ತಥಾಕಥಿತ ಸಾಹಿತಿ ಸೋಲ್ಜೆನಿಟ್ಸಿನ್, ಸಾಮ್ರಾಜ್ಯಶಾಹಿ ಅಮೆರಿಕದ ಅಧ್ಯಕ್ಷ ಒಬಾಮಾರಂಥವರಿಗೆ ನೊಬೆಲ್ ಪ್ರಶಸ್ತಿ ನೀಡಿದ್ದಾದರೂ ಏಕೆ?

ಇನ್ನು ನಮ್ಮದೇ ದೇಶದ ಭಾರತರತ್ನ ಪ್ರಶಸ್ತಿಯ ವಿಷಯಕ್ಕೆ ಬರೋಣ.

೨೦೦೨ರಲ್ಲಿ ಗುಜರಾತ್‌ನಲ್ಲಿ ಜರುಗಿದ ಕೋಮುಗಲಭೆಗಳಲ್ಲಿ ಸರಿಸುಮಾರು ೨೦೦೦ ಮುಸ್ಲಿಮರ ರಕ್ತ ಬೀದಿಬೀದಿಗಳಲ್ಲಿ ಹರಿದುಹೋಯಿತು. ಮುಸ್ಲಿಮ್ ಮಹಿಳೆಯರನ್ನು, ಗರ್ಭಿಣಿಯರನ್ನೂ ಒಳಗೊಂಡಂತೆ, ನೂರಾರು ಅಮಾಯಕರನ್ನು ಸಜೀವವಾಗಿ ಸುಟ್ಟುಹಾಕಲಾಯಿತು. ಹಿಂದೂ ಮತಾಂಧರಿಂದ ಸಂಭವಿಸಿದ ಈ ದುಷ್ಕೃತ್ಯಗಳು ನಡೆದದ್ದು, ಅಂದಿನ ಮುಖ್ಯಮಂತ್ರಿ ನರಹಂತಕ ನರೇಂದ್ರ ಮೋದಿಯ ನೇರ ಆದೇಶದ ಮೇರೆಗೆ ಎಂದು ಹೇಳಲಾಗುತ್ತಿತ್ತು.

ಅಂದು ರಾಷ್ಟ್ರದ ಪ್ರಧಾನಿಯಾಗಿದ್ದ ವಾಜಪೇಯಿಯವರು ಮೋದಿಯ ವಿರುದ್ಧ ಕಠಿಣಕ್ರಮ ತೆಗೆದುಕೊಳ್ಳುವ ಬದಲು ದೆಹಲಿಯಲ್ಲೇ ತಣ್ಣಗೆ ಕೂತು ಮೋದಿಗೆ, "ದಯಮಾಡಿ ರಾಜಧರ್ಮವನ್ನು ಪಾಲಿಸಿ" ಎಂಬ ಕಿವಿಮಾತು ಹೇಳಿದ್ದನ್ನು ಯಾರು ತಾನೆ ಮರೆಯಲು ಸಾಧ್ಯ? ಅಂತಹ ಚಾಣಾಕ್ಯತನದ ಮಾತುಗಳನ್ನಾಡುವುದು ವಾಜಪೇಯಿಯಂಥವರಿಗೆ ಮಾತ್ರ ಸಾಧ್ಯ. ಒಮ್ಮೆ ಆರೆಸ್ಸೆಸ್ ಸಂಘಟನೆಯ ಹಿರಿಯ

ನೇತಾರರಲ್ಲೊಬ್ಬರಾದ ಗೋವಿಂದಾಚಾರ್ಯರೇ ವಾಜಪೇಯಿ ಯಾವಾಗಲೂ ಮುಖವಾಡ ಧರಿಸಿಯೇ ಮಾತನಾಡುತ್ತಾರೆ ಎಂದು ಉದ್ಗರಿಸಿಬಿಟ್ಟಿದ್ದಾರೆ. ವಾಜಪೇಯಿಯವರ ಮಾತುಗಳು, ಹೇಳಿಕೆಗಳು ಬಹುತೇಕ ವೇಳೆ ದ್ವಂದಾರ್ಥಗಳಿಂದ ಕೂಡಿರುತ್ತಿದ್ದವು. ಆರೆಸ್ಸೆಸ್ ಕೇಂದ್ರ ಕಛೇರಿ ಇರುವ ತಮ್ಮ ಕರ್ಮಭೂಮಿ ನಾಗಪುರದಲ್ಲಿ ಅವರದ್ದು ಬೇರೆಯದೇ ಆದ ವ್ಯಕ್ತಿತ್ವ. ದೆಹಲಿಯಲ್ಲಿದ್ದಾಗ ಇನ್ನೊಂದು ಥರ. ವಿದೇಶಿ ಪ್ರವಾಸದಲ್ಲಿದ್ದಾಗ ಅವರ ಚಹರೆಯೇ ಸಂಪೂರ್ಣವಾಗಿ ವಿಭಿನ್ನವಾದುದು. ನಿಜವಾದ ವಾಜಪೇಯಿ ಯಾರು ? ಎಂಬ ಪ್ರಶ್ನೆ ಇಂದಿಗೂ ಒಗಟಾಗಿಯೇ ಉಳಿದಿದೆ.

ಗುಜರಾತ್ ಗಲಭೆಗಳ ಸಂದರ್ಭದಲ್ಲಿ ವಾಜಪೇಯಿಯವರ ಬಾಯಿಂದ ಹೊರಬಿದ್ದ ನುಡಿಮುತ್ತುಗಳು ಹೀಗಿವೆ :

"ಮುಸ್ಲಿಮರು ಎಲ್ಲೆಲ್ಲಿ ಹೆಚ್ಚಿನ ಸಂಖ್ಯೆಯಲ್ಲಿರುತ್ತಾರೋ ಅಲ್ಲೆಲ್ಲ ಅವರಿಗೆ ಶಾಂತಿಯುತವಾಗಿ ಬಾಳಲು ಇಷ್ಟವಿರುವುದಿಲ್ಲ." ಮತ್ತೊಂದು ಸಂದರ್ಭದಲ್ಲಿ, "ಮುಸ್ಲಿಮರೆಲ್ಲರೂ ಭಯೋತ್ಪಾದಕರಲ್ಲ. ಆದರೆ ಭಯೋತ್ಪಾದಕರೆಲ್ಲ ಮುಸ್ಲಿಮರೇ" ಎಂದು ಅಪ್ಪಣೆ ಹೊರಡಿಸಿದ್ದರು ವಾಜಪೇಯಿ.

ಅಂದು ರಾಷ್ಟ್ರಾಧ್ಯಕ್ಷರಾಗಿದ್ದ ಕೆ. ಆರ್. ನಾರಾಯಣನ್ ಗುಜರಾತ್ ಹತ್ಯಾಕಾಂಡವನ್ನು ಕಟುವಾಗಿ ಟೀಕಿಸಿದ ನಂತರವಷ್ಟೇ ವಾಜಪೇಯಿ ಪ್ರತಿಕ್ರಿಯಿಸಿ ಅಂತಹ ಕೃತ್ಯಗಳು ನಡೆಯಬಾರದಿತ್ತು ಎಂದಷ್ಟೇ ಹೇಳಿ ಇಡೀ ಪ್ರಸಂಗವನ್ನು ಜಾಣತನದಿಂದ ತಳ್ಳಿಹಾಕಿ ತಮ್ಮ "ಮುತ್ಸದ್ದಿತನ"ವನ್ನು ಮೆರೆದರು. ಇದಕ್ಕೂ ಮುನ್ನ ಮಾನ್ಯ ವಾಜಪೇಯಿಯವರಿಗೆ ಸಂಬಂಧಿಸಿದಂತೆ ೧೯೪೨ರಲ್ಲಿ ಜರುಗಿದ ಒಂದು ಘಟನೆಯನ್ನು ಇಲ್ಲಿ ಉಲ್ಲೇಖಿಸುವುದು ಸೂಕ್ತವೆನಿಸುತ್ತದೆ. ಅದು ಬ್ರಿಟಿಷ್ ವಸಾಹತುಶಾಹಿಗಳ ವಿರುದ್ಧ ಸಾರಿದ್ದ 'ಭಾರತ ಬಿಟ್ಟು ತೊಲಗಿ' ಚಳುವಳಿ ದೇಶದೆಲ್ಲೆಡೆ ತಾರಕಕ್ಕೇರಿದ್ದ ಸಂದರ್ಭ. ಸ್ವಾತಂತ್ರ್ಯ ಹೋರಾಟದ ಹಲವಾರು ನಾಯಕರು ಭೂಗತರಾಗಿದ್ದುಕೊಂಡೇ ಹೋರಾಟಗಳಿಗೆ ಸ್ಫೂರ್ತಿ ನೀಡಿ ನಿರ್ದೇಶಿಸುತ್ತಿದ್ದರು. ದೇಶದೆಲ್ಲೆಡೆ ಸಹಸ್ರಾರು ಹೋರಾಟಗಾರರು ಬಂಧನಕ್ಕೊಳಗಾದರು. ಬಲಪಂಥೀಯ, ಕೋಮುವಾದಿ ಪಕ್ಷ ಭಾರತೀಯ ಜನಸಂಘವಾಗಲಿ, ಆರೆಸ್ಸೆಸ್ಸಾಗಲಿ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಲೇ ಇಲ್ಲ. ಅದಾವ ಕಾರಣಕ್ಕೊ ಏನೋ ಅದೇ ಸಂದರ್ಭದಲ್ಲಿ ಈ ಎರಡೂ ಸಂಘಟನೆಗಳಲ್ಲಿ ಕ್ರಿಯಾಶೀಲರಾಗಿದ್ದ ವಾಜಪೇಯಿ ಮತ್ತು ಅವರ ಸಹೋದರ ಪ್ರೇಮ್ ಇಬ್ಬರನ್ನೂ ಬ್ರಿಟಿಷ್ ಅಧಿಕಾರಿಗಳು ಗ್ವಾಲಿಯರ್‌ನಲ್ಲಿ ಬಂಧಿಸಿದರು. ಇಬ್ಬರು ಸಹೋದರರಿಗೂ ೨೩ ದಿನ ಸೆರೆಮನೆ ವಾಸ. 'ಭಾರತ ಬಿಟ್ಟು ತೊಲಗಿ' ಚಳುವಳಿಗೂ ಇವರಿಗೂ ಯಾವುದೇ ರೀತಿಯ ಸಂಬಂಧ ಇರದಿದ್ದರೂ ಇದೆಂತಹ ಶಿಕ್ಷೆ! ಕಡೆಗಾದದ್ದು ಇಷ್ಟೆ. ಮಹಾಶಯ ಅಟಲ್ ಬಿಹಾರಿ ವಾಜಪೇಯಿಯವರು ತಪ್ಪೊಪ್ಪಿಗೆ ಪತ್ರ ನೀಡಿ ತಾನು ಮುಂದೆಂದಿಗೂ ಬ್ರಿಟಿಷರ ವಿರುದ್ಧದ ಚಳುವಳಿಯಲ್ಲಿ ಭಾಗವಹಿಸುವುದಿಲ್ಲ ಎಂಬ ಹೇಳಿಕೆ ನೀಡಿದ್ದಲ್ಲದೆ ಭೂಗತರಾಗಿದ್ದ ಸ್ವಾತಂತ್ರ್ಯ ಚಳುವಳಿಯ ಕೆಲವು ನಾಯಕರ ಹೆಸರುಗಳನ್ನೂ ಬಹಿರಂಗಗೊಳಿಸಿ ಸೆರೆಮನೆಯಿಂದ ಹೊರಬಂದು ಪಾವನರಾದರು. ಇದೂ ಒಂದು ಬಗೆಯ "ದೇಶಭಕ್ತಿ"ಯಲ್ಲವೆ !

ಇಂತಹ ವಾಜಪೇಯಿಯವರಿಗೆ ಮೋದಿಯವರ ಘನ ಸರ್ಕಾರ ಭಾರತರತ್ನ ಪ್ರಶಸ್ತಿಯನ್ನು ದಯಪಾಲಿಸಿದೆ. ಇದೀಗ ಗೋಡ್ಸೆಗೂ ಮರಣೋತ್ತರವಾಗಿ ಭಾರತರತ್ನ ಪ್ರಶಸ್ತಿ ನೀಡುವ ದಿನಗಳು ದೂರವಿರಲಾರವು.


ಎಸ್. ಸುರೇಂದ್ರ

೨೪, ೧ನೇ ಅಡ್ಡರಸ್ತೆ, ಕೆನರಾಬ್ಯಾಂಕ್ ಕಾಲೊನಿ, ಜಯನಗರ ಪೂರ್ವ, ಬೆಂಗಳೂರು – ೧೧


# ಬೋಳು ಮರದ ಹಾಡು







**ನ**ನ್ನ ಸುತ್ತೆಲ್ಲಾ ಎಷ್ಟೊಂದು
ವಸಂತಗಳ ಕೋಲ್ಮಿಂಚು
ನಾನು ಮಾತ್ರ ಬೋಳುಮರದ
ಬೆತ್ತಲೆ ಫಕೀರ್
ಕಾಡ ಕಲ್ಲಿನ ಕಾದ ಎದೆಯೊಳಗೆ
ಜಾಲಿಕೊರಡಿನ ಕಪ್ಪುದೀಪ

ನಾನು ಪೋತರಾಜನ ದುರುಗ ಮುರುಗ
ಢರಗ್ ! ಢರಗ್ ! ಢರಗ್ !
ನಾದಗ್ಯೆಯೋ ಕೋಲು
ಬೆನ್ನಿಗತ್ತಿದ ಬಾರಕೋಲಿನ ಗಾಯ
ತುಂಬಿದೆದೆಯ ಬಲಿತ ಮೊಲೆಗಳ ಹೊತ್ತು
ಕುದುರೆ ರೇಸಿನಲಿ
ಹೊಟ್ಟೆಗೆ ಆಕಾಶ ತುಂಬೋ ರುಡಾಲಿ

ನನ್ನದು ಗಾಣದೆತ್ತಿನ ಮಿಸುಗಾಟ
ಜಗತ್ತನ್ನೇ ಹೊತ್ತು ದುಸ್ಸೆನ್ನದ
ಕತ್ತೆಯ ನಡಿಗೆ
ಥೈ ಥಕ್ ! ಥಕ್ ! ಲಾಗ ಹಾಕೋ
ಮುಲಾಜಿನ ಮಲಾಮು ಅರಿಯದ
ಅಷ್ಟು ಜನರ ನೋಟದ ಮಿತಿಗೆ
ಎಲ್ಲೆ ಮೀರಿದ ಭೂಮ್ಯಾಕಾಶ
ಮೈ ಮೆತ್ತಿದ ಭಂಡಾರದ ಹನಿಗಳೊಳಗ
ನನ್ನದು
ಬೀಸಣಿಕೆಯ ಏಕನಾದ

ನಾನು ಬರಸಿಡಿಲು ಬಡಿದ
ಗುಡಾರದ ತಳಪಾಯ
ಮಳೆಗಾಲಕು ಸೈ ಬರಗಾಲಕು ಸೈ
ಇಲಿ ಹೆಗ್ಗಣಗಳು ವಸ್ತಿ ಮಾಡಿ
ಗಣಿಧೂಳು ಬಿಳಿ ಆನೆಗಳ
ಬಲಕ್ಕೂ ಜಗ್ಗದ
ಸಮುದ್ರ ತೈಲದೊಳಗಿನ ಕಪ್ಪು ದೀಪ

ಲೋಕಾಂತದ ಕಮಟು ಶೂನ್ಯದೊಳಗೆ
ಬಯಲು ಬಯಲಾದ ನಾನು
ಸರಿರಾತ್ರಿ ಒಟ್ಟೊಟ್ಟಿಗೆ ಕಣ್ಣುಬಿಟ್ಟ ಬಾವಲಿಯಂತೆ
ಬೋಳುಬೋಳಾದ ಮನಸ್ಸು ಹೊತ್ತ
ಮನಗಳೊಳಗೆ
ಮೊದಲ ಮಳೆಯ ಮಣ್ಣಿನ ಘಮಲು
ರಕ್ತದ ಹನಿಗಳಾಗಿ ತೊಟ್ಟಿಕ್ಕಲಿ.


**ಕಿರಸೂರು ಗಿರಿಯಪ್ಪ**

ಶಿಕ್ಷಕರು, ಕಿರಸೂರ (ಪೋ/ಸಾ)

ಬಾಗಲಕೋಟೆ ತಾಲೂಕು/ಜಿಲ್ಲೆ – ೫೮೭ ೧೧೧

# ಗುಲಾಮ ಚಾಕರಿ



ಇನ್ನು ಗುಲಾಮಿ ಕೂಲಿಗಳು ಬಂದಿರಲಿಲ್ಲ. ಮಾವಿನ ಮರದ ನೆರಳಲ್ಲಿ ನಮ್ಮ ಕುದುರೆಗಳನ್ನು ಬಿಟ್ಟು ಗೊತ್ತು ಗುರಿ ಇಲ್ಲದೆ ಸುತ್ತಾಡುತ್ತಿದ್ದೆವು. ಕ್ಯಾಂಪಿನಲ್ಲಿ ಹಿಂದೆ ಉಳಿದ ರಾಜ ಮಧ್ಯಾಹ್ನದ ವಿಶ್ರಾಂತಿಗೆ ತಲೆಯೊಡ್ಡಿದ್ದ. ನಮ್ಮ ಹೆಗಲ ಮೇಲೆ ಹೊರೆ ಹೊರಿಸಿ ಆರಾಮವಾಗಿ ವಿಶ್ರಾಂತಿ ಪಡೆಯುತ್ತಿದ್ದ. ಆದರೆ ನಮಗೆ ಮಾತ್ರ ಅದು ಅಂತ್ಯ ಆಗುವವರೆವಿಗೂ ವಿರಮಿಸಲು ಆಸ್ಪದವೇ ಇರಲಿಲ್ಲ. ಈ ಸಲದ ಪ್ರಯಾಣದಲ್ಲಿ ರಾಜನ ಜೊತೆ ರಾಣಿಯೂ ಬಂದಿದ್ದಳು. ಸಾಮಾನ್ಯವಾಗಿ ಆಕೆ ಕುದುರೆ ಸವಾರಿಯ ಮೇಲೆ ಬರುವವಳು. ಆದರೆ ಸಹಿಸಲಸದಳವೆನಿಸಿದ ಬಿಸಿಲಿನ ಝಳದ ಕಾರಣ ಮೇನೆಯಲ್ಲಿ ಬರಲು ನಿರ್ಧರಿಸಿದ್ದಳು. ಈ ಝಳ ಸಹಿಸಲಶಕ್ಯ, ನಮ್ಮನ್ನು ಅರಮನೆಗೆ ವಾಪಸ್ಸು ಕರೆದೊಯ್ಯಿರಿ ಎಂದು ಹಠ ಹಿಡಿದಳು ಮಹಾರಾಣಿ. ಆದರೆ ಮೇನೆಯನ್ನು ಹೊರುವವರು ಯಾರು ? ಈ ಕಾರ್ಯಕ್ಕೆ ಗುಲಾಮಿ ಚಾಕರಿಯವರು ಅನಿವಾರ್ಯ. ಮೇನೆಯ ಜೊತೆಗೆ ಕೆಲವು ಚೀಲಗಳು, ಹೊರೆಗಳೂ ಇದ್ದವು ಹೊರಲು. ರಾಜನಿಂದ ಹಿಡಿದು ಸೈನ್ಯದ ಕೊನೆಯ ವ್ಯಕ್ತಿಯವರೆಗೆ ಎಲ್ಲರೂ ಬಿಸಿಲಿನ ಝಳ ರಾಣಿಯ ಚಿತ್ತಾಕರ್ಷಕ, ಸುಕೋಮಲ ಶರೀರವನ್ನು ಬಾಡಿಸಿಬಿಡುತ್ತದೆಂದು ಕಂಗಾಲಾದರು. ಅದೇನೋ ಒಬ್ಬಿಬ್ಬರು ಮಾಡುವ ಕೆಲಸವಾಗಿದ್ದರೆ, ನಾವೇ ಆ ಕೆಲಸಕ್ಕೆ ಕೈಹಾಕಿಬಿಡುತ್ತಿದ್ದೆವು. ಕೊನೆಪಕ್ಷವೆಂದರೂ ಒಂದು ಡಜ಼ನ್ ಮಂದಿ ಮೇನೆ ಹೊರಲು ಬೇಕಾಗುತ್ತಿತ್ತು. ಗುಲಾಮಿ ಚಾಕರಿಯವರನ್ನು ಕರೆತರಲು ಹೋದ ಸೈನಿಕರು, ಪ್ರಾಯಶಃ, ಇಷ್ಟು ಹೊತ್ತಿಗಾಗಲೇ ಹಳ್ಳಿಯನ್ನು ತಲುಪಿರಬಹುದು. ಅವರು ಮೇಘವಾಲಗಳಿಗೆ ಮುಖಿ ಮೂಲಕ ರಾಜನ ಆಜ್ಞೆಯನ್ನು ತಲುಪಿಸಿರಬಹುದು. ನಮ್ಮ ಗುಂಪಿನಲ್ಲಿ ಏಳು ಮಂದಿ ಇದ್ದು ಈ ಕಾರ್ಯಕ್ಕೆ ಅವರನ್ನು ಕಳುಹಿಸಲಾಯಿತು. ಇಬ್ಬರು ಹಳ್ಳಿಗೆ ಹೋಗಿದ್ದರು, ಇನ್ನು ಉಳಿದವರು ಮಾವಿನ ಮರದಡಿ ಅವರ ಹಿಂದಿರುವಿಕೆಗಾಗಿ ಕಾದು ಕುಳಿತಿದ್ದೆವು. ಹಳ್ಳಿಯ ಹೊರವಲಯದಂಚಿನಲ್ಲಿ ನಾವು ಬರುತ್ತಿರುವ ದೃಶ್ಯ ಕಂಡೆ ಹಳ್ಳಿಯ ಹೆಣ್ಣು ಪುಕ್ಕಲರು ಕಾಲಿಗೆ ಬುದ್ಧಿ ಹೇಳಿರುವಂತೆ ತೋಚಿತು. ನಾವು ಸೈನಿಕರ ದಿರಿಸಿನಲ್ಲಿದ್ದುದರಿಂದ ಸಹಜವಾಗೇ ನಮ್ಮನ್ನು ಅವರು ದುರುಳರೆಂದು ಭಾವಿಸಿ ಹೆದರಿರುತ್ತಾರೆ.




ಆದರೆ ಆ ಬಗೆಯ ಪೀಡನೆಯ ಲವಲೇಶವೂ ನಮ್ಮಲ್ಲಿ ಇರಲಿಲ್ಲ. ಆಕಸ್ಮಿಕ, ಅಂತಹ ಉದ್ದೇಶ ನಮ್ಮಲ್ಲಿ ಚಿಗುರಿದ್ದರೂ, ಅದಕ್ಕೆ ಪುರಸೊತ್ತು ಇರಲಿಲ್ಲ ನಮಗೆ. ಗುಲಾಮಿ ಚಾಕರಿಯವರೊಂದಿಗೆ ಶೀಘ್ರವೇ ನಾವಿದ್ದ ಕ್ಯಾಂಪಿಗೆ ಮರಳಬೇಕಿತ್ತು. ನಾವು ವಿಶಾಲ ಬಯಲನ್ನು ಎವೆಯಿಕ್ಕದೆ ದೃಷ್ಟಿಸುತ್ತಾ ಉದ್ದೇಶರಹಿತರಾಗಿ ಮರದ ಬುಡಕ್ಕೆ ಕಟ್ಟಿಹಾಕಿದ್ದ ಕುದುರೆಗಳ ಜಾಗದಿಂದ ತುಸು ದೂರಕ್ಕೆ ಹೆಜ್ಜೆ ಹಾಕಿದೆವು. ನಮ್ಮ ಗುಂಪಿನ ಇತರೆ ನಾಲ್ವರು ಕಾದು, ಕಾದು ಬೇಸತ್ತು ಅಸಮಾಧಾನದಿಂದ ಆ ಹಳ್ಳಿಯ ದಾರಿಯತ್ತಲೇ ಕತ್ತೆತ್ತಿದ್ದರು. ನಮ್ಮ ಗುಂಪಿನ ನಾಯಕ ಹಿಮ್ಮತ್‌ಸಿಂಗ್ ಉಳಿದವರಿಗಿಂತ ತುಂಬ ಸಿಡುಕಿನ ವ್ಯಕ್ತಿ ಎಂದು ನನಗೆ ಮೊದಲೇ ಗೊತ್ತಿತ್ತು. ನಾನೂ ಕೂಡ ಅವನ ನಂತರದ ಸ್ಥಾನದ ಹುದ್ದೆ ಅಲಂಕರಿಸಿದವನಾಗಿದ್ದೆ. ಅವನಷ್ಟೆ ಕೋಪತಾಪ ನನಗೂ ಇತ್ತು. ಆದರೆ ಆ ಗುಲಾಮಿ ಚಾಕರಿಯವರ ಮೇಲೆ ನನಗೆ ಒಂದು ಚೂರೂ ಆಸಕ್ತಿ ಹುಟ್ಟಲಿಲ್ಲವಾಗಿ ಆ ಹಳ್ಳಿಯ ಮೈದಾನದತ್ತ ಕಣ್ಣು ಹಾಯಿಸಿದ್ದೆ. ಪ್ರತಿಯೊಂದಕ್ಕೂ ಹಿಮ್ಮತ್‌ಸಿಂಗ್ ಮೂಗು ತೂರಿಸುತ್ತಿದ್ದ. ತಾನೇ ಮೇಲೆಂದೂ ಬೀಗುತ್ತಿದ್ದ. ಹೀಗಾಗಿ, ನಾನ್ಯಾಕೆ ಕಾಳಜಿ ತೋರಲಿ ? ಮೈದಾನದ ಸುತ್ತಮುತ್ತ ಅಡ್ಡಾಡಿದ ಹಿಮ್ಮತ್‌ಸಿಂಗ್, ಬಳಿಕ ಮರದ ನೆರಳಿಗೆ ಬಂದರೆ, ಇನ್ನುಳಿದ ಮೂವರು ಸುತ್ತಾಗಿ ಕುಳಿತು ಸಂಭಾಷಣೆಯಲ್ಲಿ ಮುಳುಗಿದ್ದರು. ನಾನು ಆ ಬಂಜರು ಮೈದಾನದತ್ತಲೇ ನೆಟ್ಟನೋಟವಿಟ್ಟಿದ್ದೆ. ನಾನ್ಯಾಕೆ ಹಾಗೆ ಮಾಡಬಾರದು ? ಗುಲಾಮಿ ಚಾಕರಿಯವರನ್ನು ಕರೆತರಲು ಹಳ್ಳಿಗೆ ತೆರಳಿದ್ದ ಆ ಇಬ್ಬರು ಯೋಧರು ನನ್ನ ಅತ್ಯಂತ ಆಪ್ತ ಜೊತೆಗಾರರು, ಅವರ ಕಾರ್ಯದ ಯಶಸ್ಸಿನಲ್ಲಿ ನನಗೆ ಅರೆಕ್ಷಣವೂ ಕಿಂಚಿತ್ ಅಪನಂಬಿಕೆ ಇರಲಿಲ್ಲ !

ಇದ್ದಕ್ಕಿದ್ದಂತೆ ಕುದುರೆಯೊಂದರ ಹೇಷಾರವ ಕೇಳಿಸಿತು. ಮರವೊಂದಕ್ಕೆ ಕಟ್ಟಿಹಾಕಿದ್ದ ಕುದುರೆಗಳಲ್ಲಿ ಇದು ತಳಮಳಗೊಂಡಿದೆ ಎಂದು ಅನ್ನಿಸಿತು. ಆದರೆ ಹಳ್ಳಿಗೆ ಹೋಗಿದ್ದ ಕುದುರೆಯ ಬೆನ್ನೇರಿದ್ದ ಇಬ್ಬರು ಯೋಧರು ಹಿಂದಿರುಗಿ ಬರುತ್ತಿದ್ದರು. ಸುತ್ತುಗಟ್ಟಿ ಕುಳಿತಿದ್ದ ಮೂವರು ಯೋಧರು ಪ್ರಯಾಸದಿಂದ ಎದ್ದು ನಿಂತರು ತಮ್ಮ

ಮೂಲ : ಮೋಹನ ಪರ್‌ಮಾರ್
ಕನ್ನಡಕ್ಕೆ : ಸೊಂದಲಗೆರೆ ಲಕ್ಷ್ಮೀಪತಿ

ಕಾಲ ಮೇಲೆ. ಮೊದಲೇ ಊಹಿಸಿದವರಂತೆ ನನ್ನ ಕಡೆ ನೋಡಿದರು. ಒಂದರೆಕ್ಷಣದಲ್ಲಿ ನಾನೂ ಅವರೂ ಮರದಡಿ ಬಂದು ಕಲೆತವು. ಆ ಯೋಧರ ವ್ಯಾಪ್ತಿಯಿಂದಾಚೆಗೆ ಆ ಬಂಜರು ಬಯಲನ್ನು ನಮ್ಮ ಕಣ್ಣುಗಳು ಹುಡುಕಾಡಿದವು ಗುಲಾಮಿ ಚಾಕರಿಯವರನ್ನು ಅರಸುತ್ತಾ. ಆದರೆ ಅವರ ಸುಳಿವಿನ ಯಾವುದೇ ಕುರುಹೂ ಕಾಣಲಿಲ್ಲ. ಬಂದ ಯೋಧರ ಕಡೆ ನೋಡಿದೆ. ಅವರ ವದನದಲ್ಲಿ ಸದಾ ಮೋಹಕ ಗುಣದಂತೆ ಇದ್ದ ಮುಗುಳ್ನಗೆ ಈಗ ಮುಖೇಡಿಯಾಗಿ ಬದಲಾಗಿತ್ತು. ನನ್ನನ್ನು ನಾನೇ ನಿಯಂತ್ರಣಕ್ಕೆ ತಂದುಕೊಂಡೆ ನನ್ನ ತುಟಿ ಕಚ್ಚಿಕೊಳ್ಳುತ್ತಾ. ಕುದುರೆಯಿಂದಿಳಿದ ಯೋಧರು ನೇರ ನಮ್ಮ ಬಳಿ ಬಂದರು.

ಆದರೆ ಅವರ ತುಟಿಗಳು ಹೊಲಿದಿದ್ದವು. ನಾವು ತಮಾಷೆ ಮಾಡುವವರಂತೆ, ನಮ್ಮ ಕಣ್ಣುಬ್ಬುಗಳನ್ನು ಅವರತ್ತ ಏರಿಸಿದೆವು. ಆದರೆ ಈಗ ಅವರಿಗೆ ಸಂಕೇತ ಭಾಷೆಯ ಮೂಲತತ್ತ್ವಗಳು ಕೂಡ ಮರೆತುಹೋದಂತೆ ತೋರಿತು. ಯಾವುದೇ ಮಾತಿಲ್ಲದೆ ಕಣ್ಣು ಬಾಗಿಸಿ ನಿಂತರು. ಅವರ ಭಂಗಿ ಕಂಡ ಹಿಮ್ಮತ್‌ಸಿಂಗ್ ನಖಶಿಖಾಂತ ಕುದಿದುಹೋದ. ಅವನು ಅವರ ಬಳಿ ಒಂದು ಹೆಜ್ಜೆ ಮುಂದಿಟ್ಟವನೆ ಅಬ್ಬರಿಸುತ್ತ :

"ಮೂಗರಾ ನೀವೇನು ?" ಎಂದು ಕೇಳಿದ.

ಅವರ್‍ಯಾರಿಂದಲೂ ಉತ್ತರ ಬರಲಿಲ್ಲ. ನಾನು ಆತಂಕದಿಂದ ಹಿಮ್ಮತ್‌ಸಿಂಗ್‌ನತ್ತ ನೋಡುತ್ತಿದ್ದೆ. ಹಿಮ್ಮತ್‌ಸಿಂಗ್ ಅವರಲ್ಲೊರ್ವನ ದವಡೆ ಹಿಡಿದು ಮೇಲೆತ್ತಿದ.

"ಕೋಳಿ ತರಹ ಏಕೆ ಬೆದರಿದ್ದೀ ?" ಗುಲಾಮಿ ಚಾಕರಿಯವರಿಲ್ಲದೆ ಏಕೆ ಹಿಂದಕ್ಕೆ ಬಂದ್ರಿ ?

"ಯಾರೂ ಬರಲು ಸಿದ್ಧರಿಲ್ಲ."

"ಪ್ರಭುಗಳ ಆಜ್ಞೆಯನ್ನು ಧಿಕ್ಕರಿಸಿದರಾ? ಆದರೂ ನೀವೊಂದೂ ಮಾತೂ ಆಡ್ತಿಲ್ಲಾ!"

"ನಾವು ಹೇಳುವುದು ಏನೂ ಉಳಿದಿಲ್ಲ."

"ಬಲವಂತವಾಗಿ ಎಳೆದು ತರಬೇಕಿತ್ತು ಆ ಸೂಳೆಮಕ್ಕಳ್ನಾ."

"ನಾವೇಗೆ ಮಾಡಕ್ಕಾಗುತ್ತೆ ? ಹಾಗೇ ಮಾಡಿ ಎಂದು ನಮಗೆ ಆಜ್ಞೆ ಇರಲಿಲ್ಲ. ನಾವು ಮುಖಿಯನನ್ನು ಭೇಟಿಯಾಗಿ ರಾಜರ ಆದೇಶ ಹೇಳಿದೆವು. ಆಮೇಲೆ ಮುಖಿಯನೊಂದಿಗೆ ಮೇಘವಾಲರ ಕೇರಿಗೆ ಹೋದೆವು. ಮುಖಿ ಅವರಿಗೆ ಹೇಳಿದ ನಮ್ಮೊಡನೆ ಬರಲು. ಆದರೆ ಅವರು ಅವನನ್ನು ಕ್ಯಾರೆ ಅನ್ನಲಿಲ್ಲ."

"ಮುಖಿ ಏತಕ್ಕೆ ಅವರ ಮೇಲೆ ತನ್ನ ದರ್ಪ ತೋರಿಸಲಿಲ್ಲ ?"

"ತೋರಿಸಿದ. ಅಷ್ಟೆ ಅವನ ಕೈಲಿ ಆಗಿದ್ದು. ಅವರು ಅವನ ಸುತ್ತ ಸುತ್ತುವರಿದು ಅವನ ಮಾತನ್ನು ಧಿಕ್ಕರಿಸಿದರು."

"ಕಳ್ಳಬಡ್ಡಿ ಮಕ್ಕಳು ! ಎಂದಿನಿಂದ ಬಂದಿದೆ ಇಷ್ಟೊಂದು ಸೊಕ್ಕು ಅವರಿಗೆ ?"

"ಗೊತ್ತಿಲ್ಲ ನಮಗೆ. ಅವರು ಅವನಿಗೂ ಸರಿಯಾಗೇ ಹೇಳಿದರು. ಏನು ಮಾಡ್ತಿಯೋ ಮಾಡ್ಕೊ, ನಮ್ಮಲ್ಲಿ ಒಬ್ಬರೂ ಬರಂಗಿಲ್ಲ ಎಂದರು ಒಕ್ಕೊರಲಿನಿಂದ. ಮುಖಿನೇ ಸೋತು ಹಿಂದಿರುಗಬೇಕಾಯಿತು. ಮೇನೆ ಹೊರಲು ಯಾರೂ ಈ ಊರಿಂದ ಬರಲ್ಲ ಎಂದ ಅಂತಿಮವಾಗಿ ಮುಖಿ ನಮಗೆ."

ಕೋಪ ನೆತ್ತಿಗೇರಿ ಬುಸುಗುಟ್ಟಿದ ಹಿಮ್ಮತ್‌ಸಿಂಗ್. ಖಡಕ್ ತೀರ್ಮಾನವೊಂದು ಅವನ ಮುಖದಲ್ಲಿ ಸ್ಪಷ್ಟಗೊಂಡಿತು, ಆ ಯಮನೇ ದಿಢೀರನೆ ಅವನನ್ನು ಅಧೀನಪಡಿಸಿ ಕೊಂಡಂತೆ. ಯೋಧರು ಗಡಗಡ ನಡುಗಿದರು. ಭಯದಿಂದ ನನ್ನ ಕಣ್ಣುರೆಪ್ಪೆಗಳು ಅದುರಿದವು ಅವನನ್ನು ನೋಡುತ್ತಿದ್ದಂತೆ. ಹಿಮ್ಮತ್‌ಸಿಂಗ್‌ನ ವದನದ ಮೇಲೆ ಮೂಡಿದ ಗೆರೆಗಳನ್ನು ಓದಲು ಪ್ರಯತ್ನಿಸಿದೆ. ಗುಲಾಮಿ ಚಾಕರಿಯವರನ್ನು ಕರೆತರದಿದ್ದಕ್ಕೆ ಇತರೆ ಮೂವರು ತಮ್ಮ ಜೊತೆಗಾರರ ಮೇಲೆ ಸಿಟ್ಟುಗೊಂಡಿದ್ದರು.

## ಸಾದರ ಸ್ವೀಕಾರ

**ಸಂಸ್ಕೃತಿ ಪ್ರೀತಿಯ ಕುಂಭ – ಬಾಬು ಶಿವ ಪೂಜಾರಿ**
*ವಿ. ಗ. ನಾಯಕ*
**ಪುಟ : ೫೨ ಬೆಲೆ : ರೂ. ೩೩**

**ಕನೀಯ ಕವಿ – ಪ್ರೊ|| ಟಿ. ಕೇಶವ ಭಟ್ಟ**
*ಡಾ|| ತಾಳ್ತಜೆ ವಸಂತಕುಮಾರ*
**ಪುಟ : ೫೨ ಬೆಲೆ : ರೂ. ೩೩**

**ಉದ್ಯಮ ರಂಗದ ಆದ್ಯ ಪ್ರವರ್ತಕ – ವಿ. ಎಸ್. ಕುಡ್ವ**
*ಬಿ. ಸೀತಾರಾಮ ಭಟ್ಟ*
**ಪುಟ : ೫೨ ಬೆಲೆ : ರೂ. ೩೩**

**ಜೇನುಕೃಷಿ ತಜ್ಞ – ಹವ್ಯಾಸಗಳ ಹರಿಕಾರ –ಪೈಲೂರು ಲಕ್ಷ್ಮೀನಾರಾಯಣ ರಾವ್** *ಜಿ. ಎಸ್. ಉಬರಡ್ಕ*
**ಪುಟ : ೫೨ ಬೆಲೆ : ರೂ. ೩೩**

**ಸಾಧನೆಯ ಬೆಳಕು ನಾವರಿಯದ ದೇರಾಜೆ**
*ಪ್ರಸಾದ ರಕ್ಷಿದಿ*
**ಪುಟ : ೫೨ ಬೆಲೆ : ರೂ. ೩೩**

**ಕೋಶ ಸಾಮ್ರಾಜ್ಯದ ಈಶ – ಯಜ್ಞನಾರಾಯಣ ಉಡುಪ** *ನಾರಾಯಣಿ ದಾಮೋದರ್*
**ಪುಟ : ೫೨ ಬೆಲೆ : ರೂ. ೩೩**

**ಜಾದೂ ಲೋಕದ ಮಾಂತ್ರಿಕ – ಪ್ರೊ|| ಶಂಕರ್**
*ಪ. ರಾಮಕೃಷ್ಣ ಶಾಸ್ತ್ರಿ*
**ಪುಟ : ೫೨ ಬೆಲೆ : ರೂ. ೩೩**

**ವಿದ್ವತ್ತೆಗೆ ರೂಪಕ – ಕಡವ ಶಂಭು ಶರ್ಮ**
*ಡಾ|| ಶ್ರೀಧರ ಹೆಚ್. ಜಿ.*
**ಪುಟ : ೫೨ ಬೆಲೆ : ರೂ. ೩೩**

**ಕಲಾಲೋಕದ ಚಿಂತಕ – ಎ. ಈಶ್ವರಯ್ಯ**
*ನಿತ್ಯಾನಂದ ಪಡ್ರೆ*
**ಪುಟ : ೫೨ ಬೆಲೆ : ರೂ. ೩೩**

**ವಾಸ್ತವವಾದದ ಸಾಹಿತಿ ರಾಮಚಂದ್ರ ಉಚ್ಚಿಲ**
*ಶ್ಯಾಮಲಾ ಮಾಧವ*
**ಪುಟ : ೫೨ ಬೆಲೆ : ರೂ. ೩೩**

*ಮೇಲಿನ ೧೦ ಪುಸ್ತಕಗಳ ಪ್ರಕಾಶಕರು*
**ಕಾಂತಾವರ ಕನ್ನಡ ಸಂಘ (ರಿ),**
ಕಾಂತಾವರ–೫೭೪ ೧೨೯, ಕಾರ್ಕಳ, ಉಡುಪಿ ಜಿಲ್ಲೆ.

**ಕ್ರಾಂತಿ ಜ್ಯೋತಿ ಸಾವಿತ್ರಿ ಬಾಯಿ ಫುಲೆ**
*ಡಾ|| ಎಚ್. ಎಸ್. ಅನುಪಮಾ*
**ಪುಟ : ೮೮ ಬೆಲೆ : ರೂ. ೬೦**

**ಸಾಕಾರದತ್ತ ಸಮಾನತೆಯ ಕನಸು** (ಮಹಿಳಾ ಪ್ರತಿರೋಧದ ನೆಲೆಗಳು) *ಸಂ. : ಡಾ|| ಪ್ರೀತಿ ಶುಭಚಂದ್ರ, ಎಂ. ಎನ್. ಸುಮನಾ*
**ಪುಟ : ೧೬೮ + ೧೬**

*ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು*
**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ್ ಹಾಸ್ಟೆಲ್, ಗದಗ – ೫೮೨ ೧೦೧

**ನಾವು – ನೀವು** (ಕವನ ಸಂಕಲನ)
*ಬೀರಣ್ಣ ನಾಯಕ ಹಿರೇಗುತ್ತಿ*
**ಪುಟ : ೮೦ ಬೆಲೆ : ರೂ. ೫೦**

**ಬೇವು – ಬೆಲ್ಲ** (ಬೀರಣ್ಣನ ಚುಟುಕುಗಳು)
*ಬೀರಣ್ಣ ನಾಯಕ ಹಿರೇಗುತ್ತಿ*
**ಪುಟ : ೭೬ ಬೆಲೆ : ರೂ. ೫೦**

*ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು*
**ಕನ್ನಡ ಚಂದ್ರಮ,** ಬರ್ಗಿ, ಕುಮಟಾ, ಉತ್ತರ ಕನ್ನಡ – ೫೮೧ ೪೪೦

**ಮಿಥ್ಯೆಯೊಳಗಿನ ಸತ್ಯ** *ಸಂ : ಗೋಪಾಲ ಬಿ. ಶೆಟ್ಟಿ*
**ಪುಟ : ೧೨ + ೨೦೦ ಬೆಲೆ : ರೂ. ೧೫೦**
**ನೂತನ ಪಬ್ಲಿಕೇಶನ್ಸ್,** 'ಆರಾಧನಾ', ಇಂದ್ರಾಳಿ, ೩ನೇ ಅಡ್ಡರಸ್ತೆ, ಕುಂಜಿಬೆಟ್ಟು, ಉಡುಪಿ – ೫೭೬ ೧೦೨

**ಭಾರತೀಯ ಸಾಹಿತ್ಯ ನಿರ್ಮಾಪಕರು – ಪುದುಮೈಪಿತ್ತನ್** *ವಲ್ಲಿಕಣ್ಣನ್*
**ಪುಟ : ೮೪ ಬೆಲೆ : ರೂ. ೫೦**
**ಸಾಹಿತ್ಯ ಅಕಾಡೆಮಿ,** ರವೀಂದ್ರ ಭವನ, ೩೫, ಫಿರೋಜಶಾಹ ರಸ್ತೆ, ಸ್ವಾತಿ ಮಂದಿರ ಮಾರ್ಗ, ನವದೆಹಲಿ – ೧೧೦ ೦೦೧

**ಕಾಮ್ರೇಡ್ ಕೆ. ಎಂ. ಶ್ರೀನಿವಾಸ್** (ಅಭಿನಂದನಾ ಗ್ರಂಥ)
*ಸಂ. : ಕೆ. ಆರ್. ದಯಾನಂದ, ಡಾ|| ಬಿ. ಗಣಪತಿ ಉತ್ತುಂಗ*
**ಪುಟ : *xvi* + ೧೬೬ ಬೆಲೆ : ರೂ. ೩೦೦**
**ಕಾಳಮ್ಮನಗುಡಿ ಕೆ. ಎಂ. ಶ್ರೀನಿವಾಸ್ ಅಭಿನಂದನಾ ಸಮಿತಿ,** ತೀರ್ಥಹಳ್ಳಿ – ೫೭೭ ೪೩೨, ಶಿವಮೊಗ್ಗ ಜಿಲ್ಲೆ

**ರಸವಾದಿ** *ಮೂಲ : The Alchemist ಪಾವ್ಲೊ ಕೊಯ್ಲೊ, ಅನು : ಅಬ್ದುಲ್ ರಹೀಮ್ ಟೀಕೆ*
**ಪುಟ : *xiv* + ೧೭೦ ಬೆಲೆ : ರೂ. ೨೫೦**
**ಸಲ್ಮಬಾವ ಫೌಂಡೇಶನ್,** ಶಾಹ ಕಾಂಪ್ಲೆಕ್ಸ್, ಬೆನ್‌ದೂರ್‌ವೆಲ್, ಮಂಗಳೂರು – ೫೭೫ ೦೦೧

**ಸಂಬಂಧಕೀಯ** (ಸಂಪಾದಕೀಯ ಬರಹಗಳು)
*ಶ್ರೀನಿವಾಸ ಜೋಕಟ್ಟೆ*
**ಪುಟ : *x* + ೮೬ ಬೆಲೆ : ರೂ. ೯೦**
**ಕನ್ನಡ ಸಾಹಿತ್ಯ ಪರಿಷತ್ತು ಮಹಾರಾಷ್ಟ್ರ ಘಟಕ,** ಮನುಶ್ರುತಿ, C–೪೨/೨/೨, ಸೆಕ್ಟರ್ – ೨೯, ವಶಿ, ನವಿ ಮುಂಬಯಿ – ೪೦೦ ೭೦೩

**ಅವನು ಮಧು ಸಾವು** (ಬಿಡಿ ದ್ವಿಪದಿಗಳು)
*ಎಚ್. ಎಸ್. ಮುಕ್ತಾಯಕ್ಕ*
**ಪುಟ : ೮೦ ಬೆಲೆ : ರೂ. ೧೦೦**
**ಸಂಕ್ರಮಣ ಪ್ರಕಾಶನ,** ನಂ. ೧೫, ಜ್ಯೋತಿ ಲೇಔಟ್, ೨ನೇ ಮೈನ್, ಯಲಚೇನಹಳ್ಳಿ, ಜೆ. ಪಿ. ನಗರ, ಬೆಂಗಳೂರು – ೫೬೦ ೦೭೮

## ಅಭಿನಂದನೆ

ಡಾ॥ ಬೆಸಗರಹಳ್ಳಿ ರಾಮಣ್ಣ ಪ್ರತಿಷ್ಠಾನದಿಂದ ಕೊಡುವ ಡಾ॥ ಬೆಸಗರಹಳ್ಳಿ ರಾಮಣ್ಣ ವಾರ್ಷಿಕ ಕಥಾ ಸಂಕಲನ ಪ್ರಶಸ್ತಿಯು ಪ್ರಸಿದ್ಧ ಕತೆಗಾರ ಹಾಗೂ 'ಹೊಸತು' ಬರಹಗಾರರಾದ ಡಾ॥ ಅಮರೇಶ ನುಗಡೋಣಿ ಅವರಿಗೆ ಲಭಿಸಿದೆ. ಅವರಿಗೆ 'ಹೊಸತು' ಹಾಗೂ ನವಕರ್ನಾಟಕ ಬಳಗದಿಂದ ಅಭಿನಂದನೆಗಳು.

---

ಆದರೆ ನಾನವರಿಗೆ, ನನ್ನ ತುಟಿಯ ಮೇಲೆ ಬೆರಳನ್ನಿಡುತ್ತಾ ಅಂಗಸನ್ನೆ ಮಾಡಿದೆ. ಹಿಮ್ಮತ್‌ಸಿಂಗ್ ನಮ್ಮ ಮುಖಂಡ, ಹಾಗಾಗಿ ಉಳಿದ ನಮಗೆಲ್ಲರಿಗೂ ವೃಥಾ ಬಾಯಿ ಹಾಕಲು ಏನು ಕೆಲಸ ? ಆ ಯೋಧರೀರ್ವರು, ತಮ್ಮ ಕರ್ತವ್ಯದಲ್ಲಿ ವಿಫಲರಾಗಿದ್ದಕ್ಕೆ ಹಿಮ್ಮತ್‌ಸಿಂಗ್ ಅವರಿಗೆ ಛೀಮಾರಿ ಹಾಕುತ್ತಿದ್ದಂತೆ ನಮ್ಮ ಕಡೆ ತನ್ನ ಗೋಣು ತಿರುಗಿಸಿದ ನಮ್ಮ ಪ್ರತಿಕ್ರಿಯೆಯನ್ನು ತಿಳಿಯಲು. ಯಾವ ಮುಚ್ಚುಮರೆಯೂ ಇಲ್ಲದೆ, ನಾವು ಅದಕ್ಕೆ ಪ್ರತಿಕ್ರಿಯೆ ನೀಡಬೇಕಿತ್ತು. ಅವರ ಮೇಲೆ ಕೆಂಡಕಾರಿದ್ದು ಹಿಮ್ಮತ್ ಸಿಂಗ್‌ನ ತಪ್ಪಲ್ಲ. ಇಂತಹದೊಂದು ಲೋಪ ಪ್ರಪ್ರಥಮ ಸಲ ಎದುರಾಗಿತ್ತು. ರಾಜಾಜ್ಞೆಯನ್ನು ಗುಲಾಮಿ ಚಾಕರಿ ಯವರು ಹಿಂದೆಂದೂ ಅಲಕ್ಷಿಸಿದವರಲ್ಲ. ರಾಜರ ಸಾಮ್ರಾಜ್ಯದಲ್ಲಿ ಹಿಂದೆಂದೂ ಯಾರ ಜೀವಿತ ಸ್ಮೃತಿಯಲ್ಲೂ, ರಾಜಾಜ್ಞೆಯನ್ನು ಇಷ್ಟು ದಿಕ್ಕೆಟ್ಟ ರೀತಿಯಲ್ಲಿ ಧಿಕ್ಕರಿಸಿದ ದಾಖಲೆ ಇರಲಿಲ್ಲ. ಗುಲಾಮಿ ಚಾಕರಿಯವರ ಸೇವೆ ಅಗತ್ಯವೆನಿಸಿದಾಗಲೆಲ್ಲ ಮುಖಿ ಎನಿಸಿಕೊಂಡವನು ತಕ್ಕ ವ್ಯವಸ್ಥೆ ಮಾಡುತ್ತಿದ್ದ. ಅನೇಕ ಸಲ, ಬರುತ್ತಿದ್ದ ಸೈನಿಕರನ್ನು ನೋಡಿಯೇ ಗುಲಾಮಿ ಚಾಕರಿಯವರು ತಮ್ಮ ಸೇವೆಯ ಅಗತ್ಯತೆಯನ್ನು ತಾವೇ ಮನಗಂಡು ಹಳ್ಳಿಯ ವೃತ್ತದಲ್ಲಿ ಸ್ವಯಂ ಖುದ್ದಾಗಿ ಗುಂಪುಗೂಡುತ್ತಿದ್ದರು. ಆದರೆ ಈಗ ಎಲ್ಲವೂ ಕೊಂಡಿ ಕಳಚಿದೆ. ರಾಜನ ಆಜ್ಞೆಯನ್ನು ಗುಲಾಮಿ ಚಾಕರಿಯವರು ಸ್ಪಷ್ಟವಾಗಿ ತಿರಸ್ಕರಿಸಿದ್ದಾರೆ ಸಹಕರಿಸದೆ. ತಮ್ಮ ಗೋರಿಯನ್ನು ತಾವೇ ತೋಡಿಕೊಂಡಿದ್ದಾರೆ. ಏನಾಗಬಹುದು ಈಗ ? ಪ್ರಾಯಶಃ ಹಿಮ್ಮತ್‌ಸಿಂಗ್‌ನೇ ಖುದ್ದು ಹಳ್ಳಿಗೆ ಹೋಗಬಹುದು. ನಮ್ಮನ್ನೂ ಜೊತೆಯಲ್ಲಿ ಕರೆದೊಯ್ಯಬಹುದು. ಆ ಬಳಿಕ ಏನಾಗಬಹುದೆಂಬುದನ್ನು ನಾನೂ ಊಹಿಸಲಾರೆ.

ಹಿಮ್ಮತ್‌ಸಿಂಗ್‌ನ ಕಣ್ಣುಗಳು ನನ್ನ ಮೇಲೆ ಹರಿದವು. ನಾನು ನನ್ನ ಮುಖದ ಮೇಲೆ ವಿರಾಮ ಸಂಜ್ಞೆಯನ್ನು ಬಿಂಬಿಸದೆ ಅವನ ಬಳಿ ಹೋದೆ. ಇನ್ನುಳಿದ ಮೂವರು ಅಂತೆಯೇ ಮಾಡಿದರು. ಗುಲಾಮಿಚಾಕರರನ್ನು ಕರೆತರುವಲ್ಲಿ ವಿಫಲರಾದ ಯೋಧರು ಬಿಳಿಚಿಕೊಂಡಿದ್ದರು – ಅವರ ಮೈಯೊಳಗಿನ ರಕ್ತವೆಲ್ಲ ಬಸಿದಂತೆ ! ನಮ್ಮ ಯಾರ ಕಡೆಗೂ ಅವರು ತಮ್ಮ ಮುಖವೆತ್ತಿ ನೋಡುವ ಸಾಹಸ ಮಾಡಲಿಲ್ಲ. ಅವನ ರಕ್ತರಂಜಿತ ಕಣ್ಣುಗುಡ್ಡೆಗಳಿಂದ ತಪ್ಪಿಸಿಕೊಳ್ಳಲು ಅನ್ಯಮಾರ್ಗವೇ ಇಲ್ಲದಂತಾಗಿತ್ತು. ಪ್ರತಿಯೊಂದೂ ಸಂಪೂರ್ಣವಾಗಿ ಅವ್ಯವಸ್ಥೆಗೊಂಡಿತ್ತು. ಹಿಮ್ಮತ್‌ಸಿಂಗ್ ತುಸುವೇ ನನ್ನ ಮೇಲೆ ನೆಟ್ಟ ತನ್ನ ಕಣ್ಣು ಹೊರತೆಗೆದರೆ, ನಾನಾಗ ಇನ್ನಿಬ್ಬರ ಮುಖ ಓದಿಬಿಡುತ್ತಿದ್ದೆ. ಅಂತಿಮವಾಗಿ, ಹಿಮ್ಮತ್‌ಸಿಂಗ್, ಅವರಲ್ಲಿ ಒಬ್ಬನಿಗೆ ತನ್ನ ಕುದುರೆ ತನ್ನಿ ಎಂದ. ಕುದುರೆ ಬಂದು ನಿಂತೊಡನೆ ಅದರ ಬೆನ್ನಿಗೆ ಎಗರಿ ಕುಳಿತು "ಎಲ್ಲರೂ ಬನ್ನಿ" ಎಂದು ಅಬ್ಬರಿಸಿದ.

ಒಡನೆಯೇ ನಾವೆಲ್ಲ ನಮ್ಮ ನಮ್ಮ ಕುದುರೆಗಳ ಮೇಲೇರಿ ಕುಳಿತೆವು. ಹಿಮ್ಮತ್‌ಸಿಂಗ್‌ನ ಕುದುರೆ ಕೆರಳಿ ನಾಗಾಲೋಟದಲ್ಲಿ ಓಡಿತು. ನಮ್ಮ ಕುದುರೆಗಳು ಅದನ್ನು ಅನುಸರಿಸಲು ಸಾಹಸಪಟ್ಟವು. ಹಳ್ಳಿ ಕಣ್ಣಂಚಿಗೆ ಬಂದೊಡನೆ ಹಿಮ್ಮತ್‌ಸಿಂಗ್ ಕುದುರೆಯ ಓಟ ತಗ್ಗಿಸಿದ. ಬಳಿಕ ನಾವೆಲ್ಲ ಒಟ್ಟಾಗಿ ಹೋದೆವು. ಮುಂದೇನಾ ಗುವುದೋ ಎಂದು ನನಗೆ ನಿಜಕ್ಕೂ ದಿಗಿಲಾಯಿತು. ನಾನೆಂದು ಈ ರೀತಿಯಲ್ಲಿ ಹೇಡಿಯಾದೆ ? ಕುದುರೆಯ ಗೊರಸಿನ ಪ್ರತಿ ಹೆಜ್ಜೆಗೂ ನನ್ನ ಹೃದಯ ಭಯದಿಂದ ಬಡಿದುಕೊಳ್ಳುತ್ತಿತ್ತು. ಹಳ್ಳಿಯ ಚೌಕದ ಬಳಿ ಬಂದೆವು. ನಾವು ಹಳ್ಳಿಗೆ ಪ್ರವೇಶಿಸುತ್ತಿದ್ದಂತೆ ಭೀತಿಯ ಅವಕುಂಠನ ಅದರ ಮೇಲೆ ಹೊರಿಸಿದಂತೆ ತೋರಿತು. ಹಿಮ್ಮತ್‌ಸಿಂಗ್ ಕುದುರೆಯಿಂದ ಕೆಳಗೆ ಧುಮುಕಿದವನೇ, "ಮುಖಿಯನ್ನು ಬಂಧಿಸಿ ಕರೆತನ್ನಿ" ಎಂದು ಆದೇಶವಿತ್ತ.

ಹಿಮ್ಮತ್‌ಸಿಂಗ್ ಆಜ್ಞಾಪಿಸುವವನಂತೆ ನನ್ನ ಕಡೆ ನೋಡಿದ. ತಮಾಷೆ ಮಾಡುವವನಂತೆ ನಾನು ಇಬ್ಬರು ಯೋಧರೆಡೆ ನೋಡಿದೆ, ಮುಖಿ ಎಲ್ಲಿರುವನೆಂಬ ಪ್ರಶ್ನೆಯನ್ನು ಅವರಿಗೆ ಕೇಳುವವನಂತೆ. ಅವರಿಬ್ಬರೂ ಹಳ್ಳಿಗೆ ದೌಡಾಯಿಸಿ ಬಳಿಕ ಮುಖಿಯೊಂದಿಗೆ ಹಿಂದಿರುಗಿದರು. ಮುಖಿ ಮತ್ತು ಯೋಧರು ಪರಸ್ಪರ ತೀರ ಸ್ನೇಹಭಾವದ ಮುಖಭಾವದೊಂದಿಗೆ ಹಿಂದಿರುಗಿದ್ದನ್ನು ಕಂಡು, ನನಗೆ ಸಂತೋಷವಾಯಿತು. ಹಿಮ್ಮತ್‌ಸಿಂಗ್‌ನ ಎದುರು ಮುಖಿ ಕೈ ಜೋಡಿಸಿ ನಿಂತಿದ್ದ. ಭಯದಿಂದ ಥರಗುಟ್ಟಿದ್ದ. ಮುಖಿಯನ ಆಳುಗಳು ಚೌಕದಲ್ಲಿ ದಿಬ್ಬದ ಮೇಲೆ ಚಾಪೆ ಹಾಸಿದರು, ನಾವು ಕುಳಿತೆವು.




"ಎಷ್ಟು ವರ್ಷದಿಂದ ನೀನು ಮುಖಿಯಾಗಿದ್ದಿ ?"

"ಈಗ್ಗೆ ಹನ್ನೆರಡು ಆಯ್ತು, ಬಾಯಿ ಸಾಹೇಬ್."

"ರಾಜಾಜ್ಞೆ ಎಂದಾದರೂ ಮೀರಿದ್ದೀಯಾ ?"

"ಇಲ್ಲ ದಣಿ. ಹಾಗೆ ಮಾಡಿದರೆ ಅಂದೇ ನನ್ನ ಕೊನೆ ಅಲ್ಲವೆ !"

"ಹಾಗಾದರೆ, ಗುಲಾಮಿ ಚಾಕರರನ್ನು ನಮ್ಮ ಸೈನಿಕರ ಜೊತೆ ಏಕೆ ಕಳಿಸಲಿಲ್ಲ ಇಂದು."

"ಬರಲು ಒಪ್ಪದಿದ್ದರೆ ನಾನೇನು ಮಾಡಲಿ ?"

"ಅಂದ್ರೆ ಅದರ ಅರ್ಥ ನಿನ್ನ ದರ್ಪ ಮೇಘವಾಲಗಳ ಮೇಲೆ ಏನೂ ಇಲ್ಲ ಅಂದಂಗಾಯ್ತು ?"

"ಇಲ್ಲ... ಇದೆ."

"ಕಳಿಸು ಅವರನ್ನು ಈಗಲೇ."

ಇಂತಹ ತುಣುಕು ಮಾತು ಹೇಳಿದ ಹಿಮ್ಮತ್‌ಸಿಂಗ್ ಬಳಿಕ, ತನ್ನ ಮೀಸೆ ಹುರಿ ಮಾಡುತ್ತಾ ಕುಳಿತ. ಮೇಘವಾಲರ ಹಟ್ಟಿಗೆ ಮುಖಿ ಹಾಗೂ ಅವನ ಆಳುಗಳು ದೌಡಾಯಿಸಿದರು. ಅವರು ಅದೃಶ್ಯಗೊಂಡ ಬಳಿಕ ನಾವು ಪರಸ್ಪರ ಪಿಸುಮಾತಿಗಿಳಿದೆವು. ಹಿಮ್ಮತ್‌ಸಿಂಗ್ ತನ್ನ ಮೀಸೆ ಹುರಿ ಮಾಡುತ್ತಲೇ ಇದ್ದ ಹಾಗೂ ಮೇಲಿಂದ ಮೇಲೆ ನಮ್ಮತ್ತ ಕಣ್ಣು ಹಾಯಿಸುತ್ತಿದ್ದ. ಅವನ ರೌದ್ರಾವತಾರ ನೋಡಿ ಅವರು ಹೆದರಿ ಇಲಿ ಯಂತಾಗಿದ್ದರು. ಆದರೆ ನಾನು ಹೆದರಲಿಲ್ಲ. ನಾನು ಧೈರ್ಯದಿಂದ ಅವನನ್ನು ಕೇಳಿದೆ :

"ಗುಲಾಮಿ ಚಾಕರಿಯವರು ಬರ್ತಾರೆ ಅಂತ ಅಂದ್ಕೋಂಡಿದ್ದೀರಾ ?"

"ಬರಲಿಲ್ಲ ಅಂದ್ರೆ ಕುತ್ತಿಗೆ ಹಿಡಿದು ಎಳೆದು ತಂದು ಈ ಚೌಕದಲ್ಲಿ ಚರ್ಮ ಸುಲಿಯೋಣ ಜೀವಂತವಾಗಿ."

"ಅವರನ್ನು ಜೀವಂತವಾಗಿ ಚರ್ಮ ಸುಲಿದರೂ ಒಂದು ವೇಳೆ ಬರದೆ ಹೋದರೆ?"

ನನ್ನ ಕಡೆ ಹಿಮ್ಮತ್‌ಸಿಂಗ್ ಸಂದೇಹದಿಂದ ನೋಡಿದ. ಅವನ ನಯನಗಳು ಯೋಚಿಸಲಾರಂಭಿಸಿದವು. ನನ್ನ ಮಾತು ಅವನನ್ನು ದಿಢೀರನೆ ಕಕ್ಕಾಬಿಕ್ಕಿಗೊಳಿಸಿದಂತೆ ತೋರಿದವು. ಅದೇ ಭಾವದಲ್ಲಿ ಇತರರ ಕಡೆ ನೋಡಿದ. ಅವರು ಪಿಸುನುಡಿಗಳನ್ನು ನಿಲ್ಲಿಸಿ ಮುಖಿ ಮತ್ತವನ ಆಳುಗಳು ಹೋದ ದಾರಿಯತ್ತ ಕಣ್ಣು ಹಾಯಿಸಿದರು. ದೀರ್ಘ ಸಮಯ ಸರಿಯಿತು. ಗುಲಾಮಿಗಳ ಸುಳಿವು ಇನ್ನೂ ಇಲ್ಲ. ಮುಖಿಯಿಂದ ಒಂದು ಸಂದೇಶವೂ ಇಲ್ಲ. ಹಿಮ್ಮತ್‌ಸಿಂಗ್ ತನ್ನಷ್ಟಕ್ಕೆ ತಾನೇ ವಟಗುಟ್ಟಲಾರಂಭಿಸಿದ. ನಾನಾದರೋ ಹಿಗ್ಗಿ ಹೋದೆ. ಎಲ್ಲಾ ಪಕ್ಕಾ ಇದೆ ಎಂದು ತೋಚಿತು, ಇದ್ದಕ್ಕಿದ್ದಂತೆ, ನನಗೆ ಅರುಣೋದಯವಾದಂತೆನಿಸಿತು. ಥಟ್ಟನೆ ಮೇಲೆದ್ದೆ. ಆಳವಾದ ಉಸಿರೆಳೆದುಕೊಂಡೆ. ಹಿಮ್ಮತ್‌ಸಿಂಗ್ ನನ್ನ ಕಡೆ ತಿರುಗಿ :

"ಏನು ? ಅವರು ಬರೋ ಸೂಚನೆ...?"

"ಏನೂ ಇಲ್ಲ ! ಆ ಮುಖಿನೂ ಬರೋದು ಬಲು ತಡ. ನಾವೇ ಹೋಗೋಣ, ಅವನನ್ನು ಇನ್ನು ಎಷ್ಟು ಅಂತ ನಂಬೋದು ?"

"ನನ್ನನ್ನು ಯಾರು ಏನು ಮಾಡ್ತಾರೆ ಅಂತ ಅಂದ್ಕೊಂಡವ್ನೆ, ರಾಜರ ಯೋಧರನ್ನು ಕಸ ಅಂತ ಅಂದ್ಕೊಂಡಿರಬೇಕು ? ಇರ್ಲಿ, ಕೂತ್ಕೊಳ್ಳಿ."

ನಾನು ಮರುಮಾತನಾಡದೆ ಕೆಳಗೆ ಕುಳಿತೆ. ತುಸು ಹೊತ್ತು ಏನೊಂದು ಮಾತು ವಿನಿಮಯವಾಗಲಿಲ್ಲ.

ತಮ್ಮ ಹೊಲದಲ್ಲಿ ಹಾಗೂ ಇಕ್ಕಟ್ಟಾದ ದಾರಿಯಲ್ಲಿ ಹೋಗುತ್ತಿದ್ದ ಹಳ್ಳಿಗರ ಕಡೆ ನಮ್ಮ ಗಮನ ತಿರುಗಿತು. ಇನ್ನೂ ಗುಲಾಮಿ ಚಾಕರರ ಸುಳಿವು ಕಾಣಲಿಲ್ಲ. ಅವರು ಪುಕ್ಕಟೆ ಸಿಗುವ ಸುಲಭ ಸಾಮಾಗ್ರಿಗಳಂತೆ. ಅವರು ಬರದಿದ್ದರೆ, ಅದು ಅವರ ಹಣೆಬರಹ. ಯೋಚಿಸಿ ತಲೆನೋವು ತಂದುಕೊಳ್ಳುವುದು ಏನಿದೆ ? ಸೋತ ಆ ಇಬ್ಬರು ಸೈನಿಕರು, "ಮುಖಿ ಗುಲಾಮಿಗಳೆದುರು ನರಹೇಡಿ" ಎಂದು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದರು. ಮುಖಿಯನ್ನು ಹೆದರಿಸುವುದರಲ್ಲಿ ಪ್ರಯೋಜನವೇನಿದೆ ?

ನಾವು ಚಾಪೆ ಮೇಲೆ ಕುಳಿತಾಗಿನಿಂದ ಹಿಡಿದು, ಗುಲಾಮಿ ಚಾಕರರ ನಿರೀಕ್ಷೆಯಲ್ಲಿ ಸರಿದ ಕಾಲವನ್ನು ಹಿಮ್ಮತ್‌ಸಿಂಗ್ ಏನಾದರೂ ಲೆಕ್ಕ ಹಾಕಿದ್ದರೆ ಅವನ ತಾಳ್ಮೆ ನಿಜವಾಗಿಯೂ ಚೂರು ಚೂರಾಗುತ್ತಿತ್ತು. ರಾಜನಿಗೂ ಸಿಟ್ಟು ಬಂದಿರುತ್ತಿತ್ತು ನಮ್ಮನ್ನು ನಿರೀಕ್ಷಿಸಿ ಇಷ್ಟು ಹೊತ್ತು. ಆಮೇಲೆ, ಇಲ್ಲ, ಈ ಚಾಕರರು ಬರುವ ಬಗ್ಗೆ ಯಾವುದೇ ಭರವಸೆ ಇಲ್ಲ. ಪ್ರಾಯಶಃ ಈಗ ರಾಜ ನಮ್ಮನ್ನು ಹುಡುಕಲು ದಂಡನಾಯಕನನ್ನೇ ಕಳಿಸುವ ಸಂಭವ ಬಂದರೂ ಬರಬಹುದು ಎಂದೇನೂ ಊಹಿಸಿದ್ದೇನೋ ! ಅದು ಕೂಡ ನಿಜವಾಯಿತು. ದೂರದಲ್ಲಿ ಕುದುರೆಗಳ ಖುರಪುಟ ದನಿ ಕೇಳಿಸಿತು ಒಡನೆಯೇ. ದಂಡನಾಯಕ ತನ್ನ ಪಡೆಯೊಂದಿಗೆ ಬಂದ. ನಾವು ಕಳವಳಗೊಂಡೆವು. ದಂಡನಾಯಕ ಕುದುರೆಯಿಂದ ಕೆಳಗಿಳಿಯಲಿಲ್ಲ. ನಾವು ಗೌರವಾದರಗಳನ್ನು ಅರ್ಪಿಸಿದೆವು. ನಮ್ಮ ನಮನಗಳನ್ನು ನಿರ್ಲಕ್ಷಿಸಿದ ಆತ ನಮ್ಮತ್ತ ಪ್ರಶ್ನೆಯೊಂದನ್ನು ತೂರಿ :

"ಗುಲಾಮಿ ಚಾಕರರು ಎಲ್ಲಿದ್ದಾರೆ ?"

"ಮುಖಿ ಅವರನ್ನು ಕರೆತರಲು ಹೋಗಿದ್ದಾನೆ."

"ಆದರೆ ನೀವೇನು ಮಾಡುತ್ತಿರುವಿರಿ ಇಲ್ಲಿ ?"

ಹಿಮ್ಮತ್‌ಸಿಂಗ್‌ನಿಗೆ ಬೆದರಿಸುವ ಕಂಠದಲ್ಲಿ ದಂಡನಾಯಕ ಮಾತನಾಡಿದ. ಹಿಮ್ಮತ್‌ಸಿಂಗ್ ಅಡಿಯಿಂದ ಮುಡಿವರೆಗೂ ಥರಗುಟ್ಟಿದ. ಅವನನ್ನೇ ನೋಡಿದೆ ನಾನು. ಆದರೆ ಹಿಮ್ಮತ್‌ಸಿಂಗ್ ತನ್ನ ಕಣ್ಣುಗಳನ್ನು ಅವನೆಡೆ ವಿಮುಖಗೊಳಿಸಿಕೊಂಡು ತಲೆಬಾಗಿ ದಂಡನಾಯಕನ ಆಜ್ಞೆಗೆ ಕಾದು ನಿಂತ. ದಂಡನಾಯಕ ಕೋಪದಿಂದ ಕಣ್ಣು ಅಗಲಿಸಿದ, ಪುನಃ ಹಿಮ್ಮತ್ ಸಿಂಗ್ ಕಡೆ ತಿರುಗಿ, "ಯಾಕಿನ್ನೂ ಇಲ್ಲೇ ನಿಂತಿದ್ದೀ ? ಗುಲಾಮಿ ಚಾಕರರನ್ನು ಕರೆತರಲು ಹೋಗಲಾರೆಯಾ ಹಳ್ಳಿಗೆ ?"

ಮೇಘವಾಲರ ಹಟ್ಟಿಗೆ ನಾವೆಲ್ಲ ಪೇರಿ ಕಿತ್ತೆವು. ಹಿಮ್ಮತ್‌ಸಿಂಗ್‌ನ ಮುಖ ಬಿಳಿಚಿ ಕೊಂಡಿತ್ತು. ಹತ್ತಿರದಿಂದ ನಿಂತು ಅವನ ಮುಖ ನೋಡುವ ಅವಕಾಶ ನನಗೆ ಲಭಿಸಲಿಲ್ಲ. ನನ್ನ ಗಮನವೆಲ್ಲ ಮುಖಿಯತ್ತಲೇ ತಿರುಗಿತ್ತು. ಮುಖಿ ಸಹ ಗುಲಾಮಿ ಚಾಕರರೆದುರು ನಿಜವಾಗಿಯೂ ತನ್ನ ಸತ್ವ ಕಳೆದುಕೊಂಡಿದ್ದ ಎನ್ನುವುದನ್ನು ನಾನು ಖಚಿತಪಡಿಸಿಕೊಳ್ಳಬೇಕಿತ್ತು. ವಿಷಯ ಈಗ ಸಂಪೂರ್ಣ ಊಹಿಸಲಾಗದ ತಿರುವನ್ನು ಪಡೆದುಕೊಂಡಿತು. ಗುಲಾಮಿಗಳು ಮುಖಿಯೊಂದಿಗೆ ರಂಪಾಟ ಮಾಡುತ್ತಿದ್ದರು, ಮುಖಿ ಅವರನ್ನು ಸಮಾಧಾನಪಡಿಸಲು ಪ್ರಯತ್ನಿಸುತ್ತಿದ್ದ. ನಮ್ಮನ್ನು ಕಂಡೊಡನೆ, ಮುಖಿ ಇದ್ದಕ್ಕಿದ್ದಂತೆ ತನ್ನ ನಿಲುವನ್ನು ಬದಲಿಸಿದ. ತನ್ನ ಮುಖದ ಮೇಲೆ ಭಾರಿ ವಾಕ್ಸರಣಿಯನ್ನು ತಂದುಕೊಳ್ಳುತ್ತ:

"ನಡೀರಿ, ನಡೀರಿ, ಎಲ್ಲರೂ ! ಯಾರು ಧಿಕ್ಕರಿಸುತ್ತಾರೋ ಅವರನ್ನು ಚೌಕಕ್ಕೆ ಎಳೆದೊಯ್ದು ಬಗ್ಗಡದಲ್ಲಿ ಹಂದಿ ಉಳ್ಳಾಡೊ ತರಹ ಉಳ್ಳಾಡಿಸುತ್ತೇನೆ !" ಎಂದು ಆರ್ಭಟಿಸಿದ.

ನಾನೀಗ ಮುಖಿ ಹಾಗೂ ಗುಲಾಮಿ ಚಾಕರರನ್ನು ಒಬ್ಬರಾದ ಮೇಲೆ ಒಬ್ಬರನ್ನು ದಿಟ್ಟಿಸಿದೆ. ಹಿಮ್ಮತ್‌ಸಿಂಗ್ ಮೆಲ್ಲಗೆ ನನ್ನ ಕಡೆ ಬಂದ, ಅವನ ವದನ ಅವನ ಅಸಹಾಯಕತೆಗೆ ವಿಶ್ವಾಸ ದ್ರೋಹವೆಸಗಿತ್ತು. ಕ್ಷಣಹೊತ್ತು ಮುಖಿ ಮತ್ತು ಗುಲಾಮಿ ಚಾಕರರನ್ನು ಪಕ್ಕಕ್ಕಿಟ್ಟು ಹಿಮ್ಮತ್‌ಸಿಂಗ್‌ನ ಅಸಹಾಯಕತೆಯನ್ನು ಗಮನಿಸಿದೆ. ಹಿಮ್ಮತ್‌ಸಿಂಗ್‌ನನ್ನು ನೋಡುತ್ತಾ, ನೋಡುತ್ತಾ, ನಾನು ಅವನಿಗಿಂತ ದೊಡ್ಡವನೇ ಎಂದೆನಿಸಿತು. ಅವನು ನನ್ನ ದಾರಿಗೆ ತೊಡರುಗಾಲೆಂದು ನನಗೆ ಈಗಲೂ ಅನ್ನಿಸಿದೆ. ಆದರೆ ಅಂತಹ ಘಟನೆ ಎಂದೂ ಎದುರಾಗದೆಂಬ ಭರವಸೆಯೊಂದಿಗೆ ಆ ಗುಲಾಮಿ ಚಾಕರರು ಮತ್ತು ಮುಖಿಗಳ ನಡುವಿನ ವಾಕ್‌ಕಲಹವನ್ನು ನೋಡುತ್ತಾ ನಿಂತೆ. ದಿಢೀರನೆ, ಗುಲಾಮಿ ಚಾಕರರ ಮಾತುಕತೆಯ ಹಾವಭಾವ ಮುಖಿಯ ಮಧ್ಯಸ್ಥಿಕೆಯ ಮೂಲಕ ಹಾದುಹೋದದ್ದು ನನ್ನಲ್ಲಿ ಹೆಮ್ಮೆ ತಂದಿತು. ಗಾಳಿಯಲ್ಲಿ ನನ್ನ ಮುಷ್ಟಿ ಆಡಿಸುತ್ತಾ ಹಿಮ್ಮತ್‌ಸಿಂಗ್ ಮುಂದೆ ಹಿಡಿದೆ. ಎಂತಹ ತಮಾಷೆ ! ಎಂದೆಲ್ಲ ಯೋಚಿಸಿದೆ, ಗುಲಾಮಿ ಚಾಕರರು ಅಂತಿಮವಾಗಿ ಬರಲು ತಿರಸ್ಕರಿಸಿದರು ! ರಾಜಾಜ್ಞೆಗೆ ಕವಡೆ ಕಿಮ್ಮತ್ತು ದಕ್ಕಲಿಲ್ಲ.

ಗುಜರಾತಿ ಮೂಲ : **ಮೋಹನ ಪರ್‌ಮಾರ್**
ಕನ್ನಡಕ್ಕೆ : **ಸೊಂದಲಗೆರೆ ಲಕ್ಷ್ಮೀಪತಿ**
೧೨೩, ೭ನೇ ಅಡ್ಡರಸ್ತೆ, ಚಂದ್ರಾ ಬಡಾವಣೆ, ವಿಜಯನಗರ, ಬೆಂಗಳೂರು – ೫೬೦ ೦೪೦

# ಸೊಳ್ಳೆ

ನಿದ್ದೆಯನು ಕೆಡಿಸಿ
ಚುಚ್ಚಿ ಮೈಯನ್ನೆಲ್ಲ
ರಕ್ತ ಹೀರಿದ ಸೊಳ್ಳೆ
ಗಹಗಹಿಸಿ ನಗುತ್ತಿತ್ತು
ತೂತು ಬಿದ್ದಾ ಪರದೆ ತುದಿಯಲ್ಲಿ,
ರಕ್ತಬೀಜಾಸುರನಾಗಿ ಕುಳಿತು.
ರೇರೇಗಿ ಅಪ್ಪಚ್ಚಿಮಾಡಲು
ಎರಡು ಕೈಗಳನ್ನೆತ್ತಿ ಬಡಿಯಹೋದರೆ
ಸಿಕ್ಕೀತೆ ಕೈಯಿಗದು !
ಅತ್ತಲಿಂದಿತ್ತ
ಇತ್ತಲಿಂದತ್ತ
ಅಲೆದಾಡಿಸಿ
ಮರಳುಮಾಡುತ್ತ
ನಕ್ಕಿತ್ತು ಗಹಗಹಿಸಿ
ಸ್ವರ್ಣಹರಿಣದ ಹಾಗೆ.

೨
ದುರುಗುಟ್ಟಿ ನೋಡಿತು
ಬೆರಗಾದ ನನ್ನನ್ನು
ನಾನೆಲ್ಲಿ ಸಿಗಬಲ್ಲೆ ನಿನಗೆಂದಿತು
೩
ಸಿಕ್ಕಿಬಿದ್ದರೆ ಹೇಳು ಏಟಿಕುಳಗಳು ?
ಹುಲ್ಲುತಿಂದಂಥ ಮಂತ್ರಿವರರು ?
ಶವದಪೆಟ್ಟಿಗೆಗಳನು ಮತ್ತೆ
ರಸ್ತೆರಸ್ತೆಗಳನ್ನು ನುಂಗಿರುವ ಧೀರರು ?
ಯಾರೆಂದು ತಿಳಿದೆ ನನ್ನನ್ನು ?
ಮೀಸೆ ಕುಣಿಸಿತು.
೪
ಕಾಮರೂಪಿಣಿ ನಾನು
ಈಗಷ್ಟೆ ಸೊಳ್ಳೆಯಾಗಿರುವೆ ನಿನ್ನ ದೃಷ್ಟಿಗೆ
ಎಂದು ಗಹಗಹಿಸಿರಲು
ದಿಗಿಲಾದುದದು ನಿಜವೆ
ಧೈರ್ಯ ಚಿಗುರಿತು ಮತ್ತೆ
ಶಕುನಿ ತಂತ್ರಗಳನ್ನು ಮಣಿಸಿದ್ದ
ಶ್ವೇತಕೃಷ್ಣ ಕಾರಕನ ನೆನಪಾಗಿ.




**ಪ್ರೊ॥ ಜಿ. ಎಸ್. ಸಿದ್ಧಲಿಂಗಯ್ಯ**
ನಂ. ೨೦೩, 'ಲಲಿತ ಕೃಪ', ೭ನೇ 'ಎ' ಮುಖ್ಯರಸ್ತೆ
ಆರ್.ಪಿ.ಸಿ. ಲೇಔಟ್, ವಿಜಯನಗರ (ಪೂರ್ವ), ಬೆಂಗಳೂರು – ೪೦



# ಜನಾರೋಗ್ಯ ಸಾಧನೆಗೆ ಆಯುರ್ವೇದ ಹಾಗೂ ಆಧುನಿಕ ವೈದ್ಯಪದ್ಧತಿ

ಗಿಡಮೂಲಿಕೆ ಚಿಕಿತ್ಸೆಗಳು (ಹರ್ಬಲ್ ಮೆಡಿಸಿನ್ಸ್) ಪುರಾತನಕಾಲದಿಂದಲೂ ಬಳಕೆಯಲ್ಲಿವೆ. ಈ ಚಿಕಿತ್ಸಾ ವಿಧಾನವು ಋಗ್ವೇದ ಹಾಗೂ ಯಜುರ್ವೇದಗಳಿಗಿಂತ ಪ್ರಾಚೀನವಾದುದು. ಕ್ರಿ.ಶ. ಒಂದನೇ ಶತಮಾನದ ಸುಮಾರಿಗೆ ಚರಕ ಹಾಗೂ ಸುಶ್ರುತ ಎಂಬುವರು ಅಲ್ಲಿಯವರೆಗಿನ ಸಮಾಜದ ಅನುಭವವನ್ನು ಮೇಳೈಸಿ ಚಿಕಿತ್ಸಾ ವಿಧಾನವನ್ನು ಜಾರಿಗೊಳಿಸಿದರು. ಆ ಕುರಿತ ವಿವರಗಳು ಚರಕ ಹಾಗೂ ಸುಶ್ರುತ ಸಂಹಿತೆಗಳಲ್ಲಿ ದೊರಕುತ್ತವೆ. ಚರಕ ಸಂಹಿತೆ ಸುಮಾರು ಆರುನೂರು ಗಿಡಮೂಲಿಕೆಗಳನ್ನು ಬಳಸಿ ಆರೋಗ್ಯ ಸುಧಾರಣೆಗೆ ಪ್ರಯತ್ನಿಸುವ ವಿಧಾನವಾದರೆ, ಸುಶ್ರುತ ಸಂಹಿತೆ ಶಸ್ತ್ರಚಿಕಿತ್ಸೆಗೆ ಸಂಬಂಧಿಸಿದೆ. ಈ ಚಿಕಿತ್ಸಾ ಪದ್ಧತಿಗಳನ್ನು ಆಯುರ್ವೇದ ಪದ್ಧತಿಯೆಂದು ಕರೆಯಲಾಯಿತು. ಆಯುರ್ವೇದ ಪದ್ಧತಿಯಲ್ಲಿ ಕೇವಲ ಗಿಡಮೂಲಿಕೆಗಳ ಜೊತೆಗೆ ವಿವಿಧ ಖನಿಜಗಳನ್ನು ಹಾಗೂ ಪ್ರಾಣಿ ಪಕ್ಷಿಗಳ ಮಾಂಸವನ್ನೂ ಬಳಸಲಾಗುತ್ತಿತ್ತು. ಆಗಿನ ಹಂತದ ಆಯುರ್ವೇದದ ವಿಶೇಷತೆಗಳು ಹೀಗಿವೆ :

೧. ಅದು ಭೌತವಾದ ತತ್ವವನ್ನು ಆಧರಿಸಿದೆ.
೨. ಅದರಲ್ಲಿ ಚಿಕಿತ್ಸಕ ವೀಕ್ಷಣೆ, ರೋಗಿ ಪರೀಕ್ಷೆ ವಿಧಾನವನ್ನು ಬಳಸಲಾಗುತ್ತದೆ.
೩. ಈ ಚಿಕಿತ್ಸಾ ವಿಧಾನ ಒಬ್ಬ ವ್ಯಕ್ತಿಯ ಬುದ್ಧಿಶಕ್ತಿಯಿಂದ ರೂಪುಗೊಂಡಿರದೆ, ಹಲವಾರು ತಲೆಮಾರಿನ ಅನುಭವವನ್ನು ಆಧರಿಸಿದೆ.
೪. ಇದಕ್ಕೂ ಹಿಂದೆ, ರೋಗ ಚಿಕಿತ್ಸೆಯಲ್ಲಿ ಬಳಸಲಾಗುತ್ತಿದ್ದ ಮಂತ್ರ ತಂತ್ರ, ಮಾಟ ಮದ್ದು, ತಾಯತ, ಬಲಿ, ನೈವೇದ್ಯ, ಹೋಮ, ಪ್ರಾಯಶ್ಚಿತ್ತ, ಉಪವಾಸ, ಶಾಂತಿ, ಪೂಜೆ ಮುಂತಾದುವುಗಳ ಕುರಿತಂತೆ ಚರಕ ಹಾಗೂ ಸುಶ್ರುತ ಸಂಹಿತೆಯಲ್ಲಿ ಹೇಳಲಾಗಿಲ್ಲ. ಈ ಎಲ್ಲ ವಿಶೇಷತೆಗಳ, ಆಧಾರದ ಹಿನ್ನೆಲೆಯಲ್ಲಿ ಆಯುರ್ವೇದವು ತಾತ್ವಿಕವಾಗಿ ವೈಜ್ಞಾನಿಕ ವಿಧಾನವಾಗಿದೆ ಎಂದು ಹೇಳಬಹುದು.

ಅಂದಿನ ಕಾಲದಲ್ಲಿ ಸಮಾಜದಲ್ಲಿ ಪ್ರಬಲರಾಗಿದ್ದ ಧರ್ಮಶಾಸ್ತ್ರಜ್ಞರು ಈ ವಿಧಾನಕ್ಕೆ ವಿರೋಧ ವ್ಯಕ್ತಪಡಿಸುತ್ತಿದ್ದುದರಿಂದ ಆಯುರ್ವೇದ ಚಿಕಿತ್ಸಕರು "ಧರ್ಮ ಶಾಸ್ತ್ರಜ್ಞರ" ಕೆಂಗಣ್ಣಿಗೆ ಕಾರಣರಾಗಿದ್ದರು. ಚರಕ, ಸುಶ್ರುತ ಹಾಗೂ ನಂತರದ ಅನೇಕ ಚಿಕಿತ್ಸಕರು ತಮ್ಮ ವಿಧಾನವನ್ನು (ವೈಜ್ಞಾನಿಕ) ಮುಂದುವರಿಸಿಕೊಂಡು ಬಂದದ್ದಲ್ಲದೆ ಧರ್ಮಶಾಸ್ತ್ರಜ್ಞರಿಗೆ ಅಂಜಿ ಕುಳಿತುಕೊಳ್ಳದೆ ಆಯುರ್ವೇದ ಶಾಸ್ತ್ರದಲ್ಲಿನ ವಿಜ್ಞಾನದ ಅಂಶಗಳ ಉಳಿವಿಗೆ, ಬೆಳವಣಿಗೆಗೆ ಪ್ರಯತ್ನಿಸಿದರು ಎಂಬುದು ಹೆಮ್ಮೆಯ ವಿಷಯ.

ಡಾ|| ಪ್ರಕಾಶ್ ಸಿ. ರಾವ್

**ಆಧುನಿಕ ವೈಜ್ಞಾನಿಕ ಚಿಕಿತ್ಸಾ ಪದ್ಧತಿಗೆ ವಿಜ್ಞಾನದ ಕೊಡುಗೆ ಅಪಾರ. ಜೀವಕೋಶದ ಆವಿಷ್ಕಾರ, ಸೂಕ್ಷ್ಮ ಜೀವಾಣು ಆವಿಷ್ಕಾರ ಇವು ಆಧುನಿಕ ಚಿಕಿತ್ಸಾ ಪದ್ಧತಿಯನ್ನು ಎತ್ತರಕ್ಕೆ ತೆಗೆದುಕೊಂಡು ಹೋದವು. ಸಾವಿರಾರು ವರ್ಷಗಳಲ್ಲಿ ಜರುಗಿರುವ ಆವಿಷ್ಕಾರಗಳಿಂದಾಗಿ ಪಡೆದಿರುವ ಜ್ಞಾನ ಆಧುನಿಕ ಚಿಕಿತ್ಸಾ ಪದ್ಧತಿ ರೂಪುಗೊಳ್ಳಲು ಕಾರಣವಾಗಿದೆ. ಇತ್ತೀಚಿನ ನೂರು ವರ್ಷಗಳಲ್ಲಿ ಆಧುನಿಕ ವೈಜ್ಞಾನಿಕ ವೈದ್ಯ ಚಿಕಿತ್ಸೆಗಳು ಅಪಾರವಾಗಿ ಬೆಳೆದಿವೆ ಹಾಗೂ ಜಗತ್ತಿನ ಎಲ್ಲ ಮೂಲೆಯಲ್ಲೂ ಲಭ್ಯವಿವೆ. ಆಯುರ್ವೇದದಲ್ಲಿನ ಕೆಲವು ವಿಚಾರಗಳು ಜಾಹೀರಾತಿನ ಪ್ರಭಾವದಿಂದ ಉತ್ಪ್ರೇಕ್ಷೆಗೆ ಒಳಗಾಗಿವೆ ಹಾಗೂ ಆಧುನಿಕ ಚಿಕಿತ್ಸಾ ಪದ್ಧತಿಯನ್ನು ತಿರಸ್ಕರಿಸಲು ಮುಂದಾಗಿವೆ! ಈ ಆಯುರ್ವೇದದ ವಿಚಾರಗಳನ್ನು ಹಾಗೂ ಆಧುನಿಕ ವೈಜ್ಞಾನಿಕ ಚಿಕಿತ್ಸೆಯ ಸತ್ಯಾಸತ್ಯತೆಗಳನ್ನು ಹೋಲಿಸಿ ನೋಡುವ ಅಗತ್ಯವಿದೆ ಎನಿಸುತ್ತದೆ.**

೨೦೦೦ ವರ್ಷಗಳ ಹಿಂದೆಯೇ ಈ ವೈಜ್ಞಾನಿಕ ಚಿಕಿತ್ಸಾ ಪದ್ಧತಿ ಜಾರಿಗೆ ಬಂದಾಗ ಜಗತ್ತಿನ ಇನ್ನೆಲ್ಲೂ ಈ ವೈಜ್ಞಾನಿಕ ಚಿಕಿತ್ಸಾ ವಿಧಾನ ಜಾರಿಯಲ್ಲಿ ಇರಲಿಲ್ಲ ಎಂಬುದು ಗಮನಾರ್ಹ.

ಈ ಚಿಕಿತ್ಸಕರು ಪ್ರತ್ಯಕ್ಷ ಜ್ಞಾನದ ಪ್ರತಿಪಾದನೆಯಲ್ಲಿ ಎಷ್ಟೊಂದು ಎದೆಗಾರಿಕೆ ಉಳ್ಳವರಾಗಿದ್ದರೆಂದರೆ, ಪ್ರಜ್ಞಾಪೂರ್ವಕವಾಗಿಯೇ ಶಾಸ್ತ್ರ ವಿಧಾನವನ್ನು ಉಲ್ಲಂಘಿಸಲು ಹಿಂದೆಮುಂದೆ ನೋಡುತ್ತಿರಲಿಲ್ಲ. ಆದರೆ ಆಯುರ್ವೇದದಲ್ಲಿ ಪ್ರಾರಂಭದಲ್ಲಿ ಕಂಡುಬಂದ ಸಂಶೋಧನಾ ಪ್ರಕ್ರಿಯೆ ಕಾಲಕ್ರಮೇಣ ಅವನತಿಯತ್ತ ಸಾಗಿತು.

ಈ ಕಾರಣದಿಂದಾಗಿ ವೈಜ್ಞಾನಿಕ ವೈದ್ಯಪದ್ಧತಿ ಅಥವಾ ವೈದ್ಯಕೀಯ ವಿಜ್ಞಾನ ಹೆಚ್ಚು ಪರಿಣಾಮಕಾರಿಯಾಗತೊಡಗಿತು. ಮತ್ತು ಜಗತ್ತಿನೆಲ್ಲೆಡೆ ಪಸರಿಸಿತು. ಸಾಮಾನ್ಯವಾಗಿ ಇದನ್ನು ಅಲೋಪತಿ ಅಥವಾ ಇಂಗ್ಲಿಷ್ ಮೆಡಿಸಿನ್ ಎಂದು ಕರೆಯುವ ವಾಡಿಕೆ ಇದೆ. ಇದು ಪೂರ್ಣ ತಪ್ಪು ತಿಳುವಳಿಕೆ. ಏಕೆಂದರೆ ವೈಜ್ಞಾನಿಕ ವೈದ್ಯ ಜಗತ್ತಿನ ವಿವಿಧ ಭಾಗಗಳ ಚಿಕಿತ್ಸೆ ಅನುಭವ, ಗಿಡಮೂಲಿಕೆಗಳನ್ನು ಸಂಶೋಧನೆಗೊಳಪಡಿಸಿ ತನ್ನಲ್ಲಿ ಮೇಳೈಸಿಕೊಂಡಿದೆ.

ಆಯುರ್ವೇದ ಈ ಮಹತ್ವದ ಬೆಳವಣಿಗೆಗಳಿಂದ ವಂಚಿತವಾಯಿತು. ಆದ್ದರಿಂದಲೇ ಈಗ ಆಯುರ್ವೇದ ಪದ್ಧತಿಯ ವೈದ್ಯರು ಕೂಡ ವೈಜ್ಞಾನಿಕ ವೈದ್ಯಕೀಯ ಚಿಕಿತ್ಸೆಯ ವಿಧಾನಗಳನ್ನು ಹಾಗೂ ಔಷಧಿಗಳನ್ನು ಪ್ರತ್ಯಕ್ಷವಾಗಿಯೋ, ಪರೋಕ್ಷವಾಗಿಯೋ ಬಳಸುವುದು ಅನಿವಾರ್ಯವಾಗಿದೆ. ಹೀಗೆ ಇಂದು ಬಹಳಷ್ಟು ಆಯುರ್ವೇದ ವೈದ್ಯರು ಶುದ್ಧ ಆಯುರ್ವೇದದ ಚಿಕಿತ್ಸೆ ಪದ್ಧತಿಗಳನ್ನು ಬಳಸುವವರಾಗಿಲ್ಲ.

ಚರಕ, ಸುಶ್ರುತರ ಕಾಲದ ನಂತರ ಅವರ ಚಿಕಿತ್ಸಾ ವಿಧಾನಗಳನ್ನನುಸರಿಸಿ ಆಯುರ್ವೇದವನ್ನು ಬೆಳೆಸುವ ಕೆಲಸ ಆಗಲಿಲ್ಲ. ಆಗ ಆಯುರ್ವೇದಕ್ಕೂ ಹಿಂದಿದ್ದ ಅನೇಕ ಚಿಕಿತ್ಸಾ ವಿಧಾನಕ್ಕೆ ಹೊರತಾದ ನಂಬಿಕೆಗಳು ನುಸುಳಿಕೊಂಡು ಬಂದವು ಹಾಗೂ ಅದು ಮಧ್ಯಯುಗದವರೆಗೆ ಮುಂದುವರಿದವು. ಹೀಗೆ ಒಂದು ಉತ್ತಮ ಚಿಕಿತ್ಸಾ ಪದ್ಧತಿ ಮುಂದುವರಿಯುತ್ತ ಬೆಳೆದು ನಮ್ಮ ಆರೋಗ್ಯ ರಕ್ಷಣೆಯ ಹೊಣೆ ಹೊರುವ ಅವಕಾಶ ತಪ್ಪಿಹೋಯಿತು. ಈ ಕಾಲಾವಧಿಯಲ್ಲಿ ವಿಶ್ವವ್ಯಾಪಿ ನಡೆದ ನಾವಿಕ ಸಾಹಸಯಾತ್ರೆಗಳು ಭಾರತವೂ ಸೇರಿದಂತೆ ಜಗತ್ತಿನ ಅನೇಕ ಭಾಗಗಳಲ್ಲಿ ಲಭ್ಯವಿದ್ದ ಸಸ್ಯ, ಪ್ರಾಣಿ ಪ್ರಲೋಭಗಳ ಸಂಗ್ರಹಕ್ಕೆ ಕಾರಣವಾದವು. ಅಂತೆಯೇ ಚಿಕಿತ್ಸಾ ಪದ್ಧತಿಗಳು ಕೂಡ ಪರಿಚಯವಾದವು. ಇವೆಲ್ಲವುಗಳಿಂದ ವೈಜ್ಞಾನಿಕ ಅನ್ವೇಷಣೆಗಳು ದಾಪುಗಾಲು ಹಾಕಿದವು. ಅವು ಜೀವಜಗತ್ತಿನ ಬಗೆಗೆ ಹಾಗೂ ಅದಕ್ಕೆ ಸಂಬಂಧಿಸಿದಂತೆ ಮನುಷ್ಯ ದೇಹದ ರಚನೆ ಮತ್ತು ಕ್ರಿಯೆಯ ಬಗೆಗೆ ಹೊಸ ಬೆಳಕು ಚೆಲ್ಲಿದವು. ಸೂಕ್ಷ್ಮದರ್ಶಕದ ಆವಿಷ್ಕಾರದಿಂದಾಗಿ ಮನುಷ್ಯ ಶರೀರವೂ ಸೇರಿದಂತೆ ಎಲ್ಲ ಜೀವಿಗಳ ಶರೀರವೂ ಜೀವಕೋಶಗಳಿಂದ ಕೂಡಿದೆ ಮತ್ತು ವೈರಸ್, ಬ್ಯಾಕ್ಟೀರಿಯಾಗಳಂತಹ ಸೂಕ್ಷ್ಮಜೀವಿಗಳು ಮನುಷ್ಯನ ಅನೇಕ ರೋಗಗಳಿಗೆ ಕಾರಣವಾಗಿರುತ್ತವೆ ಎಂಬುದು ಸಾಬೀತಾಯಿತು. ಈ ಸೂಕ್ಷ್ಮಜೀವಿಗಳನ್ನು ಈ ಜೀವಜಗತ್ತಿನಲ್ಲಿಯೇ ಲಭ್ಯವಿರುವ ಜೈವಿಕ ವಸ್ತುಗಳು ನಿಯಂತ್ರಿಸುತ್ತವೆ ಎಂಬ ಮಹತ್ವದ ಆವಿಷ್ಕಾರಗಳು ವೈಜ್ಞಾನಿಕ ವೈದ್ಯಕೀಯಕ್ಕೆ ಬುನಾದಿ ಹಾಕಿದವು. ಪ್ರತಿಯೊಂದಕ್ಕೂ ಇರುವ ಪರಸ್ಪರ ಕಾರ್ಯಕಾರಣ ಸಂಬಂಧ ಹೆಚ್ಚು ಹೆಚ್ಚು ಸ್ಪಷ್ಟವಾಗುತ್ತಾ ಹೋಯಿತು.

ಆಧುನಿಕ ವೈಜ್ಞಾನಿಕ ಚಿಕಿತ್ಸಾ ಪದ್ಧತಿಗೆ ವಿಜ್ಞಾನದ ಕೊಡುಗೆ ಅಪಾರ. ಜೀವಕೋಶದ ಆವಿಷ್ಕಾರ, ಸೂಕ್ಷ್ಮ ಜೀವಾಣು ಆವಿಷ್ಕಾರ ಇವು ಆಧುನಿಕ ಚಿಕಿತ್ಸಾ ಪದ್ಧತಿಯನ್ನು ಎತ್ತರಕ್ಕೆ ತೆಗೆದುಕೊಂಡು ಹೋದವು. ಸಾವಿರಾರು ವರ್ಷಗಳಲ್ಲಿ ಜರುಗಿರುವ ಆವಿಷ್ಕಾರಗಳಿಂದಾಗಿ ಪಡೆದಿರುವ ಜ್ಞಾನ ಆಧುನಿಕ ಚಿಕಿತ್ಸಾ ಪದ್ಧತಿ ರೂಪುಗೊಳ್ಳಲು ಕಾರಣವಾಗಿದೆ. ಇತ್ತೀಚಿನ ನೂರು ವರ್ಷಗಳಲ್ಲಿ ಆಧುನಿಕ ವೈಜ್ಞಾನಿಕ ವೈದ್ಯ ಚಿಕಿತ್ಸೆಗಳು ಅಪಾರವಾಗಿ ಬೆಳೆದಿವೆ ಹಾಗೂ ಜಗತ್ತಿನ ಎಲ್ಲ ಮೂಲೆಯಲ್ಲೂ ಲಭ್ಯವಿವೆ.




ಆಯುರ್ವೇದದಲ್ಲಿನ ಕೆಲವು ವಿಚಾರಗಳು ಜಾಹೀರಾತಿನ ಪ್ರಭಾವದಿಂದ ಉತ್ಪ್ರೇಕ್ಷೆಗೆ ಒಳಗಾಗಿವೆ ಹಾಗೂ ಆಧುನಿಕ ಚಿಕಿತ್ಸಾ ಪದ್ಧತಿಯನ್ನು ತಿರಸ್ಕರಿಸಲು ಮುಂದಾಗಿವೆ! ಈ ಆಯುರ್ವೇದದ ವಿಚಾರಗಳನ್ನು ಹಾಗೂ ಆಧುನಿಕ ವೈಜ್ಞಾನಿಕ ಚಿಕಿತ್ಸೆಯ ಸತ್ಯಾಸತ್ಯತೆಗಳನ್ನು ಹೋಲಿಸಿ ನೋಡುವ ಅಗತ್ಯವಿದೆ ಎನಿಸುತ್ತದೆ.

**೧. ಆಯುರ್ವೇದ ಆಯಸ್ಸನ್ನು ಹೆಚ್ಚಿಸುತ್ತದೆ!**

ಆಯುರ್ವೇದವನ್ನು ಜೀವ ಹಾಗೂ ದೀರ್ಘ ಬಾಳಿನ ವಿಜ್ಞಾನ ಎಂದು ಕೆಲವರು ಹೇಳುತ್ತಾರೆ! ಇದಕ್ಕೆ ಒಂದು ದೃಷ್ಟಾಂತವನ್ನು ನೀಡುತ್ತಾರೆ. ಪಾಶ್ಚಾತ್ಯ (ಬೈಬಲ್ ಆಧಾರಿತ) ಶಾಸ್ತ್ರದಲ್ಲಿ ಮಾನವನ ಆಯಸ್ಸು ೭೦ ವರ್ಷ. ಆದರೆ ಆಯುರ್ವೇದದ ಪ್ರಕಾರ ನೂರು ವರ್ಷ. ಅಂದರೆ ವ್ಯಕ್ತಿಯೊಬ್ಬ ೨೫ ವರ್ಷ ಬ್ರಹ್ಮಚರ್ಯದಲ್ಲಿ, ೨೫ ವರ್ಷ ಯೌವನದಲ್ಲಿ, ೨೫ ವರ್ಷ ವಾನಪ್ರಸ್ತ ಹಾಗೂ ೨೫ ವರ್ಷ ಸನ್ಯಾಸದಲ್ಲಿ ಕಳೆಯುತ್ತಾನೆ ಎಂದು ಹೇಳಲಾಗಿದೆ. ವಾಸ್ತವವಾಗಿ ನೋಡಿದರೆ ಇದು ಕೇವಲ ಹೇಳಿಕೆಯೇ ಹೊರತು ನಿಜ ಜೀವನದಲ್ಲಿ ಆಗುವುದೇ ಬೇರೆ. ಈ ವಿಷಯ ನಂಬಿಕೆಯ ಪ್ರಶ್ನೆಯೇ? ಭಾರತೀಯನ ಸರಾಸರಿ ವಯಸ್ಸು ಪಾಶ್ಚಿಮಾತ್ಯನಿಗಿಂತ ಹೆಚ್ಚೇ? ಎಂಬ ಪ್ರಶ್ನೆಗಳಿಗೆ ಆಯುರ್ವೇದ ಉತ್ತರಿಸಲು ಸಾಧ್ಯವೇ?

ನಮಗೆ ತಿಳಿದಿರುವಂತೆ ಭಾರತೀಯರ ಸರಾಸರಿ ವಯಸ್ಸು, ೧೯೪೭ರ ಸ್ವಾತಂತ್ರ್ಯ ಸಮಯದಲ್ಲಿ, ೩೨ ವರ್ಷ ಎಂದು ದಾಖಲಾಗಿದೆ. ಆದರೆ ೨೦೦೦ದ ಹೊತ್ತಿಗೆ ಅದು ೭೦ ವರ್ಷಕ್ಕೆ ಏರಿತ್ತು. ಇದಕ್ಕೆ ಮುಖ್ಯ ಕಾರಣ ವಿಜ್ಞಾನ ಕ್ಷೇತ್ರದಲ್ಲಾದ ಆವಿಷ್ಕಾರಗಳು ಮತ್ತು ಬೆಳವಣಿಗೆ.

**೨. ಆಯುರ್ವೇದ ಚಿಕಿತ್ಸೆಯಲ್ಲಿ ಆಹಾರಕ್ಕೆ ಹೆಚ್ಚು ಒತ್ತು ಕೊಡಲಾಗುತ್ತದೆ**

ವೈಜ್ಞಾನಿಕ ಆರೋಗ್ಯ ಪದ್ಧತಿಯಲ್ಲಿ ಸಕ್ಕರೆ ಕಾಯಿಲೆ, ಬೊಜ್ಜು, ರಕ್ತದ ಏರೊತ್ತಡ, ಅಪೌಷ್ಟಿಕತೆ, ಮೂತ್ರಪಿಂಡದ ವೈಫಲ್ಯ ಮುಂತಾದ ರೋಗಗಳಿಂದ ಬಳಲುವವರಿಗೆ ಮಾತ್ರ ಆಹಾರ ಪಥ್ಯೆಯನ್ನು ವಿಧಿಸಲಾಗುತ್ತದೆ. ಆಧುನಿಕ ಆಹಾರ ವಿಜ್ಞಾನ, ಆಹಾರವನ್ನು ಏಳು ಗುಂಪುಗಳಾಗಿ ವಿಂಗಡಿಸಿದೆ. ಯಾವ ಆಹಾರ ಪದಾರ್ಥದಲ್ಲಿ ಯಾವ ಆಹಾರ ಘಟಕ ಎಷ್ಟು ಪ್ರಮಾಣದಲ್ಲಿರುತ್ತದೆ ಎಂದು ಗುರುತಿಸಲಾಗಿದೆ. ಆದರೆ ಆಯುರ್ವೇದದಲ್ಲಿ ಆಹಾರವನ್ನು ರಾಜಸಿಕ, ತಾಮಸಿಕ, ಸಾತ್ವಿಕ ಎಂದು ಗುರುತಿಸಲಾಗಿದೆ. ಇದಲ್ಲದೆ, ಆಹಾರವನ್ನು ಉಷ್ಣ ಹಾಗೂ ಶೀತವೆಂದು ವಿಂಗಡಿಸಲಾಗಿದ್ದರೂ ಇದಕ್ಕೆ ಯಾವ ಆಧಾರವಿದೆ ಎಂದು ಹೇಳಿಲ್ಲ.

ಭಾರತದಲ್ಲಿ ಇತ್ತೀಚಿನ ದಿನಗಳಲ್ಲಿ ಜನಸಂಖ್ಯೆ ಸ್ಫೋಟವಾಗಿರುವುದು ಎಲ್ಲರಿಗೂ ತಿಳಿದ ವಿಷಯ. ವಿಜ್ಞಾನ ಕ್ಷೇತ್ರದಲ್ಲಾದ ಹೊಸ ಆವಿಷ್ಕಾರಗಳು ಮತ್ತು ಹಸಿರು ಕ್ರಾಂತಿಯಿಂದಾಗಿ ಆಹಾರ ಧಾನ್ಯಗಳ ಲಭ್ಯತೆ ಅಪಾರವಾಗಿ ಹೆಚ್ಚಿದೆ, ಆದರೆ ರಾಜಕೀಯ ಕಾರಣಗಳಿಂದಾಗಿ ಜನರು ಕೊಳ್ಳುವ ಸಾಮರ್ಥ್ಯ ಇಳಿಮುಖ ಕಂಡಿದೆ. ಪರಿಣಾಮ ಅಪೌಷ್ಟಿಕತೆಗೆ ಒಳಗಾಗುತ್ತಿದ್ದಾರೆ. ಅದಕ್ಕೆ ಪರಿಹಾರವನ್ನೂ ಸೂಚಿಸಲಾಗಿದೆ. ಆದರೆ ಈ ಪ್ರಕ್ರಿಯೆ ಆಯುರ್ವೇದಕ್ಕೆ ಹೊಸದು ಅಥವಾ ಈ ಚಿಂತನೆ ಆಯುರ್ವೇದದಲ್ಲಿ ಇಲ್ಲವೇ ಇಲ್ಲ ಎಂದು ಹೇಳಬಹುದು.

**೩. ಆಯುರ್ವೇದದಲ್ಲಿ ಈ ಕೆಳಗಿನ ಅಂಶಗಳನ್ನು ಸಾಧಿಸಬಹುದು ಎಂದು ಹೇಳಲಾಗುತ್ತದೆ**

ದೀರ್ಘಾಯಸ್ಸು ಪಡೆಯುವುದು, ನೆನಪಿನ ಶಕ್ತಿಯನ್ನು ಹೆಚ್ಚಿಸುವುದು, ಬುದ್ಧಿಶಕ್ತಿಯನ್ನು ಹೆಚ್ಚಿಸುವುದು, ಯೌವನವನ್ನು ಕಾಪಾಡಿಕೊಳ್ಳುವುದು, ಚರ್ಮದ ಹೊಳಪನ್ನು ಹೆಚ್ಚಿಸುವುದು, ಧ್ವನಿಯನ್ನು ಉತ್ತಮಗೊಳಿಸುವುದು, ದೇಹದ ಶಕ್ತಿಯನ್ನು ಹೆಚ್ಚಿಸುವುದು, ಜ್ಞಾನೇಂದ್ರಿಯಗಳ ಸಾಮರ್ಥ್ಯವನ್ನು ಹೆಚ್ಚಿಸುವುದು, ಇವೆಲ್ಲ ಹೇಳಿಕೆಗಳಷ್ಟೇ ಎಂದೆನಿಸುವುದಿಲ್ಲವೇ? ವೈಜ್ಞಾನಿಕ ವೈದ್ಯಶಾಸ್ತ್ರ ಇವಾವುದನ್ನೂ ಸಾಧಿಸುವುದರ ಬಗ್ಗೆ ಘೋಷಣೆ ಮಾಡುವುದಿಲ್ಲ. ಇವುಗಳನ್ನು ಗಳಿಸಲು ಒಂದು ವಾಸ್ತವದ ಮಿತಿಯಲ್ಲಿ ಸಾಧ್ಯವಾದಷ್ಟುಮಟ್ಟಿಗೆ ಪ್ರಯತ್ನವನ್ನು ಮಾಡುತ್ತೇವೆಂದು ವೈದ್ಯರು ಹೇಳುತ್ತಾರೆ. ಇವಾವುವೂ ಸಾಧ್ಯವಿಲ್ಲ.

**೪. ಆಯುರ್ವೇದ ಸಂಪೂರ್ಣ ಆರೋಗ್ಯ ವಿಧಾನ (ಹೋಲಿಸ್ಟಿಕ್ ಹೆಲ್ತ್ ಸಿಸ್ಟಮ್) ಎಂದು ಹೇಳಲಾಗುತ್ತದೆ**

ಆಯುರ್ವೇದ ವಿಧಾನದಲ್ಲಿ ಕೇವಲ ರೋಗ ಚಿಕಿತ್ಸೆಗೆ ಮುಂದಾಗದೆ ವ್ಯಕ್ತಿಯ ದೈಹಿಕ ಹಾಗೂ ಮಾನಸಿಕ ಆರೋಗ್ಯವನ್ನು ಸುಧಾರಿಸಲು ಪ್ರಯತ್ನಿಸಲಾಗುವುದು ಎಂದು ಹೇಳುವುದುಂಟು. ವಿಜ್ಞಾನ ಹೊಸ ಆವಿಷ್ಕಾರಗಳೆಲ್ಲವನ್ನೂ ಸಾಧಿಸಲು ಸಾಧ್ಯವೇ ? ಈ ಪ್ರಶ್ನೆಯನ್ನು ಹಾಕಿಕೊಳ್ಳುವುದರ ಮೂಲಕ ವೈಜ್ಞಾನಿಕ ವೈದ್ಯ ಪದ್ಧತಿಯನ್ನು ಮಾತ್ರ ಸಂಪೂರ್ಣ ಆರೋಗ್ಯ ವಿಧಾನವೆಂದು ಹೇಳಲು ಸಾಧ್ಯ. ಆ ದಿಶೆಯಲ್ಲಿ ಈ ಕೆಳಗಿನ ಅಂಶಗಳನ್ನು ಗಮನಿಸಿ :

ಕುಟುಂಬ ವೈದ್ಯನು ದೈಹಿಕ, ಮಾನಸಿಕ, ಸಾಮಾಜಿಕ ದೃಷ್ಟಿಯಿಂದ ರೋಗಿಯನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತಾನೆ. ಹಾಗೂ ನೆಗಡಿಯಿಂದ ಕ್ಯಾನ್ಸರ್‌ವರೆಗಿನ ಎಲ್ಲ ಸಮಸ್ಯೆಗಳಿಗೂ ಪರಿಹಾರ ನೀಡುವಷ್ಟು ಅನುಭವ ಪಡೆದಿರುತ್ತಾನೆ. ಅಲ್ಲದೆ, ಗರ್ಭಿಣಿಯ ಗರ್ಭದಲ್ಲಿರುವ ಶಿಶುವಿನಿಂದ ಹಿಡಿದು ವೃದ್ಧರ ಎಲ್ಲ ಆರೋಗ್ಯ ಸಮಸ್ಯೆಗಳನ್ನು ಪರಿಹರಿಸುವ ಜವಾಬ್ದಾರಿ ವಹಿಸಿಕೊಳ್ಳುತ್ತಾನೆ. ಅಗತ್ಯ ಎನಿಸಿದರೆ ವಿಶೇಷ ಪರೀಕ್ಷೆಗಳು (ರಕ್ತಪರೀಕ್ಷೆ, ಎಕ್ಸರೇ, ಸ್ಕ್ಯಾನಿಂಗ್) ವಿಶೇಷಜ್ಞರ ಸಲಹೆಗಳು, ಶಸ್ತ್ರಚಿಕಿತ್ಸೆ ಮುಂತಾದುವುಗಳಿಗೆ ವ್ಯವಸ್ಥೆ ಮಾಡುತ್ತಾನೆ. ಇದಾವುದರ ಅಗತ್ಯವಿಲ್ಲ ಎನಿಸಿದರೆ, ರೋಗ ನಿವಾರಣೆ ಮತ್ತು ಅದಕ್ಕೆ ಬೇಕಾದ ಚಿಕಿತ್ಸೆಯ ಬಗ್ಗೆ ಅಗತ್ಯ ಮಾಹಿತಿ ನೀಡುತ್ತಾನೆ. ಆಪ್ತಸಮಾಲೋಚನೆಯು ಈಗಿನ ದಿನಗಳಲ್ಲಿ ಚಿಕಿತ್ಸೆಯ ಒಂದು ಪ್ರಮುಖ ಭಾಗವಾಗಿದೆ.

**ರೋಗ ತಡೆಗಟ್ಟುವಿಕೆ, ಆರೋಗ್ಯವರ್ಧನೆ ಹಾಗೂ ಪುನರ್ವಸತಿ ಚಿಕಿತ್ಸೆ**

ರೋಗ ತಡೆಗಟ್ಟುವಿಕೆ – ಲಸಿಕೆಗಳ ಉಪಯೋಗ

ಆರೋಗ್ಯವರ್ಧನೆ – ಆಹಾರ/ವ್ಯಾಯಾಮಕ್ಕೆ ಪ್ರೋತ್ಸಾಹ

ಪುನರ್ವಸತಿ – ದೈಹಿಕ ಚಿಕಿತ್ಸೆ (ಫಿಸಿಯೊಥೆರಪಿ)ಗೆ ಪ್ರೋತ್ಸಾಹ

ಪ್ರಾಥಮಿಕ, ದ್ವಿತೀಯ ಹಾಗೂ ತೃತೀಯ ಚಿಕಿತ್ಸಾ ಪದ್ಧತಿಗಳಿರುತ್ತವೆ. ಈ ಎಲ್ಲ ಕ್ರಮಗಳು ಆಧುನಿಕ ವೈದ್ಯಪದ್ಧತಿಯಲ್ಲಿ ಜಾರಿಯಲ್ಲಿವೆ. ದೈಹಿಕ, ಮಾನಸಿಕ ಹಾಗೂ ಸಾಮಾಜಿಕ ಸುಸ್ಥಿತಿಯೇ ಆರೋಗ್ಯ ಎಂದು ವಿಶ್ವ ಆರೋಗ್ಯ ಸಂಸ್ಥೆ ಹೇಳುತ್ತದೆ. ವೈಜ್ಞಾನಿಕ ವೈದ್ಯ ಪದ್ಧತಿ ಆ ಆಧಾರದ ಮೇಲೆ ಸಂಪೂರ್ಣ ಆರೋಗ್ಯ ನೀಡಲು ಮುಂದಾಗಿದೆ. ಆಯುರ್ವೇದದಲ್ಲಿ ದೈಹಿಕ ಸುಸ್ಥಿತಿಗೆ ಯೋಗ ಬಹಳ ಮುಖ್ಯವಾದದ್ದು ಎಂದು ಹೇಳಲಾಗುತ್ತದೆ. ಯೋಗ ವಿವಿಧ ದೈಹಿಕ ವ್ಯಾಯಾಮಗಳಿಗಿಂತ ಭಿನ್ನವೇನಲ್ಲ. ಉತ್ಪ್ರೇಕ್ಷೆಯ ಹೇಳಿಕೆಗಳನ್ನು ನೀಡುವುದರ ಮೂಲಕ ಅದನ್ನೊಂದು ವಿಶೇಷ ಚಿಕಿತ್ಸೆಯೆಂದು ವ್ಯಾಖ್ಯಾನಿಸಲಾಗಿದೆ. "ಯೋಗ ಮಾಡಿದರೆ ಹೃದಯ ರೋಗಗಳು ಸಂಪೂರ್ಣವಾಗಿ ಗುಣವಾಗುತ್ತದೆಂದು" ರಾಷ್ಟ್ರ ಮಟ್ಟದ ಖ್ಯಾತಿ ಪಡೆದಿರುವ ಗುರುಗಳು ಮೇಲಿಂದ ಮೇಲೆ ಹೇಳಿಕೆ ನೀಡುತ್ತಲೇ ಇರುತ್ತಾರೆ. ಆದರೆ ಆ ಹೇಳಿಕೆಯಲ್ಲಿ ಯಾವುದೇ ಅರ್ಥವಿಲ್ಲವೆಂದು ಯೋಗ ಶಿಕ್ಷಕರೇ ಹೇಳುತ್ತಾರೆ !

ಆಯುರ್ವೇದವು ದೈಹಿಕ ಹಾಗೂ ಮಾನಸಿಕ ಸಮನ್ವಯ ಸಾಧಿಸಲು ಪ್ರಯತ್ನಿಸುತ್ತದೆ ಎಂದು ಹೇಳಲಾಗುತ್ತದೆ. ಆದರೂ ಅದು ಮಾನಸಿಕ ಒತ್ತಡ ಹಾಗೂ ಮಾನಸಿಕ ರೋಗಗಳನ್ನು ಗುರುತಿಸುವುದೇ ಇಲ್ಲ. ಸಾಮಾಜಿಕ ಸುಸ್ಥಿತಿ ಈ ಪದ್ಧತಿಗೆ ಗೊತ್ತೇ ಇಲ್ಲ !

**೫. ಆಯುರ್ವೇದ ದೇಹದ ರಕ್ಷಣೆಗೆ, ಅದೇ ವೇಳೆ ಆಧುನಿಕ ವೈದ್ಯ ಪದ್ಧತಿ ದೇಹಕ್ಕೆ ಅಪಚಾರ ಎಸಗುತ್ತವೆ**

ಈ ರೀತಿಯ ಹೋಲಿಕೆ ಅಸಂಬದ್ಧ. ಆಧುನಿಕ ವೈದ್ಯ ಪದ್ಧತಿಯ ಉಪಯುಕ್ತತೆಯನ್ನು ಸಿದ್ಧಪಡಿಸುವ ಅಗತ್ಯತೆ ಇಲ್ಲ, ಕಾರಣ ಆಧುನಿಕ ವೈದ್ಯ ಪದ್ಧತಿ ವ್ಯಾಪಕವಾಗಿ ಲಭ್ಯವಿದೆ. ಆದರೆ ಅದು ದುರುಪಯೋಗಗೊಳ್ಳುತ್ತಿದೆ. ಉದಾಹರಣೆಗೆ, ರೋಗಿಗೆ ಅನಗತ್ಯ ವೈದ್ಯಕೀಯ ಪರೀಕ್ಷೆಗಳನ್ನು ಮಾಡಿಸಿ ಕೊಳ್ಳಲು ಸೂಚಿಸುವುದು ಮತ್ತು ಅನಗತ್ಯ ಶಸ್ತ್ರಚಿಕಿತ್ಸೆಯನ್ನು ಮಾಡುವುದು. ಈ ದುರ್ಬಳಕೆಗೆ ಮುಖ್ಯ ಕಾರಣ ಜಾಗತೀಕರಣ ಖಾಸಗೀಕರಣ ನೀತಿಗಳು. ಹಾಗೂ ನೀತಿಬಾಹಿರ ಕೃತ್ಯಗಳನ್ನು ಎಸಗಲು ಮುಂದಾಗಿರುವ ಕೆಲ ವೈದ್ಯರು. ಇಲ್ಲಿ ಇನ್ನೊಂದು ವಿಷಯವನ್ನು ಗಮನಿಸಬೇಕು. ಆಯುರ್ವೇದದಲ್ಲಿ ತರಬೇತಿ ಹೊಂದಿದ ವೈದ್ಯರು ಆಧುನಿಕ ವೈದ್ಯ ಪದ್ಧತಿಯ ಔಷಧಿಗಳನ್ನು ಉಪಯೋಗಿಸುತ್ತಾರೆ. ಆಧುನಿಕ ವೈದ್ಯ ಪದ್ಧತಿ ವೈದ್ಯರು ಆಯುರ್ವೇದ ಔಷಧಿಗಳನ್ನು ಉಪಯೋಗಿಸುವುದಕ್ಕಿಂತ ಆಯುರ್ವೇದದ ವೈದ್ಯರು ಆಧುನಿಕ ವೈದ್ಯರ ಔಷಧಿಗಳನ್ನು ಬಳಸುವುದೇ ಹೆಚ್ಚು. ಇದನ್ನು ಸರ್ವೋಚ್ಚ ನ್ಯಾಯಾಲಯ ಖಂಡಿಸಿದೆ.

**೬. ಆಯುರ್ವೇದ ಪದ್ಧತಿ ಆರೋಗ್ಯದ ಬಗ್ಗೆ ಗಮನಹರಿಸುತ್ತದೆ. ಆದರೆ ಆಧುನಿಕ ವೈದ್ಯ ಪದ್ಧತಿ ರೋಗದ ಬಗ್ಗೆ ಮಾತ್ರ ಗಮನಹರಿಸುತ್ತದೆ**

ಇದು ಅರ್ಥಹೀನ. ವ್ಯಕ್ತಿ ಆಧುನಿಕ ವೈದ್ಯನಲ್ಲಿಗೆ ರೋಗ ಗುಣಪಡಿಸಿಕೊಳ್ಳಲು ಬರುತ್ತಾನೆ, ನಿಜ. ವೈದ್ಯ ಆರೋಗ್ಯ ಸುಧಾರಣೆ ಬಗ್ಗೆ ವೈಜ್ಞಾನಿಕ ಮಾಹಿತಿ ನೀಡುತ್ತಾನೆ. ವೈದ್ಯನಲ್ಲಿಗೆ ಹೋಗದೆಯೇ ಆರೋಗ್ಯ ಸುಧಾರಣೆ ಬಗ್ಗೆ ವೈಜ್ಞಾನಿಕ ಮಾಹಿತಿ ಲಭ್ಯವಿದೆ.

ಸೋಂಕುರೋಗ, ಹೃದಯಾಘಾತ, ಕ್ಯಾನ್ಸರ್, ಮಾನಸಿಕ ರೋಗ, ಮೂಳೆ ಮುರಿತ, ಅಪೆಂಡಿಸೈಟಿಸ್‌ನಂತಹ ರೋಗಗಳಿಂದ ಬಳಲುವವರು ಆಯುರ್ವೇದ ಚಿಕಿತ್ಸೆಗೆ ಮೊರೆಹೋಗುತ್ತಾರೆಯೇ ? ಆಧುನಿಕ ವೈದ್ಯ ಪದ್ಧತಿ ಅಂತಹ ರೋಗಗಳಿಗೆ ಚಿಕಿತ್ಸೆ ನೀಡುವುದಲ್ಲದೆ ಆರೋಗ್ಯ ಸುಧಾರಣೆ ಸೂತ್ರಗಳನ್ನು ಪರಿಚಯಿಸುತ್ತದೆ. ಆಯುರ್ವೇದದಲ್ಲಿ ಹಲವಾರು ಸಕಾರಾತ್ಮಕ ಬದಲಾವಣೆಗಳಾಗಿವೆ. ಆಯುಶ್ ರೂಪದಲ್ಲಿ ಈ ಪದ್ಧತಿಯನ್ನು ಸರಕಾರಿ ಕೇಂದ್ರಗಳಲ್ಲಿ ಪರಿಚಯಿಸಲಾಗಿದೆ. ಆದರೆ ಸರಕಾರ ಆಯುರ್ವೇದ, ಸಿದ್ದ, ಯುನಾನಿ ಪದ್ಧತಿಯಲ್ಲಿ ಯಾವ ಚಿಕಿತ್ಸೆಗಳು ಪರಿಣಾಮಕಾರಿಯಾಗಿವೆ ಎಂಬ ವಿಷಯವನ್ನು ಇದುವರೆಗೆ ಪರೀಕ್ಷೆಗೆ ಒಳಪಡಿಸಿ ತಿಳಿಸಿಲ್ಲ. ಇದು ತುರ್ತಾಗಿ ಆಗಬೇಕಾದ ಕೆಲಸ. ಎಲ್ಲ ಪದ್ಧತಿಗಳು ಎಲ್ಲ ಸಮಸ್ಯೆಗಳಿಗೆ ಪರಿಣಾಮಕಾರಿಯಾಗಲಾರವು.

ಆಯುರ್ವೇದದಲ್ಲಿ ಸಂಶೋಧನೆ ಹಲವಾರು ಶತಮಾನಗಳಿಂದಲೂ ಆಗೇ ಇಲ್ಲ. ಆಯುರ್ವೇದವು ಆಧುನಿಕ ವೈಜ್ಞಾನಿಕ ವಿಧಾನವನ್ನು ಅಳವಡಿಸಿಕೊಳ್ಳಬೇಕು ಹಾಗೂ ವಸ್ತುನಿಷ್ಠ ಸಂಶೋಧನೆಯಲ್ಲಿ ತೊಡಗಬೇಕೆಂದು ಆಯುರ್ವೇದ ತಜ್ಞರೇ ಅಭಿಪ್ರಾಯಪಡುತ್ತಾರೆ.

**ಕೊನೆಯ ಮಾತು**

ಹಳ್ಳಿಯಲ್ಲಿ ಒಬ್ಬ ವ್ಯಕ್ತಿ ತಲೆನೋವು ಬಂದಾಗ 'ಕ್ರೋಸಿನ್' ಮಾತ್ರೆಯನ್ನು ಬಳಸುತ್ತಾನೆ. ಬೆಂಗಳೂರಿನ ಮಧ್ಯಭಾಗದಲ್ಲಿ ವಾಸಿಸುತ್ತಿರುವ ಒಬ್ಬ ವ್ಯಕ್ತಿ, ಮೂರು ವರ್ಷದಿಂದ ಎದೆನೋವಿಗೆ ಆಯುರ್ವೇದ ಔಷಧಿಯನ್ನು ಬಳಸುತ್ತಾ ಬಂದಿದ್ದಾನೆ ಹಾಗೂ ಹೃದಯರೋಗ ಸಂಪೂರ್ಣ ಗುಣ ಹೊಂದುತ್ತದೆಂದು ನಂಬಿದ್ದಾನೆ. ಅವನು ಪ್ರತಿ ತಿಂಗಳು ೩೦೦೦ ರೂ.ಗಳನ್ನು ಚಿಕಿತ್ಸೆಗೆ ನೀಡುತ್ತಿದ್ದಾನೆ.

ಇಂದು ಆರೋಗ್ಯ ವ್ಯವಸ್ಥೆ ಬಗ್ಗೆ ಜನರಿಗೆ ಸರಿಯಾದ ಬಗ್ಗೆ ಮಾಹಿತಿ ಇಲ್ಲ. ಈ ಕುರಿತು ನೀಡುವ ತಪ್ಪು ಹೇಳಿಕೆಗಳು ಜನರನ್ನು ತಪ್ಪುದಾರಿಗೆ ಎಳೆಯಲು ಸಾಧ್ಯ. ವೈದ್ಯಕೀಯದಲ್ಲಿ ಹಲವಾರು ವಿಭಾಗಗಳು ಸೃಷ್ಟಿಯಾಗಿವೆಯಾದರೂ ಅವುಗಳಲ್ಲಿ ಬಹುತೇಕ ವಿಭಾಗಗಳು ಕೃತಕವಾದುವು. ಇದರಿಂದಾಗಿ ವಿನಾಕಾರಣ ಪೈಪೋಟಿ ಉಂಟಾಗಿದೆ. ಈ ಪೈಪೋಟಿ ಆರೋಗ್ಯಕರವಲ್ಲ. ಇದಕ್ಕೆ ಪರಿಹಾರ ಆರೋಗ್ಯಕ್ಕೆ ಸಂಬಂಧಿಸಿದ ಜ್ಞಾನವನ್ನು ಎಲ್ಲ ವೈದ್ಯರಿಗೂ ತಿಳಿಸಿಕೊಡಬೇಕು (ಆಯುರ್ವೇದ, ವೈಜ್ಞಾನಿಕ ಪದ್ಧತಿ ಎಂಬ ಭೇದವಿಲ್ಲದೆ !).

ಇಂದು ಭಾರತದಲ್ಲಿ ೭೦% ಜನರು ಗ್ರಾಮೀಣ ಪ್ರದೇಶದಲ್ಲಿರುತ್ತಾರೆ. ಅವರ ಸುತ್ತಲೂ ಗಿಡಮೂಲಿಕೆಗಳು ವ್ಯಾಪಕವಾಗಿ ದೊರಕುತ್ತವೆ ಹಾಗೂ ಉಚಿತವಾಗಿ ಈ ಗಿಡಮೂಲಿಕೆಗಳನ್ನು ತಂದು ಔಷಧಿ ತಯಾರಿಸಲು ಜನರಿಗೆ ಮಾಹಿತಿ ದೊರಕುವಂತಾಗಬೇಕು. ಆಗ ಅತೀ ಕಡಿಮೆ ಬೆಲೆಯಲ್ಲಿಯೇ ಚಿಕಿತ್ಸೆ ಪಡೆಯಬಹುದಾಗಿದೆ. ದಿನನಿತ್ಯದ ಆರೋಗ್ಯ ಸಮಸ್ಯೆಗಳಿಗೆ ಆಯುರ್ವೇದ, ಸಿದ್ದ, ಯುನಾನಿ ಹಾಗೂ ಗಿಡಮೂಲಿಕೆ ಚಿಕಿತ್ಸೆಗಳು ಪರಿಣಾಮಕಾರಿಯೆಂದು ವಿಶ್ವ ಆರೋಗ್ಯ ಸಂಸ್ಥೆಯೇ ಹೇಳುತ್ತದೆ.

ಆದರೆ ಆಯುರ್ವೇದ ಹಾಗೂ ಸಾಂಪ್ರದಾಯಿಕ ಚಿಕಿತ್ಸಾ ಪದ್ಧತಿಗಳಿಂದ ಹೃದಯ ರೋಗ, ಆಸ್ತಮಾ, ಸಕ್ಕರೆ ಕಾಯಿಲೆ, ರಕ್ತದ ಏರೊತ್ತಡ, ಏಡ್ಸ್ ಮುಂತಾದ ಸಮಸ್ಯೆಗಳನ್ನು ಗುಣಪಡಿಸಬಹುದೆಂಬ ಪ್ರಚಾರ ಅರ್ಥಹೀನ.

**ಡಾ॥ ಪ್ರಕಾಶ್ ಸಿ. ರಾವ್**
ನಂ. ೪/೩, ೧ನೇ ಮುಖ್ಯರಸ್ತೆ, ನಂಜಪ್ಪ ರೆಡ್ಡಿ ಕಾಲೊನಿ
ಯಶವಂತಪುರ, ಬೆಂಗಳೂರು – ೫೬೦ ೦೨೨



# ಗುರು–ಶುಕ್ರರ ಆಟ

**ಸಂ**ಜೆಯ ಆಕಾಶದಲ್ಲಿ ಪಶ್ಚಿಮದ ಅಂಚಿನಲ್ಲಿ ಕಾಣುವ ಅತಿ ಪ್ರಕಾಶಮಾನವಾದ ಚುಕ್ಕೆಯೇ ಶುಕ್ರ. ತಿಂಗಳ ಮೊದಲ ದಿನವೇ ಇದರ ಪಕ್ಕದಲ್ಲಿ ಇನ್ನೊಂದು ಚುಕ್ಕೆಯೂ ಕಾಣುತ್ತದೆ. ಅದೇ ಗುರುಗ್ರಹ. ಕಳೆದ ತಿಂಗಳಿಂದ ಒಂದನ್ನೊಂದು ಸಮೀಪಿಸುತ್ತಿದ್ದ ಇವು ಇನ್ನು ಮುಂದೆ ದೂರ ಸರಿಯತೊಡಗುತ್ತವೆ. ತಿಂಗಳ ಕೊನೆಗೆ ಮಾಯವೇ ಆಗಿಬಿಡುತ್ತವೆ. ಜುಲೈ ೧ರಂದು ಅವುಗಳ ನಡುವಿನ ಅಂತರ ೧/೨ ಡಿಗ್ರಿಗಿಂತಲೂ ಕಡಿಮೆ. ಅಂದರೆ, ಅಂದು ಚಂದ್ರ ಅವುಗಳ ನಡುವೆ ಹಾದು ಹೋಗಿದ್ದಿದ್ದರೆ ಎರಡನ್ನೂ ಮುಚ್ಚಿ ಹಾಕಿ ಜೋಡಿ ಗ್ರಹಣವಾಗುತ್ತಿತ್ತು. ಸಂಜೆಯ ಆಕಾಶದಲ್ಲಿ ಕಾಣುವ ಇನ್ನೊಂದು ಗ್ರಹ ಶನಿ. ಇದು ಪೂರ್ವದ ಅಂಚಿನಿಂದ ದಿನೇ ದಿನೇ ಎತ್ತರಕ್ಕೆ ಏರಿದಂತೆ ಕಾಣುತ್ತದೆ. ಇದರ ಸಮೀಪ ಇರುವ ಕೆಂಪು ನಕ್ಷತ್ರವೇ ಜ್ಯೇಷ್ಠಾ ಅಂದರೆ ಅಂಟಾರೆಸ್. ಇದು ವೃಶ್ಚಿಕ ರಾಶಿಯ ಅತಿ ಪ್ರಕಾಶಮಾನ ನಕ್ಷತ್ರ. ರಾತ್ರಿಯಿಡೀ ಕಾಣುವುದರಿಂದ ಮೋಡಗಳು ಯಾವುದೇ ಹೊತ್ತಿನಲ್ಲಿ ಈ ಭಾಗದಲ್ಲಿ ಶುಭ್ರ ಆಕಾಶದ ಕಿಂಡಿ ಯನ್ನು ತೆರೆದುಕೊಟ್ಟಾಗ ಗಮನಿಸಲೇ ಬೇಕಾದ ನಕ್ಷತ್ರಪುಂಜ. ಇಲ್ಲಿ ನಕ್ಷತ್ರಗಳು ಒತ್ತಟ್ಟಿಗೆ ಸೇರಿಕೊಂಡಿರುವುದರಿಂದ ಬಿಳಿಯ ಹಾಸಿನ ಹಾಗೆ ಕಾಣುತ್ತದೆ. ಇದನ್ನೇ ಆಕಾಶಗಂಗೆ ಎಂದು ಹೆಸರಿಸಿದ್ದಾರೆ. ನದಿಯ ಹಾಗೆ ಇದು ಆಕಾಶದಲ್ಲಿ ಹರಿದಿದೆ. ಒಂದು ಭಾಗ ದಕ್ಷಿಣದ ಅಂಚಿನಲ್ಲಿ ಸಾಗುತ್ತದೆ. ಕಿನ್ನರ (ಸೆಂಟಾರೆಸ್) ಮತ್ತು ತ್ರಿಶಂಕುಗಳ (ದಕ್ಷಿಣ ಶಿಲುಬೆ, ಕ್ರಕ್ಸ್) ಮೂಲಕ ಹಾಯುವುದನ್ನು ನೋಡಲು ಶುಭ್ರ ಆಕಾಶ ಹಾಗೂ ಚಂದ್ರನ ಬೆಳಕಿಲ್ಲದ ರಾತ್ರಿಯೇ ಬೇಕು.

ಉ

ಸಪ್ತರ್ಷಿಮಂಡಲ

ವೀಣಾ

ಭೀಮ

ಸ್ವಾತಿ

ಸಿಂಹ

ಶುಕ್ರ

ಗುರು

ಪೂ

ಪ

ಉರಗಧರ

ತುಲಾ

ಕನ್ಯಾ

ಚಿತ್ರಾ

ಹಸ್ತ

ಶನಿ

ಧನು

ವೃಶ್ಚಿಕ

ಕಿನ್ನರ

ತ್ರಿಶಂಕು

ದ

ಸಂಜೆಯ ಆಕಾಶದಲ್ಲಿ ಕಾಣುವ ನಕ್ಷತ್ರಪುಂಜಗಳೆಂದರೆ ರಾಶಿಚಕ್ರದ ಸಿಂಹ, ಕನ್ಯಾ, ತುಲಾ, ವೃಶ್ಚಿಕ ಮತ್ತು ಧನು. ಗುರು ಮತ್ತು ಶುಕ್ರಗಳ ಆಟದಲ್ಲಿ ಸಿಂಹರಾಶಿಯ ಮಘ ನಕ್ಷತ್ರವೂ ಸೇರುವುದನ್ನು ಗಮನಿಸಬಹುದು. ಉತ್ತರದಲ್ಲಿ ಸಪ್ತರ್ಷಿಮಂಡಲ, ಸಹದೇವ (ಬೂಟಿಸ್) ಅಲ್ಲದೆ, ಈಶಾನ್ಯದಲ್ಲಿ ಬೇಸಿಗೆ ತ್ರಿಕೋಣ ಕಾಣುತ್ತದೆ. ಈ ತ್ರಿಕೋಣದ ಮೂರು ನಕ್ಷತ್ರಗಳು ಅಭಿಜಿತ್ (ವೇಗಾ), ಹಂಸಾಕ್ಷಿ (ದೆನ್‌ಬ್) ಮತ್ತು ಶ್ರವಣ (ಆಲ್ಟೇರ್).

ಈ ತಿಂಗಳಲ್ಲಿ ಚಂದ್ರ ಶುಕ್ರಗ್ರಹವನ್ನು, ರೋಹಿಣಿ ನಕ್ಷತ್ರವನ್ನು ಅಲ್ಲದೆ ಯುರೇನಸ್ ಗ್ರಹವನ್ನೂ ಮರೆಮಾಡುವ ಆಚ್ಛಾದನೆಗಳು ನಡೆಯಲಿವೆ. ಆದರೆ, ಇವು ಭಾರತದಿಂದ ಕಾಣುವುದಿಲ್ಲ. ೧೫ರ ಮುಂಜಾವು (ಅಮಾವಾಸ್ಯೆಯ ಹಿಂದಿನ ದಿನ – ಚಂದ್ರನನ್ನು ಹುಡುಕ ಬೇಕಾಗಬಹುದು) ಚಂದ್ರ, ಬುಧ ಮತ್ತು ಮಂಗಳ ಗುಂಪು ಗೂಡುತ್ತವೆ. ಮರುದಿನ ಮಂಗಳ ಮತ್ತು ಬುಧ ಕೇವಲ ೦.೧ ಡಿಗ್ರಿ ಅಂತರದಲ್ಲಿರುತ್ತವೆ. ಆದರೆ, ಈ ಎರಡೂ ಘಟನೆಗಳನ್ನು ನೋಡಲು ಸಂಧ್ಯಾಪ್ರಕಾಶವೇ ಅಡ್ಡಿ ಬರುತ್ತದೆ. ಸೋಹೋ ಎಂಬ ಬಾಹ್ಯಾಕಾಶ ನೌಕೆ ಕಳಿಸುವ ಚಿತ್ರಗಳಲ್ಲಿ ಇವನ್ನು ಸೂರ್ಯನ ಆಚೀಚೆ ನೋಡಬಹುದು. ಇದೇ ಸಂಧ್ಯಾ ಪ್ರಕಾಶದ ಕಾರಣ ಅಮಾವಾಸ್ಯೆಯ ಮುಂದಿನ ದಿನಗಳಲ್ಲಿ ಸಂಜೆಯಲ್ಲಿ ಗುರು ಮತ್ತು ಶುಕ್ರಗಳ ಸಮೀಪವಾಗಿ ಚಂದ್ರ ಹಾದುಹೋಗುವುದನ್ನು ನೋಡಲು ಕಷ್ಟವಾಗಬಹುದು.



*ಜುಲೈ ೧ರ ಸಂಜೆ ಶುಕ್ರ – ಗುರು ನಡುವೆ ೦.೪ ಡಿಗ್ರಿ*

ಈ ತಿಂಗಳ ೬ರಂದು ಭೂಮಿ ಅಪರವಿ ಬಿಂದುವಿನಲ್ಲಿ ಇರುತ್ತದೆ; ಅಂದರೆ ಸೂರ್ಯನಿಂದ ಗರಿಷ್ಠ ದೂರದಲ್ಲಿರುತ್ತದೆ.

ಈ ತಿಂಗಳಲ್ಲಿ ೨ ಮತ್ತು ೩೧ ಎರಡು ತಾರೀಖುಗಳಂದು ಹುಣ್ಣಿಮೆ ಇದೆ. ತಿಂಗಳಲ್ಲಿ ೩೧ ದಿನ ಇರುವುದರಿಂದ ಹೀಗೆ ಆಗುವುದು ಸಹಜವೇ ಆದರೂ ಎರಡನೆಯ ಹುಣ್ಣಿಮೆಯನ್ನು ನೀಲಿ ಚಂದ್ರ ಎಂದು ಕರೆಯುವುದು ರೂಢಿಯಲ್ಲಿದೆ (ಈ ಬಗ್ಗೆ ಹಲವರು ಗುಲ್ಲು ಎಬ್ಬಿಸಬಹುದು).

ಮುಂಜಾವುಗಳಲ್ಲಿ ಉಲ್ಕೆಗಳನ್ನು ಕಾಣುವ ಸಾಧ್ಯತೆ ಹೆಚ್ಚಾಗಿಯೇ ಇದೆ. ಡೆಲ್ಟಾ ಅಕ್ವಾರಿಡ್ಸ್, ಆಲ್ಫಾ ಕೇಪ್ರಿಕಾರ್ನಿಡ್ಸ್ ಅಲ್ಲದೆ ಪರ್ಸಿಯೈಡ್ಸ್ ಎಂಬ ಮೂರು ಉಲ್ಕಾವೃಷ್ಟಿಗಳಿಂದ ತಿಂಗಳುದ್ದಕ್ಕೂ ಉಲ್ಕೆಗಳು ಬೀಳುತ್ತವೆ. ಮೊದಲನೆಯದು ಅಷ್ಟೇನೂ ಪ್ರಕಾಶಮಾನವಾಗಿಲ್ಲ. ಎರಡನೆಯದೂ ಅಷ್ಟೇ. ಗಂಟೆಗೆ ೫ – ೧೦ ಉಲ್ಕೆಗಳು ಬೀಳಬಹುದು. ಪರ್ಸಿಯೈಡ್ಸ್ ಎಂಬುದರಲ್ಲಿ ಉಲ್ಕೆಗಳ ಸಂಖ್ಯೆ ಹೆಚ್ಚು. ಅದು ಆಗಸ್ಟ್‌ನಲ್ಲಿ ಗರಿಷ್ಠ (ಗಂಟೆಗೆ ೧೦೦ ಉಲ್ಕೆಗಳು) ಮುಟ್ಟುವುದಾದರೂ ಜುಲೈನಲ್ಲಿ ಚಟುವಟಿಕೆ ಹೆಚ್ಚಾಗಿಯೇ ಇರುತ್ತದೆ.

**ಜುಲೈ ತಿಂಗಳ ಖಗೋಳ ದಿನಚರಿ**

| | |
|---|---|
| ೧ | ಸಂಜೆ ಶುಕ್ರ – ಗುರು ನಡುವೆ ೦.೪ ಡಿಗ್ರಿ * |
| ೨ | ಹುಣ್ಣಿಮೆ |
| ೫ | ಚಂದ್ರ – ಭೂಮಿ ನಡುವೆ ಕನಿಷ್ಠ ಅಂತರ |
| ೬ | ಸೂರ್ಯ – ಭೂಮಿ ನಡುವೆ ಗರಿಷ್ಠ ಅಂತರ |
| ೮ | ಚಾಂದ್ರಮಾಸದ ಕೊನೆಯ ಪಾದ |
| ೧೨ | ಮುಂಜಾವು ರೋಹಿಣಿ – ಚಂದ್ರ ನಡುವೆ ೩ ಡಿಗ್ರಿ * |
| ೧೫ | ಮುಂಜಾವು ಚಂದ್ರ, ಬುಧ, ಮಂಗಳ – ಪುಟ್ಟ ಗುಂಪು |
| ೧೬ | ಅಮಾವಾಸ್ಯೆ; ಬುಧ – ಮಂಗಳ ನಡುವೆ ಕನಿಷ್ಠ ಕೋನ ೦.೧ ಡಿಗ್ರಿ |
| ೧೮ | ಸಂಜೆ ಚಂದ್ರ – ಗುರು ನಡುವೆ ೩ ಡಿಗ್ರಿ ಕೋನ * |
| ೧೯ | ಸಂಜೆ ಶುಕ್ರ – ಚಂದ್ರ ನಡುವೆ ೪ ಡಿಗ್ರಿ ಕೋನ * |
| ೨೧ | ಚಂದ್ರ – ಭೂಮಿ ನಡುವೆ ಗರಿಷ್ಠ ಅಂತರ |
| ೨೩ | ಶುಕ್ರದ ಹಿನ್ನಡೆ ಆರಂಭ. ಬುಧ ಗ್ರಹದ ಉಚ್ಚ ಯುತಿ |
| ೨೪ | ಚಾಂದ್ರಮಾಸದ ಮೊದಲ ಪಾದ |
| ೨೬ | ಶನಿ – ಚಂದ್ರ ನಡುವೆ ೩ ಡಿಗ್ರಿ ಅಂತರ (ಸಂಜೆ) * |
| ೩೧ | ಹುಣ್ಣಿಮೆ (ನೀಲಿ ಚಂದ್ರ !) |

(* ಛಾಯಾಗ್ರಹಣಕ್ಕೆ ಸದವಕಾಶ)

**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್
ಬೆಂಗಳೂರು – ೫೬೦ ೦೦೧

# ನೀರಾವರಿಯಿಂದ ವಿಜಯಪುರ ಜಿಲ್ಲೆ ಸಮೃದ್ಧಿಯೆಡೆಗೆ

ಡಾ॥ ಎಮ್. ಎಸ್. ಶಿರಹಟ್ಟಿ

**ವಿಜಯಪುರ ಜಿಲ್ಲೆ ಯಾವತ್ತೂ ಬರಗಾಲದ ಹಣೆಪಟ್ಟಿಯನ್ನು ಹೊತ್ತು, ಹಸಿವು, ಬಡತನ, ನಿರುದ್ಯೋಗ, ವಲಸೆಗಳಿಗೆ ಬಲಿಯಾಗಿ ನೆಮ್ಮದಿಯ ಬದುಕಿನಿಂದ ವಂಚಿತವಾಗಿತ್ತು. ಈಗ ಕೃಷ್ಣಾ ಯೋಜನೆಯಿಂದ ಮೇಲಿನ ಸಮಸ್ಯೆಗಳನ್ನು ನಿವಾರಿಸಿಕೊಳ್ಳುವ ಅವಕಾಶ ಆ ಜಿಲ್ಲೆಗೆ ಒದಗಿಬಂದಿದೆ. ಹಲವಾರು ಏತ ನೀರಾವರಿಗಳ ಮೂಲಕ ಜಿಲ್ಲೆಯನ್ನು ಬಹುತೇಕ ನೀರಾವರಿಗೊಳಪಡಿಸಿ ಜನತೆಯ ಬದುಕನ್ನು ಸಹನೀಯ ಮಾತ್ರವಲ್ಲ, ಸಮೃದ್ಧಿಯೆಡೆಗೊಯ್ಯುವ ಅವಕಾಶವಿದೆ. ಅದೇ ಸಂದರ್ಭದಲ್ಲಿ ದುರಾಸೆಗೊಳಗಾಗಿ ನೀರಿನ ಅತಿ ಬಳಕೆಯಿಂದ ಆ ಜಿಲ್ಲೆಯ ಭೂಮಿಯ ಮಣ್ಣು ನಾಶವಾಗುವ ಅಪಾಯವೂ ಇದೆ. ಆಡಳಿತ ವ್ಯವಸ್ಥೆ, ರಾಜಕೀಯ ನಾಯಕರು, ಸಾಮಾಜಿಕ ಸಂಘಟನೆಗಳು ಮತ್ತು ರೈತರು ಸಂಘಟಿತರಾಗಿ, ಸಂಯೋಜಿತ ವೈಜ್ಞಾನಿಕ ಕೃಷಿಯನ್ನು ಅಳವಡಿಸುವುದರ ಮೂಲಕ ವಿಜಯಪುರ ಜಿಲ್ಲೆಯು ಶತಮಾನಗಳ ಸಂಕಷ್ಟದಿಂದ ಮುಕ್ತನಾಗುವತ್ತ ಚಿಂತಿಸಿ ಕ್ರಿಯೆಗಿಳಿಯಬೇಕು. ಅಂಥ ಚಿಂತನೆ, ಕ್ರಿಯೆಗೆ ಡಾ॥ ಶಿರಹಟ್ಟಿಯವರ ಈ ಲೇಖನ ಆಕರವಾಗುತ್ತದೆ.**

ನೀರು ಜೀವನ, ಅದುವೆ ಸುಖದ ಮೂಲ, ಅದು ಹರಿದು ಬರುವ ಅಪಾರ ಜಲರಾಶಿಯು ಫಲವತ್ತಾದ ಭೂಮಿಯನ್ನು ನಿರ್ಮಿಸುತ್ತದೆ. ಮನುಷ್ಯನ ಪ್ರಗತಿಯ ಏಣಿಯಾಗುತ್ತದೆ. ಅಂತೆಯೆ ಮಾನವನ ಸಮೂಹ ವಸತಿಗೆ, ಹರಿವ ನೀರಿನ ತೀರ, ತೂಗು ತೊಟ್ಟಿಲಾಯಿತು. ನಾಗರಿಕತೆಯ ಪ್ರಾರಂಭ ನದಿಗಳ ದಂಡೆಯ ಮೇಲೆ ಎಂಬುದನ್ನು ಇತಿಹಾಸದ ಪುಟಗಳು ಹೇಳುತ್ತವೆ.

**ವಿಜಯಪುರ ಮತ್ತು ಬರಗಾಲ**

ವಿಜಯಪುರ ಮತ್ತು ಬರಗಾಲ ಇವೆರಡು ಸಮಾನಾರ್ಥದ ಶಬ್ದಗಳಂತೆ ಕಾಣುತ್ತವೆ. ಭಾರತ ದೇಶದಲ್ಲಿ ಮೇಲಿಂದ ಮೇಲೆ ಬರಗಾಲ ಬೀಳುವ ೪-೫ ಜಿಲ್ಲೆಗಳಲ್ಲಿ ವಿಜಯಪುರವೂ ಒಂದು. ಅದು ದೇಶದ ಬರಗಾಲ ನಕ್ಷೆಯಲ್ಲಿ ಶಾಶ್ವತವಾದ ಸ್ಥಾನ ಪಡೆದಿದೆ. ಇನ್ನು ವಿಜಯಪುರ ಜಿಲ್ಲೆಯ ಗೆಜ಼ೆಟಿಯರನ್ನು ಅಭ್ಯಸಿಸಿದರೆ, ಇತಿಹಾಸದಲ್ಲಿ ಯಾವ ವರ್ಷ ಬರಗಾಲ ಬಂದಿದ್ದು, ಎಷ್ಟೆಷ್ಟು ಹಾನಿಯಾಗಿದೆ ಎಂಬುದು ವಿವರವಾಗಿ ದಾಖಲಾಗಿದೆ. ವಿಜಯಪುರ ಜಿಲ್ಲೆಯ ಕಳೆದ ೧೦೦ ವರ್ಷಗಳ ಮಳೆಯ ಹಂಚಿಕೆಯನ್ನು ವೈಜ್ಞಾನಿಕವಾಗಿ ಅಧ್ಯಯನ ಮಾಡಿದಾಗ ಪ್ರತಿ ಐದು ವರ್ಷಗಳಲ್ಲಿ ಒಂದು ವರ್ಷ ಕಠಿಣ ಬರಗಾಲ, ಒಂದು ವರ್ಷ ಉತ್ತಮ ಮಳೆ, ಎರಡು ವರ್ಷ ಸರಾಸರಿಗಿಂತ ಕಡಿಮೆ ಮಳೆ ದಾಖಲಾಗುತ್ತದೆ ಮತ್ತು ಒಂದು ವರ್ಷ ಸರಾಸರಿಗಿಂತಲೂ ಹೆಚ್ಚಿನ ಮಳೆ ದಾಖಲಾಗುತ್ತದೆ. ಶುಷ್ಕತೆಯ ಇನ್ನೊಂದು ಸೂಚ್ಯಂಕವಾದ ಒಣಹವೆಯ ಸೂಚ್ಯಂಕವು ಸಹ ೭೦ಕ್ಕಿಂತ ಹೆಚ್ಚಾಗಿರುತ್ತದೆ. ಇದಲ್ಲದೆ, ಬ್ರಿಟಿಷ್ ಸರಕಾರದ ಆಡಳಿತಾವಧಿಯಲ್ಲಿ ವಿಜಯಪುರ ಜಿಲ್ಲೆಯನ್ನು ಬರಗಾಲ ಪೀಡಿತ ಪ್ರದೇಶವೆಂದು ಘೋಷಿಸಲಾಯಿತು. ೧೯೦೨ರಲ್ಲಿ ವಿಜಯಪುರ ಜಿಲ್ಲೆಯ ಹಿಟ್ನಳ್ಳಿ ಗ್ರಾಮದಲ್ಲಿ ಒಣ ಬೇಸಾಯ ಸಂಬಂಧಿತ ತಾಂತ್ರಿಕತೆಯನ್ನು ಅಭಿವೃದ್ಧಿಪಡಿಸಲು ಕೃಷಿ ಸಂಶೋಧನಾ ಕೇಂದ್ರವನ್ನು ಸ್ಥಾಪಿಸಿದರು. ಇವೆಲ್ಲವನ್ನು ಪರಿಶೀಲಿಸಿದಾಗ ವಿಜಯಪುರ ಜಿಲ್ಲೆಗೆ ಅಂಟಿರುವ ಬರಗಾಲದ ತೀವ್ರತೆಯನ್ನು ಅರಿಯಬಹುದು.

**ವಿಜಯಪುರ ಜಿಲ್ಲೆಯ ಮಳೆಯ ಚಿತ್ರಣ**

ವಿಜಯಪುರ ಜಿಲ್ಲೆಯ ೧೦೦ ವರ್ಷಗಳ ಮಳೆಯ ದಾಖಲೆಯನ್ನು ವಿಶ್ಲೇಷಿಸಿದಾಗ ತಿಳಿಯುವ ಮಾಹಿತಿ ಎಂದರೆ ವಿಜಯಪುರ ಜಿಲ್ಲೆಯ ವಾರ್ಷಿಕ ಸರಾಸರಿ ಮಳೆಯು ೫೯೫ ಮಿ.ಮೀ., ಶತಮಾನದ ಅತ್ಯಂತ ಕನಿಷ್ಠ ಮಳೆಯು ವರ್ಷ ೧೯೨೪ರಲ್ಲಿ ೨೭೪ ಮಿ.ಮೀ. ಮತ್ತು ಗರಿಷ್ಠ ೨೦೦೯ರಲ್ಲಿ ೧೧೮೭ ಮಿ.ಮೀ. ಎಂದು ದಾಖಲಾಗಿದೆ. ವಾರ್ಷಿಕ ಮಳೆಯ ವ್ಯತ್ಯಸ್ಥ ಸಹಗುಣಾಂಕ ೧೯೪ ಮಿ.ಮೀ. ಇರುತ್ತದೆ. ಸರಾಸರಿ

ವರ್ಷದ ೩೮ ದಿನಗಳಲ್ಲಿ ಮಳೆ ಬರುತ್ತದೆ. ಸಾಮಾನ್ಯವಾಗಿ ಮುಂಗಾರು ಮಳೆಯು ಪ್ರಾರಂಭವಾಗುವುದು ತಡವಾಗಿಯೇ. ಆದರೆ ತೀವ್ರತೆಯು ಹೆಚ್ಚಾಗಿರುತ್ತದೆ. ಎರಡು ಮಳೆಯ ನಡುವೆ ಬಹಳ ಸಮಯದವರೆಗೆ ಒಣಹವೆ ಮುಂದುವರಿಯುತ್ತದೆ ಮತ್ತು ಮಳೆಯ ಹಂಚಿಕೆಯು ಸಹ ಹಂಗಾಮಿನಲ್ಲಿ ಸರಿಯಾಗಿ ಆಗುವುದಿಲ್ಲ.

**ವಿಜಯಪುರ ಜಿಲ್ಲೆಯ ಭೌಗೋಳಿಕ ಮತ್ತು ಕೃಷಿಯ ಚಿತ್ರಣ**

ವಿಜಯಪುರ ಜಿಲ್ಲೆಯ ಒಟ್ಟು ೧೦,೫೩,೪೩೧ ಹೆಕ್ಟೇರ್ ಕ್ಷೇತ್ರದಲ್ಲಿ, ೮,೩೬,೪೩೧ ಹೆಕ್ಟೇರ್ ಪ್ರದೇಶವು ಸಾಗುವಳಿಗೆ ಯೋಗ್ಯವಾಗಿದೆ ಹಾಗೂ ಇನ್ನುಳಿದ ೨,೧೭,೦೪೦ ಹೆಕ್ಟೇರ್ ಪ್ರದೇಶವು ಪಾಳು ಜಮೀನು, ಸಾಗುವಳಿಗೆ ಯೋಗ್ಯವಲ್ಲದ, ಕಲ್ಲಿನಿಂದ ಹಾಗೂ ಜನವಸತಿಯಿಂದ ಕೂಡಿದೆ (ಚಿತ್ರ). ಒಟ್ಟು ಜಮೀನಿನಲ್ಲಿ ಪ್ರತಿಶತ ೭೫-೮೦ರಷ್ಟು ಕಪ್ಪುಮಣ್ಣಿನಿಂದ, ಇನ್ನುಳಿದ ೨೦-೨೫ ಪ್ರತಿಶತ ಮಡ್ಡಿ / ಕೆಂಪು ಮತ್ತು ಮರಳಿನಿಂದ ಕೂಡಿದೆ. ಜಿಲ್ಲೆಯ ಒಟ್ಟು ಜಮೀನಿನಲ್ಲಿ ಪ್ರತಿಶತ ೫೬ರಷ್ಟು ಜಮೀನು ಕಡಿಮೆ ಆಳದಿಂದ ಆಳವಾದ ಮಣ್ಣನ್ನು ಹೊಂದಿದೆ. ಇದು ಕಡಿಮೆ ನೀರು ಹಿಡಿದಿಟ್ಟುಕೊಳ್ಳುವ ಸಾಮರ್ಥ್ಯವನ್ನು ಮಾತ್ರ ಹೊಂದಿದೆ. ಬೆಳೆ ಬೆಳೆಯುವ ಸುರಕ್ಷಿತ ಅವಧಿಯು ಸುಮಾರು ೯೦ ದಿನಗಳು ಮಾತ್ರ.

ಮಧ್ಯಮ ಮತ್ತು ಆಳವಾದ ಕಪ್ಪುಮಣ್ಣಿನಲ್ಲಿ ಹೆಚ್ಚಿನ ಪ್ರಮಾಣದ ಪೊಟ್ಯಾಷ್ ಇರುತ್ತದೆ. ಆದರೆ, ಲಭ್ಯವಿರುವ ಸಾರಜನಕ ಮತ್ತು ರಂಜಕದ ಪ್ರಮಾಣ ಕಡಿಮೆ. ಇದಲ್ಲದೆ, ತೀವ್ರವಾದ ಬಿಸಿಲು ಮತ್ತು ರಭಸವಾಗಿ ಬೀಸುವ ಗಾಳಿ ಎರಡೂ ಮಣ್ಣಿನ ಮೇಲ್ಮೈಯನ್ನು ಬೇಗನೆ ಒಣಗಿಸುತ್ತವೆ. ಇದರಿಂದ ಸಾವಯವ ಅಂಶ ನಷ್ಟವಾಗಿ, ಮಣ್ಣಿನ ಸವೆತ ಹೆಚ್ಚಾಗುತ್ತದೆ. ಅಂತೆಯೇ ಪೋಷಕಾಂಶಗಳ ನಷ್ಟವೂ ಉಂಟಾಗುತ್ತದೆ.

ವಿಜಯಪುರ ಜಿಲ್ಲೆಯಲ್ಲಿ ಮುಂಗಾರಿನಲ್ಲಿ ಸಜ್ಜೆ, ತೊಗರಿ, ಶೇಂಗಾ, ಹತ್ತಿ, ಸ್ವಲ್ಪಮಟ್ಟಿಗೆ ಹೆಸರು ಮತ್ತು ಸೂರ್ಯಕಾಂತಿ ಮುಖ್ಯ ಬೆಳೆಗಳಾಗಿದ್ದು, ಹಿಂಗಾರಿನಲ್ಲಿ ಜೋಳ ಮತ್ತು ಕಡಲೆ ಬೆಳೆಯುತ್ತಾರೆ. ನೀರಾವರಿ ಸೌಲಭ್ಯವಿದ್ದಲ್ಲಿ ನಿಂಬೆ, ದ್ರಾಕ್ಷಿ, ದಾಳಿಂಬೆ ಮತ್ತು ಸ್ವಲ್ಪಮಟ್ಟಿಗೆ ತರಕಾರಿ ಹಾಗೂ ಪುಷ್ಪಗಳನ್ನು ಬೆಳೆಯುತ್ತಾರೆ. ಈಗಾಗಲೆ ಕಾಲುವೆ ನೀರಾವರಿಗೆ ಒಳಪಟ್ಟಿರುವ ಜಮೀನುಗಳಲ್ಲಿ ರೈತರು ಹೆಚ್ಚಾಗಿ ಕಬ್ಬನ್ನು ಬೆಳೆಯುತ್ತಿದ್ದಾರೆ. ಕಬ್ಬು ಮತ್ತು ದ್ರಾಕ್ಷಿ ಬೆಳೆಗಳನ್ನು ಹೊರತುಪಡಿಸಿದಂತೆ, ಉಳಿದ ಬೆಳೆಗಳ ಇಳುವರಿಯು ರಾಜ್ಯದ ಸರಾಸರಿ ಇಳುವರಿಗಿಂತ ಕಡಿಮೆ ಇರುತ್ತದೆ.



**ವಿಜಯಪುರ ಜಿಲ್ಲೆಯ ನದಿ/ ಹಳ್ಳಗಳ ನಕ್ಷೆ**

**ವಿಜಯಪುರ ಜಿಲ್ಲೆಯ ನೀರಾವರಿ ಚಿತ್ರಣ : ನೀರಾವರಿಯ ಇತಿಹಾಸ**

ಅವಿಭಜಿತ ವಿಜಯಪುರ ಜಿಲ್ಲೆಯಲ್ಲಿ ಪಂಚನದಿಗಳಾದ ಕೃಷ್ಣ, ಭೀಮ, ಮಲಪ್ರಭಾ, ಘಟಪ್ರಭಾ ಮತ್ತು ಡೋಣಿ ನದಿಗಳು ಹರಿಯುತ್ತಿದ್ದುದರಿಂದ ಇದನ್ನು 'ಕರ್ನಾಟಕದ ಪಂಜಾಬ' ಎಂದು ಕರೆಯುತ್ತಿದ್ದರು. ವಿಜಯಪುರ ಜಿಲ್ಲೆಯ ಗೆಝೆಟಿಯರ್‌ನಲ್ಲಿ ಉಲ್ಲೇಖಿಸಿದಂತೆ ೧೯೭೦ರಲ್ಲಿ ಅವಿಭಜಿತ ವಿಜಯಪುರ ಜಿಲ್ಲೆಯ ೩ ಪ್ರತಿಶತ ಮಾತ್ರ ನೀರಾವರಿಗೆ ಒಳಪಟ್ಟಿತ್ತು. ನಂತರದ ದಶಕಗಳಲ್ಲಿ ಮಲಪ್ರಭಾ ಮತ್ತು ಘಟಪ್ರಭಾ ನೀರಾವರಿ ಯೋಜನೆಗಳು ಪ್ರಾರಂಭವಾದವು. ಅನಂತರ ಕೊಳವೆ ಬಾವಿಗಳ ಪ್ರವೇಶವಾಯಿತು. ಆಗ ಕೊಳವೆ ಬಾವಿಗಳನ್ನು ಕೊರೆಯುವುದು ಸುಲಭವಾಗಿತ್ತು ಮತ್ತು ಅತಿ ಕಡಿಮೆ ಸಮಯದಲ್ಲಿ ಕೊಳವೆ ಬಾವಿಗಳನ್ನು ರಚಿಸುವುದು ಸಾಧ್ಯವಿದ್ದುದರಿಂದ ೧೯೯೦ರ ದಶಕದಲ್ಲಿ ಬಹಳಷ್ಟು ಸಂಖ್ಯೆಯಲ್ಲಿ ಅವುಗಳನ್ನು ಕೊರೆಯಲಾಯಿತು. ಹೀಗಾಗಿ ಜಿಲ್ಲೆಯ ನೀರಾವರಿ ಪ್ರದೇಶ ಶೇ. ೧೦-೧೨ರಷ್ಟಾಯಿತು.

**ವಿಭಜಿತ ವಿಜಯಪುರ ಜಿಲ್ಲೆಯ ನೀರಾವರಿಯ ಚಿತ್ರಣ :**

**ಬಾವಿಗಳಿಂದ ನೀರಾವರಿ**

೨೦೧೪ರ ಅಂಕಿ-ಅಂಶದ ಪ್ರಕಾರ ವಿಜಯಪುರ ಜಿಲ್ಲೆಯಲ್ಲಿ ನಾಲೆ (ಕಾಲುವೆ)ಗಿಂತಲೂ ಅಂತರ್ಜಲದ ಮೂಲವಾದ ಬಾವಿಗಳಿಂದ ಹೆಚ್ಚಿನ ಪ್ರಮಾಣದಲ್ಲಿ ನೀರಾವರಿಯಾಗುತ್ತಿದೆ. ಜಿಲ್ಲೆಯಲ್ಲಿ ಒಟ್ಟು ೪೨,೫೧೧ ತೆರೆದ ಬಾವಿಗಳಿಂದ ೭೭,೪೯೯ ಹೆಕ್ಟೇರ್ ಹಾಗೂ ೩೧,೩೨೪ ಕೊಳವೆ ಬಾವಿಗಳಿಂದ ೮೮,೧೪೬ ಹೆಕ್ಟೇರ್, ಒಟ್ಟಿನಲ್ಲಿ ೧,೬೫,೬೪೫ ಹೆಕ್ಟೇರ್ ಪ್ರದೇಶದಲ್ಲಿ ಅಂತರ್ಜಲವನ್ನು ಬಳಸಿಕೊಂಡು ಬಾವಿಗಳ ಮೂಲಕ ನೀರಾವರಿಯಾಗುತ್ತದೆ. ಇದು ಜಿಲ್ಲೆಯ ಒಟ್ಟು ಸಾಗುವಳಿ ಪ್ರದೇಶದ ಶೇಕಡ ೧೯ರಷ್ಟಿದೆ.

**ಕೆರೆಗಳಿಂದ ನೀರಾವರಿ**

ರಾಜ್ಯದ ಇತರೆ ಜಿಲ್ಲೆಗಳಿಗೆ ಹೋಲಿಸಿದಾಗ ವಿಜಯಪುರ ಜಿಲ್ಲೆಯಲ್ಲಿ ಕೆರೆಗಳ ಮೂಲಕ ಆಗುವ ನೀರಾವರಿ ಪ್ರದೇಶ ಬಹಳಷ್ಟು ಕಡಿಮೆ. ಜಿಲ್ಲೆಯಲ್ಲಿ ಒಟ್ಟು ೮೪ ನೀರಾವರಿ ಕೆರೆಗಳಿವೆ, ೨ ಮಧ್ಯಮ ಗಾತ್ರದ ಕೆರೆಗಳು ಹಾಗೂ ೬೬ ಇಂಗು ಕೆರೆಗಳಿವೆ. ಇತ್ತೀಚಿನ ವರ್ಷಗಳಲ್ಲಿ ಕೆರೆಗಳ ಇಳಿಮೇಡು ಪ್ರದೇಶಗಳಲ್ಲಿ ಬಹಳಷ್ಟು ಜಲಾನಯನ ಅಭಿವೃದ್ಧಿ ಕಾರ್ಯಗಳನ್ನು ಕೈಕೊಂಡಿದ್ದರಿಂದ ಅವುಗಳಿಗೆ ಬರುವ ನೀರಿನ ಪ್ರಮಾಣ ಕಡಿಮೆಯಾಗಿದೆ. ಕೆಲ ವರ್ಷಗಳಲ್ಲಿ ಕೆರೆಗಳಿಗೆ ನೀರು ಬಂದರೂ, ಅವುಗಳು ಅರ್ಧದಷ್ಟು ಮಾತ್ರ ತುಂಬುತ್ತವೆ. ಈ ನೀರನ್ನು ಸಾಮಾನ್ಯವಾಗಿ ಜನರ ದಿನನಿತ್ಯದ ಬಳಕೆಗೆ ಮತ್ತು ದನಕರುಗಳು ನೀರು ಕುಡಿಯುವುದಕ್ಕಾಗಿ ಉಪಯೋಗಿಸುವುದರಿಂದ, ನೀರಾವರಿಗೆ ಬಹಳಷ್ಟು ಕಡಿಮೆ ಪ್ರಮಾಣದ ನೀರು ಲಭ್ಯವಿದೆ. ಜಿಲ್ಲೆಯಲ್ಲಿ ೧-೨ ಸಾವಿರ ಹೆಕ್ಟೇರ್ ಪ್ರದೇಶ ಕೆರೆ ನೀರಾವರಿಗೆ ಒಳಪಟ್ಟಿದೆ.

**ಇತರೆ ಮೂಲಗಳಿಂದ ನೀರಾವರಿ**

ವಿಜಯಪುರ ಜಿಲ್ಲೆಯಲ್ಲಿ ಇತರೆ ಮೂಲಗಳಿಂದ, ಅಂದರೆ ಹಳ್ಳ / ಹರಿಗಳಿಗೆ ಹಾಗೂ ನದಿಗಳಿಗೆ ಬಾಂದಾರುಗಳನ್ನು ನಿರ್ಮಿಸಿ ಸುಮಾರು ೧೪,೭೯೭ ಹೆಕ್ಟೇರ್ ಪ್ರದೇಶವನ್ನು ನೀರಾವರಿಗೆ ಒಳಪಡಿಸಲಾಗಿದೆ.

**ಕಾಲುವೆಯಿಂದ ನೀರಾವರಿ**

ಕೃಷ್ಣಾ ಮೇಲ್ದಂಡೆ ಯೋಜನೆಯನ್ನು ಅನುಷ್ಠಾನಗೊಳಿಸುವ ಮೊದಲು ಕಾಲುವೆಯಿಂದ ಯಾವುದೇ ಪ್ರದೇಶವು ನೀರಾವರಿಗೆ ಒಳಪಟ್ಟಿರಲಿಲ್ಲ. ಕೃಷ್ಣಾ ಮೇಲ್ದಂಡೆ ಯೋಜನೆ ಪ್ರಾರಂಭವಾದ ನಂತರ ೯೦ರ ದಶಕದಿಂದ ಹಂತ ಹಂತವಾಗಿ

| ಕ್ರ.ಸಂ. | ನೀರಾವರಿ ಯೋಜನೆ | ನೀರಾವರಿ ಕ್ಷೇತ್ರ (ಹೆಕ್ಟೇರ್) |
|---|---|---|
| ೧. | ಇಂಡಿ ಶಾಖಾ ಕಾಲುವೆಯಿಂದ ನೀರಾವರಿಗೆ ಒಳಪಟ್ಟ ಪ್ರದೇಶ | ೪೬,೧೯೩ |
| ೨. | ಇಂಡಿ ಏತ ನೀರಾವರಿ ಯೋಜನೆ | ೪೨,೧೭೭ |
| ೩. | ಮುಳವಾಡ ಏತ ನೀರಾವರಿ ಯೋಜನೆ (ಇಲ್ಲಿಯವರೆಗೆ ನೀರಾವರಿಗೆ ಒಳಪಟ್ಟ ಪ್ರದೇಶ) | ೧೯,೧೯೫ |
| ೪. | ಚಿಮ್ಮಲಗಿ ಏತ ನೀರಾವರಿ ಯೋಜನೆ (ಇಲ್ಲಿಯವರೆಗೆ ನೀರಾವರಿಗೆ ಒಳಪಟ್ಟ ಪ್ರದೇಶ) | ೫,೧೯೮ |
| ೫. | ಒಟ್ಟು | ೧,೩೨,೪೬೯ |

ನೀರಾವರಿ ಪ್ರದೇಶವು ಹೆಚ್ಚುತ್ತಾ ಹೋಯಿತು. ವರ್ಷ ೨೦೧೪ರ ಅಂತ್ಯದವರೆಗೆ ಈ ಹಿಂದಿನ ಕೋಷ್ಟಕದಂತೆ ನೀರಾವರಿ ಯೋಜನೆಯನ್ನು ಅನುಷ್ಠಾನಗೊಳಿಸಲಾಯಿತು.

೨೦೧೪ರ ಅಂತ್ಯದವರೆಗೆ ಕಾಲುವೆಯಿಂದ ಮತ್ತು ಅಂತರ್ಜಲದಿಂದ ಒಟ್ಟು ೨,೯೮,೧೧೪ ಹೆಕ್ಟೇರ್ ಪ್ರದೇಶ (ಒಟ್ಟು ಸಾಗುವಳಿ ಕ್ಷೇತ್ರದ ಶೇಕಡ ೩೫) ನೀರಾವರಿಗೆ ಒಳಪಟ್ಟಿದೆ.

**ಕೃಷ್ಣಾ ಮೇಲ್ದಂಡೆ ಯೋಜನೆ ಹಂತ – IIIರಲ್ಲಿ ನೀರಾವರಿಗೆ ಒಳಪಡುವ ಪ್ರದೇಶ**

ಮಾನ್ಯ ನ್ಯಾಯಮೂರ್ತಿಗಳಾದ ಬ್ರಿಜೇಶ್ ಕುಮಾರ್ ನೇತೃತ್ವದ ಕೃಷ್ಣಾ ನದಿ ಪಾತ್ರದ ನೀರಿನ ಹಂಚಿಕೆಗೆ ಸಂಬಂಧಿಸಿದ ಕೃಷ್ಣಾ ನ್ಯಾಯಾಧೀಕರಣ–೨ರ (ದಿನಾಂಕ ೩೦–೧೨–೨೦೧೦ರ) ಆದೇಶದಂತೆ ಕರ್ನಾಟಕ ರಾಜ್ಯಕ್ಕೆ ಹೆಚ್ಚುವರಿಯಾಗಿ ೧೭೭ ಟಿಎಂಸಿ ನೀರು ಲಭ್ಯವಿದೆ. ಇದರಲ್ಲಿ ೧೩೦.೭ ಟಿಎಂಸಿ ಕೃಷ್ಣಾ ಮೇಲ್ದಂಡೆ ಯೋಜನೆಗಾಗಿ ಹಾಗೂ ಕೃಷ್ಣಾ ಮೇಲ್ದಂಡೆ ಯೋಜನೆಗಳಲ್ಲಿ ವಿಜಯಪುರ ಜಿಲ್ಲೆಗೆ ಸುಮಾರು ೮೦ ಟಿಎಂಸಿ ನೀರನ್ನು ಮೀಸಲಿಡಲಾಗಿದೆ.

ಈ ಮೂರನೇ ಹಂತದ ಕೆಲ ಯೋಜನೆಗಳು ಈಗಾಗಲೇ ಆರಂಭವಾಗಿವೆ. ಈ ಯೋಜನೆಗಳು ಪೂರ್ಣಗೊಳ್ಳಬೇಕಾದರೆ ಸದ್ಯಕ್ಕೆ ಇರುವ ಆಲಮಟ್ಟಿ ಜಲಾಶಯದ ಎತ್ತರವನ್ನು ೫೧೯.೬೦ ಮೀಟರ್‌ನಿಂದ ೫೨೪.೨೫೬ ಮೀಟರ್‌ನಷ್ಟು ಎತ್ತರಕ್ಕೆ ಹೆಚ್ಚಿಸಬೇಕಾಗಿರುವದು ಸವಾಲಿನ ಕೆಲಸವಾಗಿದ್ದು, ಇದರಿಂದ ಬಹಳಷ್ಟು ಗ್ರಾಮಗಳು ಹಾಗೂ ಆ ಗ್ರಾಮಗಳ ವ್ಯಾಪ್ತಿಯಲ್ಲಿ ಬರುವ ಸಾವಿರಾರು ಎಕರೆ ಫಲವತ್ತಾದ ಜಮೀನು ಮುಳುಗಡೆಯಾಗುತ್ತದೆ.

ಕೃಷ್ಣಾ ಮೇಲ್ದಂಡೆ ಯೋಜನೆ ಹಂತ–೩ರಲ್ಲಿ ಆಲಮಟ್ಟಿ ಜಲಾಶಯದ ಹಿನ್ನೀರಿನಲ್ಲಿ ಮುಳುಗಡೆ ಆಗುವ ೨೦ ಹಳ್ಳಿಗಳ ಅಂದಾಜು ೩೭,೬೦೦ ಹೆಕ್ಟೇರ್ (೯೪,೦೦೦ ಎಕರೆ) ಜಮೀನಿನ ಭೂಸ್ವಾಧೀನ ಹಾಗೂ ಪಟ್ಟಣಕ್ಕಾಗಿ ಮತ್ತು ಕಾಲುವೆ ಜಾಲಕ್ಕಾಗಿ ಒಟ್ಟು ಸುಮಾರು ೧,೦೫,೦೦೦ ಎಕರೆ ಜಮೀನನ್ನು ಸ್ವಾಧೀನಪಡಿಸಿಕೊಳ್ಳಬೇಕೆಂದು ಅಂದಾಜಿಸಲಾಗಿದೆ. ಸುಮಾರು ೨೫,೦೦೦ ಕುಟುಂಬಗಳಡಿಯ ಒಂದು ಲಕ್ಷಕ್ಕೂ ಅಧಿಕ ಜನರನ್ನು ಸ್ಥಳಾಂತರಗೊಳಿಸಿ, ಅವರಿಗೆ ಪುನರ್ವಸತಿ ಕಲ್ಪಿಸಬೇಕಾಗುತ್ತದೆ. ಕೃಷ್ಣಾ ಮೇಲ್ದಂಡೆ ಯೋಜನೆಯ ಹಂತ–೩ರಡಿ ಆಲಮಟ್ಟಿ ಜಲಾಶಯದ ಹಿನ್ನೀರಿನಲ್ಲಿ ಮುಳುಗಡೆ ಹೊಂದುವ ಜಮೀನುಗಳ ಭೂಸ್ವಾಧೀನ ಮತ್ತು ಗ್ರಾಮಗಳ ಪುನರ್ವಸತಿ ಹಾಗೂ ಪುನರ್‌ನಿರ್ಮಾಣ ಕಾರ್ಯ ಸರ್ಕಾರದ ಆದ್ಯತೆಯಾಗಿರುತ್ತದೆ.

ಕೃಷ್ಣಾ ಮೇಲ್ದಂಡೆ ಯೋಜನೆ ಹಂತ–೩ರಡಿ ಈಗಾಗಲೇ ಕೈಗೆತ್ತಿಕೊಂಡಿರುವ ೫ ಉಪ ಯೋಜನೆ ಕಾಮಗಾರಿಗಳಾದ ಮುಳವಾಡ, ಚಿಮ್ಮಲಗಿ, ಇಂಡಿ, ಮಲ್ಲಾಬಾದ್ ಮತ್ತು ರಾಂಪುರ ಏತ ನೀರಾವರಿ ಯೋಜನಾ ಕಾಮಗಾರಿಗಳು ತೀವ್ರಗತಿಯಲ್ಲಿ ಜರುಗುತ್ತಿವೆ.

ಕೃಷ್ಣಾ ಮೇಲ್ದಂಡೆ ಯೋಜನೆ ಹಂತ–೩ರಡಿ ಉದ್ದೇಶಿತ ೫.೩೦ ಲಕ್ಷ ಹೆಕ್ಟೇರ್ (೧೩.೧೦ ಲಕ್ಷ ಎಕರೆ) ಅಚ್ಚುಕಟ್ಟು ಕ್ಷೇತ್ರದ ಪೈಕಿ ವಿಜಯಪುರ ಜಿಲ್ಲೆಯೊಂದರಲ್ಲೇ ೩.೨೨ ಲಕ್ಷ ಹೆಕ್ಟೇರ್ (೭.೯೫ ಲಕ್ಷ ಎಕರೆ), ಅಂದರೆ ಕೃಷ್ಣಾ ಮೇಲ್ದಂಡೆ ಯೋಜನೆ ಹಂತ–೩ರಡಿ ಒಟ್ಟು ಪ್ರಸ್ತಾಪಿತ ಅಚ್ಚುಕಟ್ಟು ಕ್ಷೇತ್ರದ ೬೧ ಪ್ರತಿಶತ ಅಚ್ಚುಕಟ್ಟು ಕ್ಷೇತ್ರಕ್ಕೆ ನೀರಾವರಿ ಸೌಲಭ್ಯ ಕಲ್ಪಿಸಬೇಕಾಗುತ್ತದೆ. ವಿಜಯಪುರ ಜಿಲ್ಲೆಯ ಬಸವನ ಬಾಗೇವಾಡಿ, ಮುದ್ದೇಬಿಹಾಳ, ಸಿಂದಗಿ, ಇಂಡಿ ಹಾಗೂ ವಿಜಯಪುರ ತಾಲೂಕುಗಳಡಿಯ ಅಚ್ಚುಕಟ್ಟು ಕ್ಷೇತ್ರಕ್ಕೆ ಪ್ರಮುಖವಾಗಿ ಮುಳವಾಡ, ಚಿಮ್ಮಲಗಿ, ಇಂಡಿ ಏತ ನೀರಾವರಿ ಯೋಜನೆಗಳಿಂದ ನೀರಾವರಿ ಸೌಲಭ್ಯ ಕಲ್ಪಿಸಬೇಕಾಗುತ್ತದೆ.

ಕೃಷ್ಣಾ ಮೇಲ್ದಂಡೆ ಯೋಜನೆ ಹಂತ–IIIರ ವಿವಿಧ ಯೋಜನೆಗಳು, ಹಂಚಿಕೆಯಾದ ನೀರು ಮತ್ತು ನೀರಾವರಿಗೆ ಒಳಪಡುವ ಕ್ಷೇತ್ರದ ವಿವರಗಳು :

ವಿಜಯಪುರ ಜಿಲ್ಲೆಗೆ ಮೂರನೇ ಹಂತದಲ್ಲಿ ಒಟ್ಟಿನಲ್ಲಿ ೮೦ ಟಿಎಂಸಿ ನೀರು ಲಭ್ಯವಾಗಲಿದ್ದು, ಇದರಿಂದ ವಿಜಯಪುರ ಜಿಲ್ಲೆಯ ಭಾಗ್ಯದ ಬಾಗಿಲು ತೆರೆಯಲಿದೆ.

**ಕೃಷ್ಣಾ ಮೇಲ್ದಂಡೆ ಯೋಜನೆಯ ಇತರೆ ವಿಶೇಷತೆಗಳು**

ಈ ಯೋಜನೆಯಲ್ಲಿ ದೇಶದಲ್ಲೇ ಅತ್ಯಂತ ದೊಡ್ಡದಾದ ಕೆಳ ಕಾಣಿಸಿದ ಎರಡು ಸೂಕ್ಷ್ಮ ನೀರಾವರಿ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ :

೧. ಬಾಗಲಕೋಟೆ ಜಿಲ್ಲೆಯ ಹುನಗುಂದ ತಾಲೂಕಿನಲ್ಲಿ ಬರುವ ರಾಮಥಾಳ (ಮರೋಳ) ಏತ ನೀರಾವರಿ ಯೋಜನೆಯ ೨ನೇ ಹಂತದಡಿ ೨೪,೦೦೦ ಹೆಕ್ಟೇರ್ ಪ್ರದೇಶದಲ್ಲಿ ಸೂಕ್ಷ್ಮ ನೀರಾವರಿಯನ್ನು ಅಳವಡಿಸಲಾಗುತ್ತದೆ.

೨. ಕೃಷ್ಣಾ ನದಿಯ ಆಲಮಟ್ಟಿ ಜಲಾಶಯದ ಹಿನ್ನೀರಿನಿಂದ ಬಾಗಲಕೋಟ ಜಿಲ್ಲೆ ಜಮಖಂಡಿ ತಾಲೂಕಿನ ಹಳೇ ಜಿನವಾಡ ಗ್ರಾಮದಿಂದ ಮಳೆಗಾಲದಲ್ಲಿ ಮುಂಗಾರು ಬೆಳೆಗಾಗಿ ೩.೮ ಟಿಎಂಸಿ ನೀರನ್ನೆತ್ತಿ ವಿಜಯಪುರ, ಜಮಖಂಡಿ ಹಾಗೂ ಅಥಣಿ ತಾಲೂಕಿನ ಸುಮಾರು ೧,೦೫,೦೧೮ ಎಕರೆ (೪೨,೫೦೦ ಹೆಕ್ಟೇರ್) ಭೂ ಪ್ರದೇಶಕ್ಕೆ ನೀರಿನ ಸದ್ಬಳಕೆ ಹಾಗೂ ಸೂಕ್ಷ್ಮ ನೀರಾವರಿ ಪದ್ಧತಿಯ ಮುಖಾಂತರ ನೀರಾವರಿ ಸೌಲಭ್ಯ ಕಲ್ಪಿಸಲು ಯೋಜಿಸಲಾಗಿದೆ.

**ನೀರಾವರಿಯ ಉಪಯೋಗಗಳು – ಕೃಷಿ ಮತ್ತು ಹೈನುಗಾರಿಕೆ**

* ಸದ್ಯಕ್ಕೆ ರೂಢಿಯಲ್ಲಿರುವ ಸಜ್ಜೆ, ಜೋಳ, ತೊಗರಿ ಮತ್ತು ಕಡಲೆ ಬೆಳೆಗಳ ಬದಲು ಆರ್ಥಿಕವಾಗಿ ಹೆಚ್ಚು ಲಾಭದಾಯಕವಾಗಿರುವ ಶೇಂಗಾ, ಮೆಣಸಿನಕಾಯಿ, ಹತ್ತಿಯಂತಹ ಬೆಳೆಗಳನ್ನು ಬೆಳೆಯಬಹುದು.
* ವಿಜಯಪುರ ಜಿಲ್ಲೆಯಲ್ಲಿ ಶೇಕಡ ೭೦ಕ್ಕೂ ಹೆಚ್ಚು ಪ್ರದೇಶದಲ್ಲಿ ಒಂದೇ ಹಂಗಾಮಿನಲ್ಲಿ ಬೆಳೆ ತೆಗೆಯಲು ಅವಕಾಶವಿದೆ. ನೀರಾವರಿಯಿಂದ ಮುಂಗಾರು ಮತ್ತು ಹಿಂಗಾರು ಎರಡೂ ಹಂಗಾಮುಗಳಲ್ಲಿ ಬೆಳೆ ತೆಗೆದು ರೈತರು ತಮ್ಮ ಆರ್ಥಿಕ ಪರಿಸ್ಥಿತಿಯನ್ನು ಉತ್ತಮಪಡಿಸಿಕೊಳ್ಳಬಹುದು.
* ವಿಜಯಪುರ ಜಿಲ್ಲೆಯ ಹವಾಮಾನ, ತೋಟಗಾರಿಕೆ ಬೆಳೆಗಳಿಗೆ ಪೂರಕ ವಾಗಿರುವದರಿಂದ, ಕಡಿಮೆ ಆಳದಿಂದ ಆಳವಾದ ಜಮೀನಿನಲ್ಲಿ ತೋಟಗಾರಿಕೆ ಬೆಳೆಗಳನ್ನು ತೆಗೆಯಬಹುದು. ದ್ರಾಕ್ಷಿ, ದಾಳಿಂಬೆ, ನಿಂಬೆ ಹಾಗೂ ಇತರೆ ಹಣ್ಣಿನ ಗಿಡಗಳನ್ನು ಹಾಗೂ ತರಕಾರಿ ಹಾಗೂ ಪುಷ್ಪಗಳನ್ನು ಬೆಳೆದು ಹೆಚ್ಚಿನ ಉತ್ಪನ್ನವನ್ನು ಪಡೆಯಬಹುದು.
* ವಿಜಯಪುರ ಜಿಲ್ಲೆಯಲ್ಲಿ ಹೈನುಗಾರಿಕೆ ಬಹಳ ಹಿಂದುಳಿದಿದೆ, ನೀರಾವರಿ ಬಂದನಂತರ ಸಾಕಷ್ಟು ಪ್ರಮಾಣದ ನೀರು, ಹುಲ್ಲು ಮತ್ತು ಮೇವು ದೊರೆಯು ವದರಿಂದ ಹೈನುಗಾರಿಕೆಯನ್ನು ಅಭಿವೃದ್ಧಿಪಡಿಸಲು ಸಾಕಷ್ಟು ಅವಕಾಶವಿದೆ.

**ಪೂರಕ ಉದ್ಯಮ**

ನೀರಾವರಿಗೆ ಒಳಪಟ್ಟ ಪ್ರದೇಶಗಳಲ್ಲಿ ಕೃಷಿ, ತೋಟಗಾರಿಕೆ ಹಾಗೂ ಹೈನುಗಾರಿಕೆಗೆ ಸಂಬಂಧಿಸಿದಂತೆ ಕೆಳಗೆ ಕಾಣಿಸಿದ ಪೂರಕ ಉದ್ಯಮಗಳನ್ನು ಪ್ರಾರಂಭಿಸಲು ಸಾಕಷ್ಟು ಅವಕಾಶಗಳಿರುತ್ತವೆ. ಈ ಪ್ರದೇಶಗಳಲ್ಲಿ ಸ್ಥಾಪಿಸಬಹುದಾದ ವಿವಿಧ ಉದ್ಯಮಗಳನ್ನು ಈ ಕೆಳಗೆ ಪಟ್ಟಿ ಮಾಡಲಾಗಿದೆ :

* ಆಹಾರ ಸಂಸ್ಕರಣೆ ಘಟಕಗಳು.
* ಡೈರಿ ಕೈಗಾರಿಕೆ, ಹಾಲಿನ ಮೌಲ್ಯವರ್ಧನೆ ಮಾಡಿ ಐಸ್ ಕ್ರೀಂ, ಚೀಸ್ ಮತ್ತು ಹಾಲಿನ ಪುಡಿಯನ್ನು ಸಿದ್ಧಪಡಿಸುವ ಘಟಕಗಳನ್ನು ಸ್ಥಾಪಿಸುವುದು.
* ಹಣ್ಣು ಮತ್ತು ಪುಷ್ಪ: ಇಂತಹ ವಸ್ತುಗಳನ್ನು ಬಹಳಷ್ಟು ಸಮಯದವರೆಗೆ ಸಂಗ್ರಹಿಸಿಡಲು ಶಿಥಿಲೀಕರಣ ಘಟಕಗಳು.
* ಗೋದಾಮುಗಳನ್ನು ನಿರ್ಮಿಸಿ ರೈತರು ಬೆಳೆದ ಬೆಳೆಗಳನ್ನು / ಬೀಜವನ್ನು ಬಹಳ ಕಾಲದವರೆಗೆ ಸಂಗ್ರಹಿಸಿ ಇಡಬಹುದು.
* ಕೃಷಿಗೆ ಸಂಬಂಧಿಸಿದ ಇತರೆ ಉದ್ಯಮಗಳ ಸ್ಥಾಪನೆ.

| ಕ್ರ.ಸಂ. | ಹಂತ–೩ರ ಯೋಜನೆಯ ಉಪಯೋಜನೆಗಳು | ಹಂಚಿಕೆಯಾದ ನೀರು (ಟಿಎಂಸಿ) | ನೀರಾವರಿ ಕ್ಷೇತ್ರ (ಹೆಕ್ಟೇರ್) |
|---|---|---|---|
| ೧. | ಮುಳವಾಡ ಏತ ನೀರಾವರಿ ಯೋಜನೆ | ೫೪.೪ | ೨,೨೭,೯೬೬ |
| ೨. | ಚಿಮ್ಮಲಗಿ ಏತ ನೀರಾವರಿ ಯೋಜನೆ | ೨೦.೭ | ೮೭,೦೬೭ |
| ೩. | ಇಂಡಿ ಏತ ನೀರಾವರಿ ಯೋಜನೆ* (ಗುತ್ತಿ ಬಸವಣ್ಣ) | ೪.೯ | ೨೦,೯೮೦ |
| ೪. | ರಾಂಪುರ ಏತ ನೀರಾವರಿ ಯೋಜನೆ | ೩.೨ | ೧೩,೯೨೩ |

* ಕಲಬುರಗಿ ಜಿಲ್ಲೆಯ ಸ್ವಲ್ಪ ಪ್ರದೇಶ ನೀರಾವರಿಗೆ ಒಳಪಡುತ್ತದೆ.

**ಇತರ ಉಪಯೋಗಗಳು**

* ಬಹಳಷ್ಟು ಪ್ರದೇಶ ನೀರಾವರಿಗೆ ಒಳಪಡುವುದರಿಂದ ಅಂತರ್ಜಲದ ಮಟ್ಟ ಹೆಚ್ಚಿ, ಬಾವಿಗಳ ಇಳುವರಿ ಹೆಚ್ಚುತ್ತದೆ ಮತ್ತು ವರ್ಷಪೂರ್ತಿ ನೀರು ದೊರೆಯುತ್ತದೆ.
* ಕಾಲುವೆ ನೀರಾವರಿಯಿಂದ ಉತ್ತಮ



ಗುಣಮಟ್ಟದ ನೀರು ಅಂತರ್ಜಲವನ್ನು ಸೇರುವುದರಿಂದ, ಈ ಮೊದಲು ನೀರು ಸವಳಿದ್ದರೂ ಸಹ ನೀರಿನ ಗುಣಮಟ್ಟ ಸುಧಾರಿಸುತ್ತದೆ.

* ಕಾಲುವೆ ಸಮೀಪದಲ್ಲಿ ಇರುವ ನೀರಾವರಿಗೆ ಒಳಪಡದ ಪ್ರದೇಶಗಳಲ್ಲಿ ಅಂತರ್ಜಲದ ಮಟ್ಟ ಹೆಚ್ಚಿ, ಆ ಪ್ರದೇಶವನ್ನು ನೀರಾವರಿಗೆ ಒಳಪಡಿಸಬಹುದು.
* ಜಿಲ್ಲೆಯ ಬಹಳಷ್ಟು ಪ್ರದೇಶ ನೀರಾವರಿಗೆ ಒಳಪಡುವುದರಿಂದ ಸ್ಥಳೀಯ ಹವಾಮಾನದಲ್ಲಿ ಬದಲಾವಣೆಯಾಗಿ ಗರಿಷ್ಠ ಉಷ್ಣಾಂಶ ಕಡಿಮೆಯಾಗಿ, ಮಳೆಯ ಪ್ರಮಾಣದಲ್ಲಿ ಸ್ವಲ್ಪ ಹೆಚ್ಚಳವಾಗುವ ಸಾಧ್ಯತೆ ಇರುತ್ತದೆ ಮತ್ತು ಶುಷ್ಕತೆಯ ಸೂಚ್ಯಂಕ ಕಡಿಮೆಯಾಗುತ್ತದೆ.

**ಸಾಮಾಜಿಕ ಬದಲಾವಣೆಗಳು**

* ಸದ್ಯಕ್ಕೆ, ರಾಜ್ಯದ ಪ್ರಮುಖ ಪಟ್ಟಣಗಳಿಗೆ ಹಾಗೂ ನೆರೆ ರಾಜ್ಯಗಳಿಗೆ ವಿಜಯಪುರದ ಶ್ರಮಿಕ ವರ್ಗ ಕೂಲಿ ಕೆಲಸಕ್ಕಾಗಿ ವಲಸೆ ಹೋಗುವುದು ಸಾಮಾನ್ಯ ವಿಷಯವಾಗಿದೆ. ನೀರಾವರಿ ಬಂದನಂತರ ವಲಸೆ ಹೋಗುವ ಸಮಸ್ಯೆ ತಪ್ಪುತ್ತದೆ.
* ವಿಜಯಪುರದಲ್ಲಿ ವಿಶೇಷ ಉದ್ಯಮಗಳು ಸ್ಥಾಪನೆಯಾದರೆ ಬೇರೆ ಸ್ಥಳದಿಂದ ಜನರು ಇಲ್ಲಿಗೆ ಕೆಲಸಕ್ಕಾಗಿ ವಲಸೆ ಬರುತ್ತಾರೆ.

**ನೀರಾವರಿಯ ದುಷ್ಪರಿಣಾಮಗಳು**

ನೀರಾವರಿಯ ಸದ್ಬಳಕೆಯಾದರೆ ಮೇಲೆ ಪಟ್ಟಿ ಮಾಡಿದ ಎಲ್ಲ ಉಪಯೋಗಗಳನ್ನು ಪಡೆಯಬಹುದು, ಆದರೆ ನೀರನ್ನು ಸದ್ಬಳಕೆ ಮಾಡಿಕೊಳ್ಳದಿದ್ದರೆ ಕೆಳಗೆ ವಿವರಿಸಿದ ದುಷ್ಪರಿಣಾಮಗಳನ್ನು ಎದುರಿಸಬೇಕಾಗುವುದು :

* ನೀರಿನ ಅತಿ ಬಳಕೆಯಿಂದ ಜಮೀನು ಜವಗು, ಸವಳು ಮತ್ತು ಕ್ಷಾರವಾಗುತ್ತದೆ.
* ನೀರಾವರಿಯಿಂದ ನೀರಿನ ಪಾತಳಿ ಮೇಲಕ್ಕೆ ಬಂದು, ಕೆಳಗಿನ ಪದರುಗಳ ಲವಣವನ್ನು ಮೇಲಕ್ಕೆ ತರುತ್ತವೆ ಹಾಗೂ ಹೆಚ್ಚಿನ ಪ್ರಮಾಣದ ನೀರು ಅಗತ್ಯವಿರುವ ಬೆಳೆಗಳನ್ನು ಬೆಳೆಯುವದರಿಂದ ಲವಣವು ಬೇರಿನ ವಲಯದಲ್ಲಿ ಸಂಗ್ರಹವಾಗುತ್ತದೆ.
* ಕಪ್ಪು / ಎರೆ ಜಮೀನುಗಳಲ್ಲಿ ಕಡಿಮೆ ಬಸಿಯುವ ಸಾಮರ್ಥ್ಯ ಇರುವದರಿಂದ ಜವಗಿನ ಮತ್ತು ಸವಳಿನ ಸಮಸ್ಯೆ ಕೆಂಪು / ಮಡ್ಡಿ ಮಣ್ಣಿನ ಜೊತೆ ಹೋಲಿಸಿ ನೋಡಿದಾಗ ಈ ಸಮಸ್ಯೆ ಅಧಿಕವಾಗುವುದು ಕಂಡುಬರುತ್ತದೆ.
* ಈಗಾಗಲೇ ನೀರಾವರಿಯಾದ ಅಚ್ಚುಕಟ್ಟು ಪ್ರದೇಶಗಳಲ್ಲಿ ಈ ಸಮಸ್ಯೆ ಕಾಣಿಸಿಕೊಂಡಿದೆ. ಕೃಷ್ಣಾ ಮೇಲ್ದಂಡೆ ಯೋಜನೆಯ ಒಂದನೇ ಹಂತದ ಯೋಜನೆಗಳಲ್ಲಿ ಶೇಕಡ ೧೦–೧೨ ಪ್ರದೇಶ ಜವಗು ಮತ್ತು ಸವಳಿನಿಂದ ಬಾಧಿತವಾಗಿದೆ.

ಜವಗು ಮತ್ತು ಸವಳಿನಿಂದ ಕೂಡಿದ ಜಮೀನನ್ನು ಸುಧಾರಿಸದಿದ್ದರೆ ಬೆಳೆಗಳ ಇಳುವರಿಯ ಮೇಲೆ ವ್ಯತಿರಿಕ್ತ ಪರಿಣಾಮ ಬೀರಿ, ಜಮೀನು ಬರಡು ನೆಲವಾಗಿ ಪರಿವರ್ತಿತವಾಗುವ ಸಾಧ್ಯತೆ ಇರುತ್ತದೆ.

**ಜಮೀನು ಕೆಡದಂತೆ ಕೈಕೊಳ್ಳಬೇಕಾದ ಕ್ರಮಗಳು**

* ಯೋಜನೆಯಲ್ಲಿ ನಿಗದಿಪಡಿಸಿದ ಬೆಳೆಗಳನ್ನು ಬೆಳೆಯಬೇಕು.
* ಸತತವಾಗಿ ಕಬ್ಬನ್ನು ಬೆಳೆಯಬಾರದು.
* ಕಬ್ಬಿಗೆ ಅವಶ್ಯವಾಗಿ ಡ್ರಿಪ್ ನೀರಾವರಿ ಮತ್ತು ಇತರೆ ಬೆಳೆಗಳಿಗೆ ಸೂಕ್ಷ್ಮ ನೀರಾವರಿ ಅಳವಡಿಸಬೇಕು.
* ಜಮೀನನ್ನು ಮಟ್ಟ ಮಾಡಬೇಕು.
* ಸೂಕ್ತವಾದ ನೀರಾವರಿ ಪದ್ಧತಿಗಳನ್ನು ಅಳವಡಿಸಿಕೊಳ್ಳಬೇಕು.
* ಹೆಚ್ಚಿನ ಪ್ರಮಾಣದಲ್ಲಿ ನೀರು ಹರಿದುಹೋಗಲು ತೆರೆದ ಬಸಿಗಾಲುವೆಗಳ ನಿರ್ಮಾಣ ಮಾಡಬೇಕು.
* ನೈಸರ್ಗಿಕ ಕಾಲುವೆಗಳನ್ನು ಆಗಾಗ್ಗೆ ಸ್ವಚ್ಛಗೊಳಿಸಬೇಕು.
* ವಾರಾಬಂದಿ ಪದ್ಧತಿಯನ್ನು ಅಳವಡಿಸಿಕೊಳ್ಳಬೇಕು.
* ನೀರು ಬಳಕೆದಾರರ ಸಂಘಗಳನ್ನು ಸ್ಥಾಪಿಸಿ, ಅವರಿಗೆ ನೀರಿನ ಸೂಕ್ತ ಬಳಕೆಯ ಜವಾಬ್ದಾರಿಯನ್ನು ಕೊಡಬೇಕು.
* ರೈತರಿಗೆ ನೀರು ಬಳಕೆಯ ತರಬೇತಿ ಕೊಡಬೇಕು.

ಈ ಎಲ್ಲ ಯೋಜನೆಗಳು ಪೂರ್ಣಗೊಂಡಾಗ, ವಿಜಯಪುರ ಜಿಲ್ಲೆಯ ಸುಮಾರು ೬೦ ಪ್ರತಿಶತ ಜಮೀನು ನೀರಾವರಿಗೆ ಒಳಪಟ್ಟು, ಆರ್ಥಿಕ–ಸಾಮಾಜಿಕ ಪರಿಸ್ಥಿತಿ ಸುಧಾರಿಸುತ್ತದೆ. ಆ ಮೂಲಕ ಬರಗಾಲದ ಹಣೆಪಟ್ಟಿ ಕಳಚಿಕೊಂಡು ಈ ಜಿಲ್ಲೆ ರಾಜ್ಯದ ಅತ್ಯಂತ ಸುಭಿಕ್ಷ ಮತ್ತು ಶ್ರೀಮಂತ ಜಿಲ್ಲೆಯಾಗುವದೆಂದು ಆಶಿಸೋಣ.

**ಡಾ॥ ಎಮ್. ಎಸ್. ಶಿರಹಟ್ಟಿ**
ಪ್ರಾಧ್ಯಾಪಕರು (ಕೃಷಿ ಅಭಿಯಂತರಿಕೆ), ಪ್ರಾದೇಶಿಕ ಕೃಷಿ ಸಂಶೋಧನಾ ಕೇಂದ್ರ, ವಿಜಯಪುರ

## ರಾತ್ರಿಯೊಂದಿಗೆ ಮಾತನಾಡುತ್ತೇನೆ ?

ನಾನು
ರಾತ್ರಿಯೊಂದಿಗೆ ಮಾತನಾಡುತ್ತೇನೆ
ಎಲ್ಲರೂ ನಿಶ್ಚಿಂತೆ ನಿದ್ರೆಗ್ಹೋದ ಮೇಲೆ
ಒಬ್ಬನೇ ಭೋಗ ಕಳಚಿದ ಯೋಗಿಯಾಗಿ
ಬೋಧಿ ವೃಕ್ಷದ ಬುದ್ಧನಂತೆ !

ರಾತ್ರಿ ನನಗೆ
ಅಜ್ಞಾನ, ತಮಸ್ಸು, ಅಂಧಕಾರವಲ್ಲ
ಅರಿವು ಸುರಿಸುವ ತಾಯಿ
ನಿಜದೆಡೆಗೆ ಕರೆವ ಮಾಯಿ !

ನನಗೆ
ಹಗಲೆಂದರೆ ಬದುಕು ಬಂಧನ
ಮೇಟಿಗೆ ಎತ್ತುಗಳ ಕಟ್ಟಿ ಹಂತಿ ಹೂಡಿದಂತೆ ?
ಪ್ರತಿದಿನ ಬದುಕ ಬಾಯಿಯೊಳಗೆ
ಅರೆದರೆದು ಪುಡಿಪುಡಿಯಾಗುತ್ತೇನೆ !

ನನಗೆ
ರಾತ್ರಿಯೆಂದರೆ ಕೊರಡು ಚಂದನ
ಪಂಜರದ ಗಿಳಿ ಆಗಸಕೆ ಚಿಟ್ಟಂತೆ !



**ಸಂಗಮೇಶ ಉಪಾಸೆ**
ನಂ. ೨೭೩, 'ಪ್ರೇಮಸಂಗಮ' ೩ನೇ ಮುಖ್ಯರಸ್ತೆ, ೫ನೇ ಅಡ್ಡರಸ್ತೆ
ವಿಧಾನಸೌಧ ಲೇಔಟ್, ಬೆಂಗಳೂರು – ೫೬೦೦೯೭

"ಜಗತ್ತಿನಲ್ಲಿ ಮನುಷ್ಯರೆ ಇಲ್ಲ... ಬರೀ ಮುಖವಾಡಗಳು. ಒಂದರ ಹಿಂದೆ ಇನ್ನೊಂದು. ಅದರ ಹಿಂದೆ ಮತ್ತೊಂದು." ಮದುವೆ ಮನೆಯಲ್ಲಿ ಈ ವ್ಯಂಗ್ಯದ ಪ್ರಾತ್ಯಕ್ಷಿಕೆಯಾದೀತು. ನಾನು ಹೇಳುತ್ತಿರುವುದಕ್ಕೆ ಖಂಡಿತ ಅಪವಾದಗಳಿವೆ. ಕಳವಳವೆಂದರೆ ಮೌಲಿಕವಾದ ಉತ್ಸಾಹ, ಲವಲವಿಕೆ, ಸಂತೋಷ ಮದುವೆ ಮನೆಯಿಂದ ಮಾಯವಾದುವಲ್ಲ ಎನ್ನುವುದು. ಒಂದೆರಡು ಭಕ್ಷ್ಯಗಳು ಕಡಿಮೆಯಿರಲಿ ಅಡ್ಡಿಯಿಲ್ಲ. ಮದುವೆ ಮನೆಗೆ ಹಿಂದೆ ಇದ್ದ ಕಳೆ ಮತ್ತೆ ಬರಲಿ, ವಧೂ-ವರರ ಪೋಷಕರು, ಬಂಧುಗಳು ಊಟ ಮಾಡುತ್ತಿರುವವರನ್ನು ನಿಧಾನವಾಗಿ ತೆಗೆದುಕೊಳ್ಳಿ ಅಂತ ನಗುಮುಖದಿಂದ ಆದೇಶಿಸುವ ವ್ಯವಧಾನವಿಟ್ಟುಕೊಳ್ಳಲಿ, ಅಲ್ಲವೆ ?

# ಕಳೆದುಹೋದ ಮದುವೆ ಮನೆ!

**ಬಿಂಡಿಗನವಿಲೆ ಭಗವಾನ್**



'ಮದುವೆಗೆ, ಮಸಣಕ್ಕೆ ತಪ್ಪದೇ ಹೋಗಬೇಕು' – ಇದು ಜನಪದರ ಕಟ್ಟುಪಾಡು. ಹಾಗಾಗಿ ಎಂತಹ ವೈರತ್ವವಿರಲಿ ಒಬ್ಬರ ಮನೆ ವಿವಾಹ ಸಮಾರಂಭಕ್ಕೆ ಬಿಡದೆ ಹಾಜರಾಗುವ ಇರಾದೆ ವಿಶೇಷವಾಗಿ ನಮ್ಮ ಗ್ರಾಮೀಣ ಪ್ರದೇಶಗಳಲ್ಲಿ ಇದೆ. ಅಂತೆಯೆ ಜಮೀನು ವ್ಯಾಜ್ಯ, ಹಣಕಾಸು ವ್ಯವಹಾರದಲ್ಲಿ ಉಂಟಾಗುವ ಘನಘೋರ ಕಲಹ, ಸುರಿಸುವ ಬೈಗುಳ, ಮಾಡುವ ಅಪಮಾನ, ರಾಜಕಾರಣದಲ್ಲಿನ ಕಡು ಭಿನ್ನಾಭಿಪ್ರಾಯ. ಇವು ಯಾವುದನ್ನೂ ಲೆಕ್ಕಿಸದೆ ಒಂದು ಮನೆಯಲ್ಲಿನ ಸಾವು ಅವರಿವರೆನ್ನದೆ ಎಲ್ಲರನ್ನೂ ಸೆಳೆಯುತ್ತದೆ. ನಾನು ಮದುವೆ ಅರ್ಥಾತ್ ಮದುವೆ ಮನೆ ಬಗ್ಗೆ ಒಂದಷ್ಟು ನಿಮ್ಮೊಂದಿಗೆ ಹಂಚಿಕೊಳ್ಳುತ್ತೇನೆ. ನಾನು ಎಷ್ಟೇ ಪ್ರಯತ್ನಿಸಿದರೂ ಅಂದಕಾಲತ್ತಲಿನ ಮದುವೆಗಳ ಏರ್ಪಾಟನ್ನು ಮರೆಯಲಾರೆ. ಆರು ದಶಕಗಳ ಹಿಂದೆ ಮದುವೆ ಎಂದರೆ ಐದು ದಿನಗಳ ಕಾರ್ಯಕ್ರಮ! ಮಹಾನಗರಗಳಲ್ಲಿ ಛತ್ರದ ಪರಿಕಲ್ಪನೆಯಿತ್ತು, ಸರಿ. ಆದರೆ ಗ್ರಾಮಗಳಲ್ಲಿ ವರ ಅಥವಾ ವಧುವಿನ ಮನೆಯಲ್ಲೇ ವಿವಾಹದ ಏರ್ಪಾಡು. ಹೇಗೂ ಮನೆಯೆ ಛತ್ರದಷ್ಟು ವಿಶಾಲವಿರುತ್ತಿತ್ತು. ಜೊತೆಗೆ ಇನ್ನೊಂದು ಮನೆ ಬಿಡಿಸಿಕೊಂಡರಾಯಿತು. ಇಡೀ ಗ್ರಾಮವೇ ಶುಭಕಾರ್ಯದಲ್ಲಿ ಭಾಗಿಯಾಗುತ್ತಿತ್ತೆನ್ನಿ. ಬಹುತೇಕ ವಧುವಿನ ತಂದೆಯದೇ ಎಲ್ಲ ವ್ಯವಸ್ಥೆಯ ಹೊಣೆ. ಹಸೆಮಣೆ ಮೇಲೆ ಕೂತ ಆತನನ್ನು ಅಡಿಗೆಯವರು, "ಬನ್ನಿ ಸ್ವಲ್ಪ ಇಲ್ಲಿ. ಒಗ್ಗರಣೆಗೆ ಕರಿಬೇವು ಸಾಲದು" ಅಂತ ತೋಳು ಹಿಡಿದು ಎಳೆದಿದ್ದನ್ನು ನಾನು ಕಣ್ಣಾರೆ ಕಂಡಿದ್ದೇನೆ. ಸರಿ, ಆಗ ಮತ್ಯಾರೊ ದಂಪತಿಗಳು ಆತನ ಪರವಾಗಿ ಹೆಣ್ಣನ್ನು ಧಾರೆಯೆರೆದುಕೊಟ್ಟಿದ್ದಾಯಿತು! ಐದು ದಿನಗಳ ವಿವಾಹ ಅಂದೆನಲ್ಲ. ದೇವರ ಸಮಾರಾಧನೆ, ವರಪೂಜೆ, ಧಾರೆ, ಆರತಿ-ಅಕ್ಷತೆ, ಬೀಗರೌತಣ – ಎಲ್ಲ ಒಂದೊಂದು ದಿನ. ಮದುವೆಗೆ ಆಗಮಿಸಿದ ಬಂಧುಮಿತ್ರರು ತದನಂತರವೂ ಗ್ರಾಮ ಬಿಡಲು ಮನಸ್ಸಾಗದೆ ನಾಲ್ಕಾರು ದಿನಗಳವರೆಗೆ ಅಲ್ಲೇ ತಂಗುತ್ತಿದ್ದರೆನ್ನಿ. ಆಹ್ವಾನಪತ್ರಿಕೆಯಲ್ಲಿ, ಇನ್ನು ಮುಂದೆ 'ತಾವು ವಿವಾಹಕ್ಕೆ ನಾಲ್ಕು ದಿನ ಮೊದಲೇ ತಮ್ಮ ಬಂಧುಮಿತ್ರರೊಂದಿಗೆ ತಪ್ಪದೆ ಬರಬೇಕಾಗಿ ಬೇಡುತ್ತೇವೆ...' ಎನ್ನುವ ಒಕ್ಕಣೆಯನ್ನು ಕನ್ಯಾಪಿತೃ ಏಕಾದರೂ ಮುದ್ರಿಸಿದೆನೊ ಅಂತ ಮರುಗುತ್ತಿದ್ದುದನ್ನು ನಾನು ಕಣ್ಣಾರೆ ಕಂಡಿದ್ದೇನೆ. ಮೇಲಾಗಿ ಇಸ್ಪೀಟಾಡಿ ಹಣ ಕಳೆದುಕೊಂಡ ನೆಂಟರಿಗೆ ಬಸ್ ಚಾರ್ಜ್ ನೀಡಿ ಆದಷ್ಟು ತ್ವರಿತವಾಗಿ ಅವರವರ ಬಸ್ಸು ಹತ್ತಿಸುತ್ತಿದ್ದುದೂ ಅಷ್ಟೇ ನಿಜ. ಒಟ್ಟಾರೆ ವಿವಾಹ ಸಮಾರಂಭಕ್ಕೆ ಬಂದು ವಾಪಸ್ಸಾಗುವವರು ತಂತಮ್ಮ ಊರು ಸೇರುವ ವೇಳೆಗೆ ಅಡುಗೆ ಮಾಡುವುದನ್ನೇ ಮರೆಯುತ್ತಿದ್ದರು.

ಜೀವನಶೈಲಿ ಎನ್ನುವುದುಂಟಲ್ಲ. ಅದು ಸದಾ ಬದಲಾಗುತ್ತಿರುತ್ತದೆ. ಇಂದು ಪೇಟೆ, ಹಳ್ಳಿ ಎನ್ನದೆ ಮದುವೆ ಒಂದು 'ಪಾರ್ಟಿ' ಎನ್ನುವಷ್ಟರಮಟ್ಟಿಗೆ ಬಂದು ತಲುಪಿದೆ. ಅಂದಕಾಲತ್ತಲೆ ಧಾರೆಯ ನಂತರ ಆರತಿ-ಅಕ್ಷತೆ. ಇಂದು ಎಲ್ಲಾ ತಿರುಗುಮುರುಗು. ಹಿಂದಿನ ಸಂಜೆ ಆರತಿ-ಅಕ್ಷತೆ (ಅಕ್ಷತೆ ಹಾಕಿದ್ದನ್ನು ನಾನಂತೂ ಕಾಣೆ!). ಮರುದಿನ ಧಾರೆ. ಮಧ್ಯಾಹ್ನ ಮೂರು-ಮೂರೂವರೆ ಗಂಟೆ ಹೊತ್ತಿಗೆ ಛತ್ರ ಖಾಲಿ. ಹತ್ತು ನಿಮಿಷಗಳೂ ಬೇಡ. ಇನ್ನೊಂದು ಮದುವೆ ತಂಡ ಅದೆಲ್ಲಿಂದಲೋ ಭರ್ರನೆ ಬಂದಿಳಿದಿರುತ್ತದೆ. ಬೆಳಗ್ಗೆಯಿಂದ ಮಧ್ಯಾಹ್ನದ ತನಕ ಮಾತ್ರ. ಅಂದರೆ ಛತ್ರದವರ ಲೆಕ್ಕದಲ್ಲಿ ಒಂದು ದಿನದ ವಿವಾಹದ ಏರ್ಪಾಡು ವಿರಳವೇನಲ್ಲ. ವಧುವಿನ ಪೋಷಕರು ನೋಟಿನ ಕಂತೆ ಎಣಿಸಿ ಕೈ ಕಟ್ಟಿ ಕೂತಿದ್ದರೆ ಆಯಿತು. ಎಲ್ಲವೂ ಸುಸೂತ್ರ. ಹೇಳಿಕೇಳಿ 'ಪ್ಯಾಕೇಜ್' ಯುಗ. ಅಡುಗೆ, ಪೌರೋಹಿತ್ಯ, ತಾಂಬೂಲ, ಹಾರ, ಚಪ್ಪರ, ಸ್ವಾಗತ ಕಮಾನು, ಆಹ್ವಾನಿತರನ್ನು 'ಬಂದಿರಾ ಹೋಗುವಿರಾ' ಅಂತ

ವಿಚಾರಿಸಿಕೊಳ್ಳುವುದು, ಓಲಗ, ಕಾಫಿ, ಟೀ ಶರ್ಕರ ಸಹಿತವೊ ರಹಿತವೊ ಎಂದು ಕೇಳುವುದು... ಎಲ್ಲವೂ ಆ 'ಪ್ಯಾಕೇಜ್' ವ್ಯಾಪ್ತಿಗೆ ಬರುತ್ತದೆ. ನಿಮ್ಮ ಅನುಭವ ಹೇಗೋ ಕಾಣೆ. ಈಚೀಚೆಗೆ 'ಮದುವೆ ಮನೆ' ತೀರಾ ಕೃತಕವಾಗುತ್ತಿದೆ ಎನ್ನಿಸುತ್ತದೆ. ಅಲ್ಲಿನ ಸಡಗರ ಸಂಭ್ರಮಗಳು ತಮ್ಮ ಸ್ವಾಭಾವಿಕತೆಯನ್ನು ಕಳೆದುಕೊಳ್ಳುತ್ತಿವೆ. ವಧು-ವರರನ್ನೂ ಮೊದಲ್ಗೊಂಡಂತೆ ಮದುವೆ ಮನೆಯಲ್ಲಿ ಓಡಾಡುವವರು ಮುಖವಾಡಗಳನ್ನು ಹೊತ್ತವರೆಂದೇ ಹೇಳಲೇಬೇಕಿದೆ. ನನಗೆ ಹೀಗೆ ಅನ್ನಿಸಲು ತಕ್ಕಷ್ಟು ಸಮರ್ಥನೆಗಳಿವೆ. ಲಗ್ನಕ್ಕೆ ಬಂದಿದ್ದೇವೆಯೋ ಅಥವಾ ಯಾವುದಾದರೂ ಸೀರೆ, ಒಡವೆ, ಉಡುಗೆ, ಕಾರುಗಳ ಪ್ರದರ್ಶನಕ್ಕೆ ಬಂದಿದ್ದೇವೆಯೋ ಎಂಬ ಭ್ರಮೆಯಾದೀತು. ನಿನ್ನೆ ನಾನು ಬೆಂಗಳೂರಿನ ಹೊರವಲಯದಲ್ಲಿ ಒಂದು ಮದುವೆಗೆ ಹೋಗಿದ್ದೆ. ಅದೋ, ಒಂದು ದೊಡ್ಡ ಸಂಕೀರ್ಣ. ಅದರಲ್ಲಿ ಆರು ಛತ್ರಗಳಿವೆ. ಪ್ರಜ್ಞೆ ಸ್ವಲ್ಪ ಕೈಕೊಟ್ಟರೂ ಮತ್ಯಾರದೊ ಮನೆ ವಿವಾಹ ಮಂಟಪದೊಳಕ್ಕೆ ಕಾಲಿಟ್ಟಿರುತ್ತೇವೆ. ನಾನು ಒಂದೆಡೆ ನುಸುಳಿ ಅರ್ಧ ತಾಸು ತಬ್ಬಿಬ್ಬಿನಲ್ಲೇ ಕಾಲಹರಣ ಮಾಡಿದ್ದೆ! ನನಗೆ ಗೊತ್ತಿರುವ ಒಬ್ಬ ನೆಂಟರೂ ಅಲ್ಲಿ ಕಾಣದಾದಾಗ ಹೊರಗೆ ಹಾರಿದೆ. ಆಜೂಬಾಜಿನಲ್ಲಿದ್ದ ಧೂಮಲೀಲಾ ನಿರತರೊಬ್ಬರು, 'ಓಹ್, ನೀವಾ!' ಅಂತ ನನ್ನನ್ನು ಗುರುತಿಸಿ ಸೂಕ್ತ ವಿಭಾಗಕ್ಕೆ ಕರೆದೊಯ್ದರು. ಉಸ್ಸಪ್ಪಾ ಅಂತ ಕೂತಾಗ ಶುಂಠಿ ಪಾನಕ ಬಂತು. ಆ 'ರಸಋಷಿ' ನನಗೆ ಸಾಕ್ಷಾತ್ ದೇವರ ಹಾಗೆ ತೋರಿದ. ನನ್ನ ದಣಿವು ಆ ಮಟ್ಟಿಗೆ ನಿವಾರಣೆಯಾಗಿತ್ತು. ನನ್ನ ಹಿಂಬದಿಯಲ್ಲಿ ಕುಳಿತಿದ್ದ ಇಬ್ಬರು ಎಪ್ಪತ್ತೈದು ದಾಟಿದವರು ಸ್ವಾರಸ್ಯಕರವಾಗಿ ಹರಟುತ್ತಿದ್ದರು : "ನೋಡಿ, ಈವಾಗ ಊಟ ಇಲ್ಲ ಅಂತ ಪ್ರಕಟಿಸಲಿ... ಇಲ್ಲಿ ಒಬ್ಬರೂ ಇರೋಲ್ಲ, ಎಲ್ಲರೂ ಮಾಯವಾಗಿಬಿಡ್ತಾರೆ" ಎಂಬ ಟೀಕೆಯಂತೂ ದೀರ್ಘ ನಗು ತರಿಸಿತ್ತು.

ಹಲವರ ವೇಷಭೂಷಣಗಳನ್ನು ಕಂಡು ನಾಟಕ, ನೃತ್ಯ ಅಥವಾ ಯಕ್ಷಗಾನ ಪ್ರದರ್ಶನ ಇರಬಹುದೆ ಅನ್ನಿಸಿದ್ದು ನಿಜ. ಹಾಗಿದ್ದಿದ್ದರೆ ಪಸಂದಾಗಿರುತ್ತಿತ್ತು. ಆದರೆ ಅವು ನೋಡೋಣ ಹೇಗೆ ಕಾಣ್ತೀವಿ ಅಂತಲೇ ಧರಿಸಿದವು. ಒಬ್ಬ ಯುವಕ ಜುಬ್ಬಾ, ಪಂಚೆ ಧರಿಸಿದ್ದ. ಪಂಚೆಗೂ ಮೀರಿ ಉದ್ದವಾಗಿತ್ತು ಆ ಜುಬ್ಬಾ. ಬಹುಶಃ ಈ ಮಾರಾಯ ಯಾಕೋ ಒಬ್ಬ ಪ್ರಸಿದ್ಧ ತಬಲಾ ವಾದಕನನ್ನು ಅನುಕರಿಸಿದ್ದಿರಬೇಕು. ಒಂದು ಯುವ ಜೋಡಿ ಪರಸ್ಪರ ಸಿಟ್ಟಾಗಿತ್ತು. ಅವರ ಪಕ್ಕದಲ್ಲಿ ಕೂತಿದ್ದ ಹೆಂಗಸಿನ ಹೊಸ ನಮೂನೆಯ ಸೀರೆ ಆ ಅಸಮಾಧಾನದ ಕೇಂದ್ರಬಿಂದು ಅಂತ ಯಾರಿಗಾದರೂ ಅರ್ಥವಾಗುತ್ತಿತ್ತು. ವಿಚಿತ್ರವೆನ್ನುವುದು ಅದಕ್ಕೇ ಇರಬೇಕು. ನೇಪಾಳೀ ಮಾದರಿ ಸೂಟುಧಾರಿಯೊಬ್ಬ ತನ್ನನ್ನು ಒಬ್ಬರೂ ಅಚ್ಚರಿಯಿಂದ ನೋಡಲಿಲ್ಲವೆಂಬ ಕಾರಣಕ್ಕೆ ಮಾಡಿದ್ದೇನು ಗೊತ್ತೇ? ಸ್ಥಳವಿದ್ದರೂ ಊಟಕ್ಕೆ ಕೂರದೆ ನಿಂತೇ ಒಂದು ಕಿರು ಬಾಳೆಲೆಯಲ್ಲಿ ಬಾತ್, ದಂರೋಟ್ ಚಪ್ಪರಿಸತೊಡಗಿದ್ದ! ನನ್ನ ಪ್ರಶ್ನೆಯೆಂದರೆ ಉಡುಗೊರೆ ನೀಡಿ ಹರಸಲಿಕ್ಕೆ ದೊಡ್ಡ ಕ್ಯೂ ಏಕೆ ಅಂತ? ಅಂತೆಯೆ ಎಲ್ಲರಿಗೂ ವೇದಿಕೆಯ ಮೇಲೆ ವಿವಾಹ ವಿಧಿಗಳು ಚೆನ್ನಾಗಿಯೆ ಕಾಣುತ್ತಿರುತ್ತವೆ. ಇನ್ನು ಟಿ.ವಿ. ಏಕೆ ಬೇಕು? ಸುಮ್ಮಸುಮ್ಮನೆ ಯಾರು ಯಾರನ್ನೋ ಹುಡುಕುವಂತೆ ಸಡಗರ ಸೃಷ್ಟಿಸಲಾಗುತ್ತದಲ್ಲ, ಅದಕ್ಕಿಂತ ತಮಾಷೆ ಬೇಕೇ! ಗಿರೀಶ್ ಕಾರ್ನಾಡರು ತಮ್ಮ ಯಯಾತಿ ನಾಟಕದಲ್ಲಿ ಸೊಗಸಾಗಿ ಒಂದು ಮಾತು ಹೇಳುತ್ತಾರೆ; "ಜಗತ್ತಿನಲ್ಲಿ ಮನುಷ್ಯರೆ ಇಲ್ಲ... ಬರೀ ಮುಖವಾಡಗಳು. ಒಂದರ ಹಿಂದೆ ಇನ್ನೊಂದು. ಅದರ ಹಿಂದೆ ಮತ್ತೊಂದು." ಮದುವೆ ಮನೆಯಲ್ಲಿ ಈ ವ್ಯಂಗ್ಯದ ಪ್ರಾತ್ಯಕ್ಷಿಕೆಯಾದೀತು. ನಾನು ಹೇಳುತ್ತಿರುವುದಕ್ಕೆ ಖಂಡಿತ ಅಪವಾದಗಳಿವೆ. ಕಳವಳವೆಂದರೆ ಮೌಲಿಕವಾದ ಉತ್ಸಾಹ, ಲವಲವಿಕೆ, ಸಂತೋಷ ಮದುವೆ ಮನೆಯಿಂದ ಮಾಯವಾದುವಲ್ಲ ಎನ್ನುವುದು. ಒಂದೆರಡು ಭಕ್ಷ್ಯಗಳು ಕಡಿಮೆಯಿರಲಿ ಅಡ್ಡಿಯಿಲ್ಲ. ಮದುವೆ ಮನೆಗೆ ಹಿಂದೆ ಇದ್ದ ಕಳೆ ಮತ್ತೆ ಬರಲಿ, ವಧೂ-ವರರ ಪೋಷಕರು, ಬಂಧುಗಳು ಊಟ ಮಾಡುತ್ತಿರುವವರನ್ನು ನಿಧಾನವಾಗಿ ತೆಗೆದುಕೊಳ್ಳಿ ಅಂತ ನಗುಮುಖದಿಂದ ಆದೇಶಿಸುವ ವ್ಯವಧಾನವಿಟ್ಟುಕೊಳ್ಳಲಿ, ಅಲ್ಲವೆ?

**ಬಿಂಡಿಗನವಿಲೆ ಭಗವಾನ್**
ನಂ. ೩೬ ಬಿ, ೯ನೇ ಮುಖ್ಯರಸ್ತೆ, ಬನಶಂಕರಿ ೧ನೇ ಹಂತ
೨ನೇ ಬ್ಲಾಕ್, ಬೆಂಗಳೂರು – ೫೬೦ ೦೫೦

ಕಾವ್ಯಲೋಕ

## ನೀರ – ಆಳ

**ನೀ**ರಿನ ಆಳ ಕಾಣದಾಗಿತ್ತು
ತಳವಿಲ್ಲದಂತೆ ಅದು ಹರಿಯುತ್ತಲೇಯಿತ್ತು
ಪಾತಾಳದವರೆಗೆ ಲೆಕ್ಕಕು ಸಿಗದೇ

ಅದು ಬದುಕಿಸುತ್ತಿದೆ ಜೀವಿಗಳ
ಪ್ರಾಣಿಗಳ ಪಕ್ಷಿಗಳ ಅನಾಥ ಬಂಧುಗಳ
ಜೀವಸೆಲೆಯಾಗಿದೆ ಬದುಕು ಬವಣೆಗಳಿಗೆ

ಅದಕೆ ಜಾತಿ-ಜಗಳಗಳಿಲ್ಲ ಮತೀಯ ಭಾವಗಳಿಲ್ಲ
ಧರ್ಮ-ಅಧರ್ಮವ ಮೀರಿ ಹೊರಟಿದೆ
ತಾನು ಸೇರಬೇಕಾದ ಹಾದಿಗೆ ಗುರಿಯೆಡೆಗೆ

ಜಗತ್ತು ಹುಟ್ಟುವಾಗಲೇ ನೆಲೆಸಿ
ಸೂರ್ಯಚಂದ್ರರಗುಂಟ ಆಕಾಶ-ನಕ್ಷತ್ರಗಳ
ಜೊತೆಯಾಗಿ ಬೆಟ್ಟಬಂಡೆಗಳೊಂದಿಗೆ

ಯಾರನೂ ಮಲಿನವಾಗಿ ನೋಡದೆ
ಮಿಂದೆದ್ದವರ ಪಾವನವಾಗಿಸಿ
ಮನಸ ಹಗುರವಾಗಿಸಿ ನಿರಾಳವಾಗಿಸುತ್ತಲೇಯಿದೆ




**ಅಕ್ಬರ್ ಸಿ. ಕಾಲಿಮಿರ್ಚಿ**
೭೩೧/೩ ಮನೆ ನಂ. ೦೯, ಮಂಜುನಾಥ ಬಡಾವಣೆ
ಧನ್ವಂತರಿ ಕಾಲೋನಿ ರಸ್ತೆ, ಭಾಗ್ಯನಗರ – ೫೮೩ ೨೩೮
ಕೊಪ್ಪಳ ತಾಲೂಕು ಮತ್ತು ಜಿಲ್ಲೆ

ನೆಹರೂ ಹೇಳಿದ್ರು – ಇನ್ನು ಮುಂದೆ ನಮ್ಮ 'ಫ್ಯಾಕ್ಟರಿಗಳೆ ನಮ್ಮ ದೇವಸ್ಥಾನ' ಅಂತ. ಆದರೆ ನೆಹರೂ ಅವರು ಇನ್ನೂ ಒಂದು ಮಾತು ಹೇಳಿದರು. 'ಮಾನವನಿಗಾಗಿ ಬಂಡವಾಳ ಹೂಡಿ' ಅಂತ. ಹೊಸಪೇಟೆ ಹತ್ತಿರ ತುಂಗಭದ್ರ ಪ್ರಾಜೆಕ್ಟ್ ಆಯಿತಲ್ಲ, ಇದರ ಉದ್ಘಾಟನೆಗೆ ನೆಹರೂ ಬಂದಿದ್ದರು. ಟೇಪ್‌ಅನ್ನು ಅವರು ಕಟ್ ಮಾಡಲಿಲ್ಲ! ಒಂದು ಮುದುಕಿ ಕೈಲಿ ಕಟ್ ಮಾಡಿಸಿದ್ರು. ಮತ್ತೆ ಹೇಳಿದ್ರು – ಈಗ ನಿಮಗೆ ನೀರು ಬಂತು. ಕಬ್ಬು ಬೆಳೆತೀರಿ, ಬತ್ತ ಬೆಳೆತೀರಿ, ಬಾಳೆ ಬೆಳೆತೀರಿ, ನೀವೀಗ ಸಂಪತ್ತನ್ನ ಬೆಳೆಸುತ್ತೀರಿ; ಆದರೆ ಅದೇ ರೀತಿ ಮನಸ್ಸನ್ನೂ ಬೆಳೆಸಬೇಕು. ಇದೇ ಅವರು ಹೇಳಿದ 'ಮಾನವನಿಗಾಗಿ ಬಂಡವಾಳ ಹೂಡುವುದು.'




# ಮನಸ್ಸಿನ ಮೇಲೆ ಶಾಸನ ವಿಧಿಸಲಾಗದು

– ಕೋ. ಚೆನ್ನಬಸಪ್ಪ



ಸಂದರ್ಶಕರು :
**ಜಿ. ಎಸ್. ಜಯದೇವ**
**ಕುಮಾರಿ ಪ್ರಜ್ಞಾ**

**ಪ್ರಶ್ನೆ** : ದಿನಾಂಕ ೧೯ ಏಪ್ರಿಲ್, ೨೦೧೫ರಂದು ಬದನವಾಳು ಗ್ರಾಮದ ಖಾದಿ ಕೇಂದ್ರದಲ್ಲಿ ಸುಸ್ಥಿರ ಬದುಕಿನ ರಾಷ್ಟ್ರೀಯ ಸಮಾವೇಶ ನಡೆದಿದೆ. ಹಿರಿಯರಾದ ತಾವು ಹಳೆಯ ಕಾಲದ ಬದುಕನ್ನು ಅಂತೆಯೇ ಇಂದಿನ ಆಧುನಿಕ ಬದುಕನ್ನು ಕಂಡಿದ್ದೀರಿ. ನಿಮ್ಮ ಪ್ರಕಾರ ಸುಸ್ಥಿರ ಬದುಕು ಎಂದರೆ ಏನು ?

**ಉತ್ತರ** : ನಮ್ಮ ಕಾಲದ ಕುಟುಂಬಗಳಲ್ಲಿ ಒಂದು ಸ್ಥಿರತೆಯಿತ್ತು. ಆಗ ಇದ್ದದ್ದೆಲ್ಲ ಒಟ್ಟು ಕುಟುಂಬಗಳೆ. ಜೀವನದಲ್ಲಿ ಹೇಗೆ ನಡೆದುಕೊಳ್ಳಬೇಕು ಅನ್ನೋದನ್ನ ಪ್ರತ್ಯೇಕವಾಗಿ ಕಲಿಯಬೇಕಾಗಿರಲಿಲ್ಲ. ಅದು ಒಟ್ಟು ಕುಟುಂಬದ ಸಹಜವಾದ ಜೀವನ ಪದ್ಧತಿಯಾಗಿತ್ತು. ಹಿರಿಯರಿಗೆ ಗೌರವ ಕೊಡಬೇಕು ಅನ್ನೋದು ಸಹಜವಾಗಿತ್ತು. ಹಾಗೆಯೇ ಹಿರಿಯರಾದವರು ತಮ್ಮ ಮಿತಿಯನ್ನು ತಿಳಿದು ಕೊಳ್ಳುತ್ತಿದ್ದರು. ಎಂದರೆ ಮಕ್ಕಳು ದೊಡ್ಡವರಾದ ಮೇಲೆ ಅವರೊಡನೆ ಹೇಗೆ ವರ್ತಿಸಬೇಕು ಎಂದು ಅವರಿಗೆ ತಿಳಿಯುತ್ತಿತ್ತು. ತಂದೆಯಾದವನು ಹೇಗೆ ಇರುತ್ತಿದ್ದ ಎಂದರೆ ಬ್ರಿಟಿಷ್ ಮಾನಾರ್ಕ್ ಇದಾನಲ್ಲ ಹಾಗಿರ್ತಿದ್ದ.

**ಪ್ರಶ್ನೆ** : ಅವನು ಹೇಳಿದ್ದೇ ಕೊನೇ ಮಾತು.

**ಉತ್ತರ** : ಹಾಗಲ್ಲ; ಕುಟುಂಬದವರು ಹೇಳಿದ ಹಾಗೆ ಇವನು ಮುನ್ನಡೆಯುತ್ತಿದ್ದ. ಅಂದರೆ ಅವನು ಕುಟುಂಬದ ಸದಸ್ಯರ ಒಟ್ಟು ದನಿಯನ್ನು ಮೀರುತ್ತಿರಲಿಲ್ಲ. ಮಾನಾರ್ಕ್‌ನಿಗೆ ಸರ್ವೋಚ್ಚ ಸ್ಥಾನವಿದೆ. ಆದರೆ ಅವನು ಪಾರ್ಲಿಮೆಂಟ್‌ನ ಒಟ್ಟು ಅಭಿಪ್ರಾಯಕ್ಕೆ ಬೆಲೆ ಕೊಡಬೇಕು. ಕುಟುಂಬದ ಯಜಮಾನ ಹಾಗಿರುತ್ತಿದ್ದ. ಒಂದು ವೇಳೆ ಪಾರ್ಲಿಮೆಂಟು ಇನ್ನು ಮುಂದೆ ಈ 'ಗಂಡಸನ್ನು ಹೆಂಗಸು ಎಂದು ಕರೆಯಬೇಕು' ಎಂದು ಅಭಿಪ್ರಾಯಪಟ್ಟರೆ ಮಾನಾರ್ಕ್ ಅದನ್ನು ಅನುಸರಿಸಬೇಕಾಗಿತ್ತು. ಒಟ್ಟು ಕುಟುಂಬದ ಶಿಸ್ತು ಅನ್ನೋದು ಬದುಕಿನ ಅನೇಕ ಪಾಠಗಳನ್ನು ಕಲಿಸುತ್ತಿತ್ತು.

ಹೊಸ ಆರ್ಥಿಕ ನೀತಿಯಿಂದಾಗಿ ನಮ್ಮ ಒಟ್ಟು ಕುಟುಂಬಗಳು ಛಿದ್ರವಾದವು. ಹಳ್ಳಿಗಳಲ್ಲಿ ಇನ್ನೂ ಕೆಲವು ಒಟ್ಟು ಕುಟುಂಬಗಳು ಉಳಿದುಕೊಂಡಿವೆ. ಆದರೆ ನೀವು ಹೇಳ್ತಿದ್ರಲ್ಲ ಬದನವಾಳು ಗ್ರಾಮದಿಂದ ರೈಲಿನಲ್ಲಿ ಪ್ರತಿದಿನ ಕೂಲಿಗಾಗಿ ಸಾವಿರಾರು ಜನ ಮೈಸೂರಿಗೆ ಹೋಗ್ತಾರೆ ಅಂತ; ಇದು ನಮ್ಮ ಕುಟುಂಬಗಳಲ್ಲಿದ್ದ ಅನ್ಯೋನ್ಯತೆ ಕಡಿಮೆ ಆಗೋದಿಕ್ಕೆ ಕಾರಣ. ನಮ್ಮ ಹೊಸ ಆರ್ಥಿಕ ನೀತಿಯಿಂದ ಪಾರಂಪರಿಕವಾಗಿ ಇದ್ದ ಉದ್ಯೋಗಗಳು ಈಗ

ಇಲ್ಲವಾಗಿವೆ. ಯಾಕೆ ಹಿಂಗಾಯ್ತು? ಹೊಸ ಭೂ ಸ್ವಾಧೀನ ಕಾಯಿದೆ ತಂದಿದಾರೆ ನೋಡಿ. ಉಳುವವನೆ 'ಭೂಮಿಯ ಒಡೆಯ' ಎಂಬ ನೀತಿಯಿಂದ ನಾವು ಎಷ್ಟು ದೂರ ಬಂದಿದೀವಿ.

ಒಂದು ಕಾಲದಲ್ಲಿ ನಮಗೆ ಕಾರ್ಖಾನೆಗಳಿಗೂ ಭೂಮಿ ಬೇಕಾಗಿತ್ತು. ಆಗಿನ ಕಾಲದಲ್ಲಿ ನಾವು ಒಂದು ಫೌಂಟನ್ ಪೆನ್ ಬೇಕು ಅಂದ್ರೆ, ಒಂದು ಸೂಜಿ ಬೇಕು ಅಂದ್ರೆ ಹೊರದೇಶದಿಂದ ತರಿಸಬೇಕಾಗಿತ್ತು. ನಮ್ಮ ಸೈನ್ಯಕ್ಕಂತು ದೊಡ್ಡ ದೊಡ್ಡ ಯಂತ್ರಗಳು ಬೇಕಾಗಿತ್ತು. ಹಾಗಾಗಿ ನೆಹರೂ ಹೇಳಿದ್ರು – ಇನ್ನು ಮುಂದೆ ನಮ್ಮ 'ಫ್ಯಾಕ್ಟರಿಗಳೆ ನಮ್ಮ ದೇವಸ್ಥಾನ' ಅಂತ. ಆದರೆ ನೆಹರೂ ಅವರು ಇನ್ನೂ ಒಂದು ಮಾತು ಹೇಳಿದರು, 'ಮಾನವನಿಗಾಗಿ ಬಂಡವಾಳ ಹೂಡಿ' ಅಂತ. ಹೊಸಪೇಟೆ ಹತ್ತಿರ ತುಂಗಭದ್ರ ಪ್ರಾಜೆಕ್ಟ್ ಆಯಿತಲ್ಲ, ಇದರ ಉದ್ಘಾಟನೆಗೆ ನೆಹರೂ ಬಂದಿದ್ದರು. ಟೇಪ್‌ಅನ್ನು ಅವರು ಕಟ್ ಮಾಡಲಿಲ್ಲ! ಒಂದು ಮುದುಕಿ ಕೈಲಿ ಕಟ್ ಮಾಡಿಸಿದ್ರು. ಮತ್ತೆ ಹೇಳಿದ್ರು – ಈಗ ನಿಮಗೆ ನೀರು ಬಂತು. ಕಬ್ಬು ಬೆಳಿತೀರಿ, ಬತ್ತ ಬೆಳಿತೀರಿ, ಬಾಳೆ ಬೆಳಿತೀರಿ, ನೀವೀಗ ಸಂಪತ್ತನ್ನ ಬೆಳೆಸುತ್ತೀರಿ; ಆದರೆ ಅದೇ ರೀತಿ ಮನಸ್ಸನ್ನೂ ಬೆಳೆಸಬೇಕು. ಇದೇ ಅವರು ಹೇಳಿದ 'ಮಾನವನಿಗಾಗಿ ಬಂಡವಾಳ ಹೂಡುವುದು.'

**ಪ್ರಶ್ನೆ :** ಸಾರ್ ಇದು ಗಾಂಧೀಜಿ ಪ್ರಭಾವ ಅಂತೀರ ?

**ಉತ್ತರ :** ಹೌದು ಗಾಂಧೀಜಿ ಪ್ರಭಾವ ಅಂತಲೇ ಹೇಳ್ಬೇಕು. ಆಡಳಿತ ನಡೆಸುವವರಿಗೆ ಆದರ್ಶ ಒಂದು ಕಡೆ ಕರೆಯುತ್ತೆ. ವಾಸ್ತವ ಇನ್ನೊಂದು ಕಡೆ ಎಳೆಯುತ್ತೆ. ಗಾಂಧಿಗೆ ಆದರ್ಶ ಇತ್ತು. ಆದರೆ ಅದನ್ನು ಪೂರ್ತಿ ಅನುಷ್ಠಾನಕ್ಕೆ ತರೋದಕ್ಕೆ ನೆಹರೂ ಅಶಕ್ತರಾಗಿ ಹೋದರು. ಆದ್ರೆ ಗಾಂಧಿ ಎಲ್ಲ ಯಂತ್ರಗಳನ್ನೂ ನಿರಾಕರಿಸಲಿಲ್ಲ, ನಿಮ್ಮ ಕೈಯಲ್ಲಿ ಫೌಂಟನ್ ಪೆನ್ ಇಲ್ಲವೆ? ಯಾವುದು ಅನಿವಾರ್ಯವೋ ಅದನ್ನು ಉಪಯೋಗಿಸಬೇಕಾಗುತ್ತದೆ. ಆದರೆ ಯಾವುದೂ ಇತಿಮಿತಿ ಇಲ್ಲದೆ ಇಂಡಸ್ಟ್ರಿಗಳು ಹುಟ್ಟಿಕೊಂಡವು ಎಂದರೆ ಅಗತ್ಯಕ್ಕಿಂತ ಹೆಚ್ಚು ಉತ್ಪಾದನೆ ಆಗುತ್ತೆ. ನೋಡಿ ಅಮೆರಿಕಾದಲ್ಲಿ ಹಾಲನ್ನು ಎಷ್ಟು ಉತ್ಪಾದನೆ ಮಾಡಿದ್ರು ಅಂದರೆ ಅದನ್ನು ಮಿಸ್ಸಿಸಿಪ್ಪಿ ನದಿಗೆ ಚೆಲ್ಲಿದರು. ಗೋಧಿನ ಸಮುದ್ರಕ್ಕೆ ಸುರಿತಾರಂತೆ. ಅಗತ್ಯಕ್ಕಿಂತ ಹೆಚ್ಚು ಉತ್ಪಾದನೆಯೂ ಒಂದು ಸಮಸ್ಯೆ. ಲಾಭಕ್ಕಲ್ಲದೆ ಅದರ ವಿತರಣೆ ಆಗುವುದಿಲ್ಲ.

**ಪ್ರಶ್ನೆ ೨.** ಸಮಾನ ಆರ್ಥಿಕ ಅವಕಾಶಗಳು, ಸಮಾನ ಹಂಚಿಕೆ ಮಾರ್ಕ್ಸ್‌ವಾದದ ತಿರುಳು. ಈ ಎರಡು ಇದ್ದರೆ ಸಾಕು ಸುಸ್ಥಿರ ಸಮಾಜ ತನಗೆ ತಾನೇ ನಿರ್ಮಾಣವಾಗುತ್ತದೆಂಬ ಒಂದು ನಂಬಿಕೆ ಇದೆ. ತಾವು ಮಾರ್ಕ್ಸ್‌ವಾದದ ಜೊತೆ ಆಧ್ಯಾತ್ಮಿಕತೆಯ ಆಳವನ್ನೂ ಬಲ್ಲವರು. ನಾವು ಚರ್ಚಿಸುತ್ತಿರುವ ಸುಸ್ಥಿರ ಸಮಾಜಕ್ಕೆ ಅಧ್ಯಾತ್ಮ ಬೇಕೆ ? ಯಾವ ನಿರ್ದಿಷ್ಟ ಕಾರಣಕ್ಕೆ ಅಧ್ಯಾತ್ಮ ಬೇಕು.

**ಉತ್ತರ :** ಅಧ್ಯಾತ್ಮ ಎಂದರೆ ಏನು ? ಆಧ್ಯಾತ್ಮಿಕತೆ ಪವಾಡದಲ್ಲಿ ಇಲ್ಲ. ಪವಾಡ ಅನ್ನೋದು ಯಾವುದೂ ಈ ಪ್ರಪಂಚದಲ್ಲಿ ಇಲ್ಲ. ಪವಾಡ ಸದೃಶವಾಗಿ ಕಂಡರೂ ಈ ಎಲ್ಲವೂ ಒಂದು ನಿಯಮಬದ್ಧವಾದ ವ್ಯವಸ್ಥೆಗೆ ಒಳಪಟ್ಟಿದೆ. ಎಕನಾಮಿಕ್ಸ್ ಅಂದರೆ ಏನು ? ಉತ್ಪಾದನೆ ಮತ್ತು ವಿತರಣೆ. ಇದನ್ನು ಹೇಗೆ ಮಾಡೋದು ಅನ್ನೋದೆ ದೊಡ್ಡ ಪ್ರಶ್ನೆ. ಒಂದು ವೇಳೆ ನಾವು ನಮಗೆ ಬೇಕಾದಷ್ಟನ್ನ ಉತ್ಪಾದನೆ ಮಾಡುತ್ತಿದ್ದೇವೆ ಎಂದು ಭಾವಿಸೋಣ. ಈಗ ನಾವು ಆ ಸ್ಥಿತಿಯಲ್ಲಿಲ್ಲ; ಅದು ಬೇರೆ ಪ್ರಶ್ನೆ. ಆದರೆ ಉತ್ಪಾದನೆ, ಆರ್ಥಿಕ ಸುವ್ಯವಸ್ಥೆ ಎಲ್ಲಾ ಸರಿಯಾಗಿದೆ ಅಂತಲೇ ಭಾವಿಸಿಕೊಳ್ಳಿ. ಆಗ ನೆಮ್ಮದಿ ಬರುತ್ತದೆಯೆ ? ನಾವು ಸುಖವಾಗಿರಲು ಸಾಧ್ಯವೇ ? ನೋಡಿ ಅಮೆರಿಕಾದಲ್ಲಿ ಐಶ್ವರ್ಯ ಇದೆ. ಆದರೆ ಸಂತೋಷ ಇಲ್ಲ. ಒಬ್ಬ ದೊಡ್ಡ ಕಲಾವಿದ, ಅವನಿಗೆ ಎಲ್ಲಾ ಇತ್ತು. ಆದರೆ ಅವನಿಗೆ ನೆಮ್ಮದಿ ಇರಲಿಲ್ಲ. ಆತ್ಮಹತ್ಯೆ ಮಾಡಿಕೊಂಡ. ನಮ್ಮಲ್ಲಿ ಹಿಂದೆ ಬಡತನ ಇತ್ತು. ಆದರೂ ಜನ ಸಂತೋಷವಾಗಿ ಇದ್ರು. 'ಸಿಟಿ ಆಫ್ ಜಾಯ್' ಪುಸ್ತಕದಲ್ಲಿ ಲೇಖಕ ಆಶ್ಚರ್ಯಪಡುತ್ತಾನೆ – ಇಕ್ಕಟ್ಟಾದ ಜಾಗದಲ್ಲೆ ಹೊಸಲು ಸಾರಿಸಿ, ರಂಗೋಲೆ ಇಟ್ಟು ಈ ದಾರಿದ್ರ್ಯದಲ್ಲೂ ಜನ ಸಂತೋಷಪಡುತ್ತಿದ್ದರು. ಆದರೆ ಆಧುನಿಕ ಕಾಲದಲ್ಲಿ ಬಡತನ ದುಃಖ ಕೊಡ್ತಾ ಇದೆ. ಕಾರಣ ನೀತಿದಾರಿದ್ರ್ಯ, ಪ್ರಾಮಾಣಿಕತೆಯ ದಾರಿದ್ರ್ಯ. ಆರ್ಥಿಕ ಬಡತನ ದೊಡ್ಡ ಸಮಸ್ಯೆ ಅಲ್ಲ. ನೈತಿಕ ಬಡತನವೇ ದೊಡ್ಡ ಸಮಸ್ಯೆ. ಇದಕ್ಕೆ ಪರಿಹಾರ ಅಂದರೆ ನಮ್ಮ ಮನಸ್ಸು ದುರಸ್ತಿ ಆಗಬೇಕು. ಮನಸ್ಸು ಹದವಾಗಬೇಕು. ಯೋಗಿಗಳಾಗಲಿ, ಆರ್ಥಿಕ ತಜ್ಞರಾಗಲಿ, ಐನ್‌ಸ್ಟೈನ್ ಆಗಲಿ ಅಥವಾ ಟಾಲ್‌ಸ್ಟಾಯ್ ಆಗಲಿ – ಅವರಿಗೆಲ್ಲ ಇದೇ ಚಿಂತೆ ಇತ್ತು. ಆರ್ಥಿಕವಾಗಿ ಸಬಲರಾಗುತ್ತೇವೆ. ಆದರೆ ಮಾನಸಿಕ ಸಮತೋಲನ ಸಾಧಿಸುತ್ತೇವೆಯೇ ? ಇದು ಪ್ರಶ್ನೆ.

**ಪ್ರಶ್ನೆ ೩.** ನನ್ನ ಬದುಕು ಮತ್ತಾವ ಜೀವಿಗಳಿಗೂ ಮುಳುವಾಗಬಾರದು ಎಂಬ ತತ್ವವೇ ಸುಸ್ಥಿರ ಜೀವನ. ಶರಣರ ಕಾಯಕ ಧರ್ಮದ ಅಭಿಪ್ರಾಯವು ಇದೇ. ಈ ಆಧುನಿಕ ಕಾಲದಲ್ಲಿ ಬದಲಾಗುತ್ತಿರುವ ನಮ್ಮ ಧರ್ಮಸಂಸ್ಥೆಗಳು ಸುಸ್ಥಿರ ಜೀವನವನ್ನು ಕಟ್ಟಿಕೊಡಲ್ಲವೆ ?

**ಉತ್ತರ :** ನೋಡಿ ಬಸವಣ್ಣನವರನ್ನಾಗಲಿ, ರಾಮಕೃಷ್ಣ ಪರಮಹಂಸರನ್ನಾಗಲಿ ನಾವು ಸರಿಯಾಗಿ ಅರ್ಥಮಾಡಿಕೊಂಡಿಲ್ಲ. ರಾಮಕೃಷ್ಣಾಶ್ರಮ ಮೊದಲುಗೊಂಡು ನಮ್ಮ ಧರ್ಮಸಂಸ್ಥೆಗಳು ಅಧ್ಯಾತ್ಮದಿಂದ ದೂರ ಆಗ್ತಾ ಇವೆ. ರಾಮಕೃಷ್ಣಾಶ್ರಮಗಳು ಇಂದು ರಾಮಕೃಷ್ಣರ ಆದರ್ಶದಿಂದ ದೂರ ಬಂದುಬಿಟ್ಟಿವೆ. ನಮ್ಮ ಮಠಗಳಿಗೆ ಒಂದು ಸಮಗ್ರ ದೃಷ್ಟಿ ಇಲ್ಲ. ಬಸವಣ್ಣ ಹೇಳಿದ್ದು ಅಕ್ಷರ ಕಲಿಸೋ ಮಠಗಳು. ಯಾಕೆ ಅಂದರೆ ಅದು ಆತ್ಮವಿದ್ಯೆಗೆ ಪೂರಕವಾದದ್ದು ಅಂತ. ಆದರೆ ಇಂದಿನ ಮಠಗಳು ಸರ್ಕಾರ ಮಾಡೋ ಕೆಲಸವನ್ನೇ ತಾವೂ ಮಾಡ್ತಾ ಇವೆ. ಪ್ರೈಮರಿ ಶಾಲೆಗಳನ್ನು ಮಾಡೋದು ಸರಿ. ಆದರೆ ಇಂಜಿನಿಯರಿಂಗ್ ಕಾಲೇಜ್, ಮೆಡಿಕಲ್ ಕಾಲೇಜ್ – ಇವುಗಳನ್ನೇ ಮಾಡ್ತಾ ಇದ್ರೆ ಮನಸ್ಸು ದುರಸ್ತಿ ಮಾಡೋದು ಯಾವಾಗ ? ಸೀಟುಗಳನ್ನು ಹಂಚೋ ಬಗ್ಗೆ ಧ್ಯಾನ ಮಾಡ್ಬೇಕಾಗುತ್ತೆ, ಅಷ್ಟೆ. ನಾನೇ ಕಂಡಹಾಗೆ ಮೃತ್ಯುಂಜಯಪ್ಪ ಅವರಂತಹವರು ಏನ್ ಮಾಡಿದ್ರು? ಮೊದಲು ಮನಸ್ಸನ್ನು ದುರಸ್ತಿ ಮಾಡಿಕೊಂಡರು. ಮೊದಲು ನನ್ನ ಮನಸ್ಸು ದುರಸ್ತಿ ಆದರೆ ತಾನೆ ಇನ್ನೊಬ್ಬರ ಮನಸ್ಸನ್ನು ದುರಸ್ತಿ ಮಾಡೋದು? ಮಠಗಳು ಕಾಯಕದ ಜೀವಂತ ಉದಾಹರಣೆಯಾಗಬೇಕು. ಆ ಮೂಲಕ ಸುಸ್ಥಿರ ಜೀವನ ಅಂದರೆ ಏನು ಅಂತ ತೋರಿಸಬೇಕು. ಕಾಯಕ ಎಂದರೆ – ದೇಹದಿಂದ ಮಾಡು ಅಂತ. ಬರೀ ಮೂಗು ಮುಚ್ಕೊಂಡು ಕೂತ್ಕೊಳ್ಳೊದಲ್ಲ; ಕಾಯಕ ಮಾಡಬೇಕು. ಕಾಯಕದಿಂದ ಸಂತೋಷ ಹುಟ್ಟುತ್ತೆ. ಅದನ್ನು ಶ್ರಮ ಅಂತ ಕರೀಬೇಕಾಗಿಲ್ಲ. ಪ್ರತಿಫಲ ಕೂಲಿ ಅಲ್ಲ. ಅದು ಪ್ರಸಾದ.

**ಪ್ರಶ್ನೆ ೪.** ಮನುಕುಲದ ಅಳಿವು–ಉಳಿವು ಜನರ ಸಂಯಮದ ಜೀವನವನ್ನು ಅವಲಂಬಿಸಿದೆ. ಜನರು ಸಂಯಮದಿಂದ ಬದುಕುವಂತೆ ಕಾನೂನಿನ ನಿರ್ಬಂಧಗಳನ್ನು ಹೇರಬಹುದೆ ? ಉಪಾಯ ಏನು ?

**ಉತ್ತರ :** 'ಮನಸ್ಸಿನ ಮೇಲೆ ಶಾಸನ ವಿಧಿಸಲಾಗುವುದಿಲ್ಲ' ಅಂತ ಒಂದು ಮಾತಿದೆ. ನೋಡಿ, ಹಿರಿಯರನ್ನು ಕಾಪಾಡಬೇಕು ಅಂತ ಕಾನೂನು ಇದೆ; ಉಲ್ಲಂಘಿಸಿದರೆ ಶಿಕ್ಷೆಯೂ ಇದೆ. ಆದರೆ ಶಿಕ್ಷೆಯಿಂದ ಮನಸ್ಸನ್ನು ತಿದ್ದೋದಕ್ಕೆ ಸಾಧ್ಯವಿಲ್ಲ. ಮೈಗುದ್ದಿ ಮನಸ್ಸನ್ನು ತಿದ್ದಲು ಸಾಧ್ಯವಿಲ್ಲ. ಮನಸ್ಸಿಗೇ ಶಿಕ್ಷಣ ಕೊಡಬೇಕು. ಮನಸ್ಸಿನ ನಡವಳಿಕೆಗಳ ಮೇಲೆ ಸಮಾಜದ ನಡವಳಿಕೆಗಳು ಪ್ರಭಾವ ಬೀರುತ್ತವೆ. ನೋಡಿ ರಾಜ್ಯಶಾಸನ ಇದೆ, ಅದು ಶಿಕ್ಷೆ ಕೊಡುತ್ತೆ. ಸಮಾಜಶಾಸನ ಅಭಿಪ್ರಾಯಗಳನ್ನು ಬೆಳೆಸುತ್ತೆ. ಆತ್ಮಶಾಸನ, ರಾಜಾಜಿ ಹೇಳಿದ ಆತ್ಮಶಾಸನ ಒಳಗಿನ ಅಂಕುಶ ಇದ್ದ ಹಾಗೆ. ಅದು ಮನಸ್ಸನ್ನು ತಿದ್ದುತ್ತೆ; ಪರಿವರ್ತನೆಯನ್ನು ತರುತ್ತದೆ. ಹಿಂದೆ ಒಟ್ಟು ಕುಟುಂಬಗಳಲ್ಲಿ ನಮಗೆ ಜೀವಂತ ಮಾದರಿಗಳಿದ್ದುವು. ಹಿರಿಯರು ಪ್ರಾಮಾಣಿಕ ಮಾದರಿಗಳಾಗಿದ್ದರು. ಬರೀ ಉಪದೇಶ ಕೊಟ್ಟರೆ ಏನು ಪ್ರಯೋಜನ ? ನಡೆದುಕೊಂಡು ತೋರಿಸಬೇಕು.

**ಜಿ. ಎಸ್. ಜಯದೇವ ಮತ್ತು ಕುಮಾರಿ ಪ್ರಜ್ಞ**
ದೀನಬಂಧು ಮಕ್ಕಳ ಮನೆ
ಚಾಮರಾಜನಗರ – ೫೭೧ ೩೧೩

# ದೊಡ್ಡಣ್ಣ

ಯುದ್ಧ ಪ್ರಚೋದಕನೆ ದೊಡ್ಡಣ್ಣ ನೋಡಿ
ಉಬ್ಬಿಸುವ ಇಬ್ಬದಿಗು ಶಸ್ತ್ರಾಸ್ತ್ರ ನೀಡಿ
ಈ ರೀತಿ ನೆತ್ತರಿನ ವ್ಯಾಪಾರದಿಂದ
ಅಪಾರ ಪುಣ್ಯವನು ಗಳಿಸುತ್ತ ಬಂದ

**ವಿ. ಜಿ. ಭಂಡಾರಿ (ವಿಡಂಬಾರಿ)**
ಕಡತೋಕ – ೫೮೧ ೩೩೮, ಹೊನ್ನಾವರ
ಉತ್ತರ ಕನ್ನಡ ಜಿಲ್ಲೆ




**ಗೆಜೆಟಿಯರ್‌ಗಳು ಕೊಡಗಿನ ವಿವಿಧ ಬುಡಕಟ್ಟು ಜನಾಂಗಗಳ ವಿಶಿಷ್ಟ ಸಂಸ್ಕೃತಿಯನ್ನು ಹೊರ ಜಗತ್ತಿಗೆ ಒದಗಿಸುತ್ತವೆ. ಅದರೊಂದಿಗೆ ಕೊಡಗಿನ ಸಮಾಜದ ಅನಿಷ್ಟ ಪದ್ಧತಿಗಳ ಆಚರಣೆಯನ್ನು ವಿವರಿಸುವಾಗ ಕೊಡಗಿನ ಗುಲಾಮ ಪದ್ಧತಿಯ ಬಗ್ಗೆ ತಿಳಿಸುತ್ತವೆ. ಈ ಗುಲಾಮರು ಕೃಷಿ ಕಾರ್ಮಿಕರಾಗಿ ಮಾಲೀಕನ ಆಜ್ಞೆಯಾನುಸಾರ ಜೀವಿಸುತ್ತಿದ್ದರು. ಇವರನ್ನು 'ಜಮ್ಮದ ಆಳು' ಎಂದು ಕರೆಯುತ್ತಾರೆ. ಇವರನ್ನು, 'ಭೂಮಿ ಜಮ್ಮದ ಆಳು' ಮತ್ತು 'ಒಕ್ಕಲು ಜಮ್ಮದ ಆಳು' ಎಂದು ವಿಭಾಗಿಸಬಹುದಾಗಿದೆ. ಈ ಗುಲಾಮರಲ್ಲಿ ಕೊಡಗಿನ ವಿವಿಧ ಬುಡಕಟ್ಟುಗಳು ಮತ್ತು ಪರ್ವತವಾಸಿಗಳೂ ಆದ ಯರವರು, ಬೆಟ್ಟ ಕುರುಬರು, ಜೇನುಕುರುಬರು ಪ್ರಮುಖರು. ಗುಲಾಮರ ಮಾರುಕಟ್ಟೆಯಲ್ಲಿ ಪೊಲೆಯರಿಗಿಂತಲೂ ಕಡಿಮೆ ಬೆಲೆಯ ಗುಲಾಮರಾಗಿ ಯರವರು ಮತ್ತು ಕುರುಬರು ಇರುತ್ತಿದ್ದರು. ಗುಲಾಮರು ಸಮಾಜದ ಅತ್ಯಂತ ಕೆಳ ವರ್ಗದ ಪ್ರಾಣಿಗಳಂತಿದ್ದರು. ಕೊಡಗಿನ ಮೇಲುವರ್ಗವೂ ಸಾಮಾನ್ಯವಾಗಿ ಕೊಡವರು, ತುಳು ಗೌಡರು ಮತ್ತು ಕನ್ನಡ ಒಕ್ಕಲಿಗರಿಂದ ಕೂಡಿತ್ತು.**

# ವಸಾಹತುಶಾಹಿ ಗೆಜೆಟಿಯರ್ ಮತ್ತು ಕೊಡಗು

ಅವಿನಾಶ್ ವಿ.
ಪ್ರಮೀಳ ಎಮ್.

ಗೆಜೆಟಿಯರ್‌ಗಳು ಬ್ರಿಟಿಷ್ ಆಡಳಿತದ ದಿಕ್ಸೂಚಿ ಯಾಗಿದ್ದವು. ಬ್ರಿಟಿಷ್ ಸರ್ಕಾರದ ಆಡಳಿತದಲ್ಲಿ ನೇಮಕವಾಗುತ್ತಿದ್ದ ಯೂರೋಪಿಯನ್ನರಿಗೆ ತಾವು ಆಡಳಿತ ನಡೆಸುವ ಪ್ರದೇಶದ ಪರಿಸರ ಮತ್ತು ಅಲ್ಲಿ ವಾಸಿಸುವ ಜನಸಾಮಾನ್ಯರ ಆಚಾರ–ವಿಚಾರಗಳು, ಅವರ ವೈವಿಧ್ಯಮಯ ಸಂಸ್ಕೃತಿಗಳು, ಭಾಷೆಯ ವಿಭಿನ್ನತೆ ಮತ್ತು ಸಮುದಾಯಗಳನ್ನು ತಿಳಿಯುವ ಉದ್ದೇಶದಿಂದ ಗೆಜೆಟಿಯರ್‌ಗಳನ್ನು ಪ್ರಾರಂಭಿಸಲಾಯಿತು. ಸರ್ಕಾರದ ಆದೇಶಗಳು, ಪ್ರಕಟಣೆಗಳು, ವರದಿಗಳು, ನಿಯಮ ನಿಬಂಧಗಳು ಮತ್ತಿತರೆ ಪ್ರಮುಖ ಸುದ್ದಿ ಸಮಾಚಾರಗಳನ್ನು ಸಂಗ್ರಹಿಸಿ ಗೆಜೆಟಿಯರ್‌ಗಳನ್ನು ಪ್ರಕಟಿಸಲಾಗುತ್ತಿತ್ತು. ಗೆಜೆಟಿಯರ್‌ಗಳಲ್ಲಿನ ವೈವಿಧ್ಯಮಯ ಅಂಶಗಳು ಸರ್ಕಾರದ ಅಧಿಕೃತ ವಿಷಯಗಳೇ ಆಗಿರುತ್ತಿದ್ದವು.

ವಸಾಹತುಶಾಹಿ ಕೊಡಗಿನ ಕುರಿತಂತೆ ಹಲವಾರು ಯೂರೋಪಿಯನ್ ಅಧಿಕಾರಿಗಳು ತಮ್ಮ ಭಿನ್ನ ಅನುಭವಗಳನ್ನು ದಾಖಲಿಸಿದ್ದಾರೆ. ೧೮೩೪ರಲ್ಲಿ ಕೊಡಗು ಬ್ರಿಟಿಷ್ ಆಳ್ವಿಕೆಗೆ ಒಳಪಟ್ಟಿತು. ಇದಕ್ಕೂ ಮೊದಲು ಬ್ರಿಟಿಷರು ಮತ್ತು ಕೊಡಗಿನ ರಾಜರೊಂದಿಗೆ ನಡೆದಿರುವ ಪತ್ರ ವ್ಯವಹಾರಗಳಿಂದ ಹಲವಾರು ಮಾಹಿತಿಗಳು ದೊರೆಯುತ್ತವೆ. ಈ ಹಂತದಲ್ಲಿ ಹಲವಾರು "ಸಾಹಿತ್ಯ"ಗಳು ರಚನೆಯಾದವು. ೧೮೭೦ರಲ್ಲಿ ಪ್ರಕಟಗೊಂಡ ಜಿ. ರಿಕ್ಟರ್‌ನ ಕೂರ್ಗ್ ಗೆಜೆಟಿಯರ್ (ಅಥವಾ ಮ್ಯಾನುಯೆಲ್ಸ್) ಮತ್ತು ಬಿ. ಎಲ್. ಲೀವಿಸ್ ರೈಸ್‌ನ 'ಮೈಸೂರು ಆಂಡ್ ಕೂರ್ಗ್ ಗೆಜೆಟಿಯರ್'ನ ಮೂರು ಸಂಪುಟಗಳು (೧೮೭೮) ಪ್ರಮುಖ ಆಕರಗಳಾಗಿವೆ. ಅವು ೧೮೩೪–೧೮೭೦ರ ನಡುವೆ ಕೊಡಗಿನಲ್ಲಿ ಬ್ರಿಟಿಷ್ ಆಡಳಿತದಿಂದ ಆದ ಪರಿವರ್ತನೆಯನ್ನು ವಿವರಿಸುತ್ತವೆ. ಬೆಟ್ಟಗಳ ನಾಡು ಎಂದು ಕರೆಸಿಕೊಳ್ಳುವ ಕೊಡಗಿನ ಕುರಿತು ಸಾಮ್ರಾಜ್ಯವಾದಿ ಚಿಂತನೆಗಳಿಂದ ಸೃಷ್ಟಿಸಿದ ಗೆಜೆಟಿಯರ್ ೧೯ನೇ ಶತಮಾನದ ಕೊಡಗಿನ ಸಾಮಾಜಿಕ ಮತ್ತು ಸಾಂಸ್ಕೃತಿಕ ಅಂಶಗಳನ್ನು ತಿಳಿಯಲು ದೊರಕುವ ಮೊದಲ ಮೆಟ್ಟಿಲುಗಳಾಗಿವೆ.

ಈ ಗೆಜೆಟಿಯರ್‌ಗಳನ್ನು ಸೃಷ್ಟಿಸಿದ ಹಿನ್ನೆಲೆ ಮತ್ತು ಉದ್ದೇಶವನ್ನು ಸಂಕ್ಷಿಪ್ತವಾಗಿ ಚರ್ಚಿಸುವುದು ಒಳಿತು. ವಸಹಾತುಶಾಹಿ ಆಡಳಿತದಲ್ಲಿ ಭಾರತವನ್ನು ಒಂದು ಕಾಲನಿಯನ್ನಾಗಿ ಪರಿವರ್ತಿಸಿ ಆ ಕಾಲನಿಯ ಕುರಿತು ಸಮಗ್ರವಾದ ಮಾಹಿತಿಯ ಸೃಷ್ಟಿಗಾಗಿ ಗೆಜೆಟಿಯರ್ ಎನ್ನುವ "ಜ್ಞಾನ"ವನ್ನು ನಿರ್ಮಿಸಲಾಯಿತು. ಹೀಗೆ ನಿರ್ಮಿಸಿದ ಈ ಜ್ಞಾನವು ಆ ಪ್ರದೇಶದ ಭೌಗೋಳಿಕ ಲಕ್ಷಣಗಳು, ಅಲ್ಲಿನ ಜನರು, ಸಂಸ್ಕೃತಿ, ಧಾರ್ಮಿಕ ಆಚರಣೆಗಳು, ಇತಿಹಾಸ, ಭಾಷೆಗಳು, ಆರ್ಥಿಕ ವ್ಯವಸ್ಥೆ, ಕೃಷಿ ಪದ್ಧತಿಗಳು, ಪ್ರಾಣಿ ಹಾಗೂ ಸಸ್ಯ ಸಂಕುಲಗಳ ಕುರಿತಂತೆ ನಿರಂತರವಾದ ಸರ್ವೇಗಳನ್ನು ನಡೆಸಿ ಅದ್ಭುತವೆನಿಸುವಷ್ಟು ಮಾಹಿತಿಯನ್ನು ಸೃಷ್ಟಿಸಿ ಬ್ರಿಟಿಷರು ಇದನ್ನು ಒಂದು ಆಯುಧವನ್ನಾಗಿಸಿಕೊಂಡು ತಮ್ಮ ಯಜಮಾನಿಕೆಯ ಪ್ರಭುತ್ವವನ್ನು ಸಾಧಿಸಿದರು. ಗೆಜೆಟಿಯರ್‌ಗಳ ರಚನೆಗೆ ಇದ್ದ ಒಂದು ಆಡಳಿತಾತ್ಮಕ ಕಾರಣವೆಂದರೆ, ತಾವು ಗೆದ್ದ ಪ್ರದೇಶವನ್ನು ಪರಿಣಾಮಕಾರಿಯಾಗಿ ಆಳಬೇಕಾದರೆ ಆ ಪ್ರದೇಶದ ಪ್ರಕೃತಿ, ಜನ, ಭಾಷೆ, ಧರ್ಮ, ಸಂಸ್ಕೃತಿ, ಇತಿಹಾಸ ಇತ್ಯಾದಿಗಳನ್ನು ಸರಿಯಾಗಿ ತಿಳಿದುಕೊಂಡು ಮತ್ತು ಹೊಸದಾಗಿ ಬರುವ ಆಡಳಿತಗಾರರಿಗೆ "ಮಾರ್ಗದರ್ಶಿ"ಗಳಾಗಿ (ಮ್ಯಾನುಯೆಲ್ಸ್) ಇರಬೇಕು ಎನ್ನುವ ಆಶಯ ಅವರಿಗಿತ್ತು. ಕೂರ್ಗ್ ಗೆಜೆಟಿಯರ್ ೧೮೭೦ರಲ್ಲಿ ಬಂದರೂ ಅವುಗಳ ಸಂಪಾದಕರು ತಿಳಿಸುವಂತೆ ಅದಕ್ಕಾಗಿ ಹಲವು ವರ್ಷಗಳ ಮೊದಲೇ ಮಾಹಿತಿ ಸಂಗ್ರಹಣೆಯನ್ನು ಆರಂಭಿಸಿದ್ದರು. ಇದಕ್ಕೂ ಮೊದಲು ಫ್ರಾನ್ಸಿಸ್ ಬುಕಾನನ್ ಎಂಬುವವನು ಕ್ರಿ. ಶ. ೧೮೦೦ರಿಂದ ೧೮೦೧ರವರೆಗೆ ಮದ್ರಾಸ್‌ನಿಂದ ಹೊರಟು ಮೈಸೂರು, ಕೆನರಾ, ಕೂರ್ಗ್ ಮತ್ತು ಮಲಬಾರ್ ಪ್ರದೇಶಗಳಲ್ಲಿ ಸಂಚರಿಸಿ ಅಲ್ಲಿಯ ಪ್ರದೇಶಗಳ ನೈಸರ್ಗಿಕ, ಸಾಮಾಜಿಕ, ಧಾರ್ಮಿಕ,

ಆರ್ಥಿಕ, ಕೃಷಿ, ಜನಜೀವನ ಕುರಿತಂತೆ ವಸ್ತುಸ್ಥಿತಿಗಳನ್ನು ಸೂಕ್ಷ್ಮವಾಗಿ ಅವಲೋಕಿಸಿ ಯಾವುದನ್ನೂ ಬಿಡದೆ ಸಂಗ್ರಹಿಸಿದ ಮಾಹಿತಿಯನ್ನು ಬ್ರಿಟಿಷ್ ಸರ್ಕಾರಕ್ಕೆ ಒಪ್ಪಿಸಿದ. ಆ ವರದಿಯ ಆಧಾರದ ಮೇಲೆ 'ಎ ಜರ್ನಿ ಫ್ರಮ್ ಮದ್ರಾಸ್ ತ್ರೂಔಟ್ ದಿ ಕಂಟ್ರೀಸ್ ಆಫ್ ಮೈಸೂರು, ಕೆನರಾ ಆಂಡ್ ಮಲಬಾರ್' (೧೮೦೭) ಎಂಬ ಕೃತಿಯು ಪ್ರಕಟವಾಯಿತು. ಇದರಲ್ಲಿ ರಿಕ್ಟರ್ ತನ್ನ ಗ್ರಂಥದಲ್ಲಿ ಬ್ರಿಟಿಷ್ ಆಡಳಿತದ ೩೬ ವರ್ಷಗಳಲ್ಲಿ ಆದ ಪರಿವರ್ತನೆಯನ್ನು ತಿಳಿಸಿದ್ದಾನೆ. ಇವನ ಗೆಸೆಟಿಯರ್ ಸಾಮಾನ್ಯ ಮಾದರಿಗಳನ್ನೇ ಹೆಚ್ಚಾಗಿ ಅನುಸರಿಸಿರುವುದನ್ನು ಕಾಣಬಹುದು. ಈ ಕೃತಿ ಕೊಡಗಿನಲ್ಲಿ ಬ್ರಿಟಿಷರ ಆಗಮನದ ಮೊದಲಿನ ಸಾಮಾಜಿಕ ಸ್ತರ ವಿನ್ಯಾಸಗಳೇನು, ಅತ್ಯಂತ ಹಿಂದುಳಿದಿದ್ದ ಕೊಡಗು ಬ್ರಿಟಿಷ್ ಆಡಳಿತದಲ್ಲಿ ಹೇಗೆ ಬದಲಾವಣೆಯನ್ನು ಸಾಧಿಸಿತು ಎಂಬುವುದನ್ನು ಯಾವುದೇ ಪೂರ್ವಗ್ರಹವಿಲ್ಲದೆ ತಿಳಿಸುವುದನ್ನು ಕಾಣಬಹುದು. ಗೆಸೆಟಿಯರ್‌ಗಳು "ಕತ್ತಲೆಯ ಯುಗ"ದಿಂದ "ಬೆಳಕಿನೆಡೆಗೆ" ಸಾಗಲು ಬ್ರಿಟಿಷ್ ಆಡಳಿತದ ವೈಖರಿಯನ್ನು ಬಿಂಬಿಸುತ್ತವೆ. ಇದಕ್ಕೆ ಪೂರಕವಾಗುವ ಸಂಖ್ಯಾಂಶಗಳಿಂದ ವಸಾಹತುಶಾಹಿ ಮತ್ತು ಪೂರ್ವ ವಸಾಹತುಶಾಹಿ ಆಡಳಿತದಲ್ಲಿನ ಬದಲಾವಣೆಯ ಪರಮಾವಧಿಯನ್ನು ವಿಶ್ಲೇಷಿಸುತ್ತಾ, "ಅಭಿವೃದ್ಧಿ", "ಪ್ರಗತಿ", "ಶಾಂತಿ", "ಕಾನೂನು ಆಡಳಿತ ವಿಭಾಗ"ಗಳನ್ನು ಮುಕ್ತವಾಗಿ ಚರ್ಚಿಸುವುದರೊಂದಿಗೆ ಬ್ರಿಟಿಷ್ ಆಡಳಿತವನ್ನು "ಶ್ರೇಷ್ಠ ಆಡಳಿತ"ವೆಂದು ಪ್ರತಿಬಿಂಬಿಸುತ್ತವೆ. ಆಂತರಿಕ ಸಮಸ್ಯೆಗಳಿಂದ "ಅಶಾಂತಿ", "ಅಸಮಾನತೆ", ನೆರೆಯ ರಾಜ್ಯಗಳ ದಾಳಿ ಮತ್ತು ಮತಾಂತರದ ಭೀತಿಗಳಿಂದ ಕೊಡಗಿನ ಜನಜೀವನವೂ ವಿಲಕ್ಷಣದಿಂದ ಕೂಡಿದ್ದು, ಇಂತಹ ಸನ್ನಿವೇಶದಲ್ಲಿ ಸ್ಥಳೀಯರು "ವಿಮೋಚನೆ"ಯ ವಿದ್ಯಮಾನಕ್ಕೆ ಕಾಯುತ್ತಿದ್ದರು. ಇಂತಹ ಸನ್ನಿವೇಶದಲ್ಲಿ ಬ್ರಿಟಿಷರ ಆಗಮನವು ಅವರಲ್ಲಿ ಹೊಸ ಚೈತನ್ಯವನ್ನು ಮತ್ತು ಹೊಸ ಭರವಸೆಯನ್ನು ಮೂಡಿಸಿತ್ತು. ಇದರ ಫಲವಾಗಿ ಸ್ಥಳೀಯರು ಬ್ರಿಟಿಷರನ್ನು ಮುಕ್ತಕಂಠದಿಂದ ಸ್ವಾಗತಿಸಿದರು. ಹೀಗೆ ಅವರಿಗೆ ತಮ್ಮ ಅವಲಂಬನೆಯ ಮರುಸೃಷ್ಟಿಯನ್ನು ಕಾಣಲು ಸಾಧ್ಯವಾಯಿತು. ಸಾಂಪ್ರದಾಯಿಕ ಕೃಷಿಯಲ್ಲಿ ನಿರತರಾಗಿದ್ದ ಸ್ಥಳೀಯರಿಗೆ ಬ್ರಿಟಿಷ್ ಪ್ಲ್ಯಾಂಟರುಗಳು ಅವರ ಅನುಪಯುಕ್ತ ಭೂಮಿಯಾದ ಬಾಣೆಯಲ್ಲಿ ಕಾಫಿ ಎನ್ನುವ ಹೊಸ ಉದ್ಯಮವನ್ನು ಸೃಷ್ಟಿಸಿ ಹೊರ ಜಗತ್ತಿನೊಂದಿಗೆ ಗುರುತಿಸಿಕೊಳ್ಳುವ ಪ್ರವೃತ್ತಿಯನ್ನು ಇಲ್ಲಿನ ನಿವಾಸಿಗಳಿಗೆ ನೀಡಿದರು ಎನ್ನುವುದನ್ನು ತಿಳಿಸುತ್ತವೆ. ಕೊಡಗಿನ ಲಿಂಗಾಯತ ರಾಜ ದೊಡ್ಡ ವೀರ ರಾಜೇಂದ್ರನು ಬ್ರಿಟಿಷ್ ಅಧಿಕಾರಿಯೊಂದಿಗೆ ಸ್ನೇಹ ಬೆಳೆಸಿ ಬ್ರಿಟಿಷರು ಕೊಡಗನ್ನು ಪ್ರವೇಶಿಸಲು ಅನುವುಮಾಡಿಕೊಟ್ಟ ಮೊದಲ ರಾಜನಾಗಿದ್ದಾನೆ. ಇದರೊಂದಿಗೆ ಕೊಡಗು ಮೊದಲ ಬಾರಿಗೆ ರಾಜಕೀಯ ಏರಿಳಿತಗಳಿಗೆ ಒಳಗಾಯಿತು.




ಬ್ರಿಟಿಷರ ಆಗಮನ ಕೊಡಗಿಗೆ ಒಂದು ಹೊಸ ಆರ್ಥಿಕ ನೀತಿಯನ್ನು ಒದಗಿಸಿತು. ರಾಜರ ಆಳ್ವಿಕೆ ಮತ್ತು ನೆರೆಯ ರಾಜ್ಯಗಳ ದಾಳಿಯಿಂದ ತತ್ತರಿಸಿದ ಈ ರಾಜ್ಯವೂ ಆರ್ಥಿಕವಾಗಿ ಮುಗ್ಗರಿಸಿತ್ತು. ಇಂತಹ ಕ್ಲಿಷ್ಟ ಸನ್ನಿವೇಶದಲ್ಲಿ ವಾಣಿಜ್ಯಾತ್ಮಕ ಉದ್ಯಮಗಳ ರಚನೆ, ಅವುಗಳಿಗೆ ಸೂಕ್ತ ಮಾರುಕಟ್ಟೆಗಳ ನಿರ್ಮಾಣ... ಹೀಗೆ ಹಲವು ರೀತಿನೀತಿಗಳಿಂದ ಅನಾಗರಿಕರೂ ಪರ್ವತವಾಸಿಗಳೂ ಆದ ಈ ಜನರನ್ನು ಆಧುನಿಕ ನಾಗರಿಕನ್ನಾಗಿಸಲು ಬ್ರಿಟಿಷರ ಪಾತ್ರ ಅಮೋಘವಾದದ್ದು ಎಂದು ಗೆಸೆಟಿಯರುಗಳು ಚಿತ್ರಿಸುತ್ತವೆ. ಅಶಾಂತಿ ಮತ್ತು ಅಭದ್ರತೆಯಿಂದ ಕೂಡಿದ ಕೊಡಗಿನ ಅಸಮರ್ಥ ರಾಜನನ್ನು ಬದಿಗಿಟ್ಟು, ಅಲ್ಲಿ ಮತ್ತೆ ೧೮೩೪ರಲ್ಲಿ ಶಾಂತಿಯುತ


MANUAL OF COORG
A GAZETTEER OF THE NATURAL FEATURES OF THE COUNTRY AND THE SOCIAL AND POLITICAL CONDITION OF ITS INHABITANTS
LKR
G. RICHTER
KESSINGER LEGACY REPRINTS

ವಾತಾವರಣವನ್ನು ಸ್ಥಾಪಿಸಲಾಯಿತು ಎನ್ನುವುದು ಬ್ರಿಟಿಷ್ ಆಡಳಿತದ ಹೆಮ್ಮೆಯ ಸಂಕೇತ ಎಂದು ತಿಳಿಸುತ್ತವೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ದೊಡ್ಡ ವೀರ ರಾಜನು ಬ್ರಿಟಿಷರಿಗೆ ಟಿಪ್ಪುವಿನ ವಿರುದ್ಧದ ಯುದ್ಧದಲ್ಲಿ ಸಹಾಯ ಮಾಡಿ ಅಮರ ಸುಳ್ಯ ಪ್ರಾಂತ್ಯಗಳನ್ನು ಪಡೆದುಕೊಂಡು ಕೊಡಗನ್ನು ಒಂದು ಸುಭದ್ರ ರಾಜ್ಯವಾಗಿ ನಿರ್ಮಿಸಿದನು. ಆದರೆ ೧೭೯೯ರಲ್ಲಿ ಟಿಪ್ಪುವಿನ ಮರಣದೊಂದಿಗೆ ಆಡಳಿತದ ಚುಕ್ಕಾಣಿ ಹಿಡಿದ ಬ್ರಿಟಿಷರು ೧೮೩೪ರಲ್ಲಿ ಕೊಡಗನ್ನು ವಶಪಡಿಸಿಕೊಳ್ಳುವುದರೊಂದಿಗೆ ಭಿನ್ನವಾದ ಆರ್ಥಿಕ ನೀತಿಯನ್ನು ಪರಿಚಯಿಸಿದರು. ಈ ನೀತಿಯೂ ಸ್ಥಳೀಯರ ವಿರೋಧಕ್ಕೆ ಕಾರಣವಾಗಿ, ಅದು ಆಡಳಿತ ವಿರೋಧಿ ದಂಗೆಯಾಗಿ ರೂಪುಗೊಂಡಿತು. ಇದನ್ನು ಅಡಗಿಸಿದ ಆಡಳಿತಾಧಿಕಾರಿಗಳು ತಮ್ಮ ವರದಿಗಳಲ್ಲಿ 'ಕೂಟಗಳ ಕಾಟ', ಬ್ರಿಟಿಷರ ವಿರುದ್ಧ "ಗೌಡರು" ಮಾಡಿದ ಪಿತೂರಿ ಎಂಬುದಾಗಿ ಚಿತ್ರಿಸಿ, ಕೊಡಗಿನಲ್ಲಿ 'ಕೊಡವ ಮತ್ತು ಗೌಡರ' ನಡುವೆ ತಮ್ಮ 'ಒಡೆದು ಆಳುವ ನೀತಿ'ಯನ್ನು ಸೃಷ್ಟಿಸಿದರು. ೧೮೬೦ರಲ್ಲಿ ಆಡಳಿತದ ಅನುಕೂಲಕ್ಕಾಗಿ ಕೊಡಗು ಹಾಗೂ ಕೆನರಾ ಭಾಗಗಳ ನಡುವೆ ಗಡಿಯನ್ನು ನಿರ್ಮಿಸಿರುವ ಕ್ರಮವನ್ನು ಗೆಸೆಟಿಯರ್‌ಗಳಲ್ಲಿ ಪ್ರತ್ಯೇಕ ಸಮರ್ಥನೆಗಳನ್ನು ಕಾಣಬಹುದು.

ಬ್ರಿಟಿಷರು ಕೊಡಗು ಪ್ರದೇಶವನ್ನು ೫೦೮ ಹಳ್ಳಿಗಳಾಗಿ ವಿಂಗಡಿಸಿ, ಮುಖ್ಯವಾಗಿ ಆರು ತಾಲೂಕು ಅಥವಾ ನಾಡುಗಳನ್ನು ಸೃಷ್ಟಿಸಿದರು. ಕೊಡಗನ್ನು ಗೆಸೆಟಿಯರ್‌ಗಳಲ್ಲಿ 'ಹಿಲ್ಲಿ ರೀಜನ್', 'ಮೌನ್‌ಟನ್ ಡಿಸ್ಟ್ರಿಕ್ಟ್', 'ಬ್ಯಾಂಬೂ ಸ್ಟೇಟ್', 'ಕೂರ್ಗ್', 'ಮರ್ಕಾರ' ಎಂದು ಗುರುತಿಸಿರುವ ವಿಶಿಷ್ಟತೆಯನ್ನು ಈ ಗೆಸೆಟಿಯರ್‌ಗಳಿಂದ ತಿಳಿಯ ಬಹುದಾಗಿದೆ. ಕೊಡಗು ಪಶ್ಚಿಮ ಘಟ್ಟಗಳಿಂದ ಸುತ್ತುವರಿದಿದ್ದು, ಮಳೆ, ಚಳಿಯಿಂದ ಕೂಡಿದ ಪ್ರದೇಶವಾಗಿದೆ. ಇದು ಕರಾವಳಿ ಪ್ರದೇಶದಿಂದ ಬಲು ದೂರದಲ್ಲಿದೆ. ಜೂನ್‌ನಿಂದ ನವೆಂಬರ್‌ವರೆಗೆ ಆರೋಗ್ಯಕರವಲ್ಲದ ಹವಾಗುಣವನ್ನು ಹೊಂದಿದೆ. ಈ ಕಾರಣದಿಂದಲೇ ಕೊಡಗು ನೆರೆಯ ರಾಜ್ಯಗಳ ಜನರನ್ನು ಆಕರ್ಷಿಸುವ ಒಂದು ಕೇಂದ್ರವಾಗಿ ಗೋಚರಿಸಲಿಲ್ಲ. ಕೊಡಗಿನ ಜನರು ಹಳ್ಳಿಗಳಲ್ಲಿ ವಾಸಿಸುವುದರೊಂದಿಗೆ ರಾಜಕೀಯ ವಿದ್ಯಮಾನ ಮತ್ತು ವ್ಯಾಪಾರ ವಲಯಗಳಿಂದ ದೂರ ಉಳಿದಿದ್ದಾರೆ. ಇದು ಸೂಕ್ತ ಸಂಪರ್ಕ ವ್ಯವಸ್ಥೆಗಳಿಂದ ವಂಚಿತವಾಗಿರುವ ಜಿಲ್ಲೆ. ಪುಟ್ಟ ಪ್ರಾಂತ್ಯವಾಗಿರುವುದರಿಂದ ವಿಸ್ತಾರವಾದ ಆಡಳಿತ ಇಲ್ಲಿ ಕಂಡುಬರುವುದಿಲ್ಲ. ಆದರೆ ಮೂಲತಃ ಕೊಡಗು ಬೆಟ್ಟಗುಡ್ಡಗಳಿಂದ, ಬುಡಕಟ್ಟು ಸಮುದಾಯಗಳಿಂದ ಕೂಡಿದ್ದರೂ ಪಾಶ್ಚಿಮಾತ್ಯ ಸಂಸ್ಕೃತಿಯತ್ತ ಬಹುಬೇಗ ಆಕರ್ಷಿತವಾಯಿತು. ಪಾಶ್ಚಿಮಾತ್ಯ ಸಂಸ್ಕೃತಿ, ಶಿಕ್ಷಣ, ಆಚಾರ, ವಿಚಾರಗಳು ಜನತೆಯನ್ನು ಬಹುಬೇಗ ಆಕರ್ಷಿಸಿ, ಅವರು ಯುರೋಪಿಯನ್ ಆಡಳಿತ ವ್ಯವಸ್ಥೆಗೆ ಮಾರುಹೋಗುವಂತೆ ಮಾಡಿತು. ಪರಿಣಾಮವಾಗಿ ಕೊಡಗು ಅಲ್ಪಾವಧಿಯಲ್ಲಿ ಬ್ರಿಟಿಷ್

ನೆಲೆಯಾಗಿ ಪರಿವರ್ತನೆ ಹೊಂದಲು ಸಾಧ್ಯವಾಯಿತೆನ್ನಬಹುದು.

ಗೆಸೆಟಿಯರ್‌ಗಳು ಕೊಡಗಿನ ವಿವಿಧ ಬುಡಕಟ್ಟು ಜನಾಂಗಗಳ ವಿಶಿಷ್ಟ ಸಂಸ್ಕೃತಿಯನ್ನು ಹೊರ ಜಗತ್ತಿಗೆ ಒದಗಿಸುತ್ತವೆ. ಅದರೊಂದಿಗೆ ಕೊಡಗಿನ ಸಮಾಜದ ಅನಿಷ್ಟ ಪದ್ಧತಿಗಳ ಆಚರಣೆಯನ್ನು ವಿವರಿಸುವಾಗ ಕೊಡಗಿನ ಗುಲಾಮ ಪದ್ಧತಿಯ ಬಗ್ಗೆ ತಿಳಿಸುತ್ತವೆ. ಈ ಗುಲಾಮರು ಕೃಷಿ ಕಾರ್ಮಿಕರಾಗಿ ಮಾಲೀಕನ ಆಜ್ಞೆಯಾನುಸಾರ ಜೀವಿಸುತ್ತಿದ್ದರು. ಇವರನ್ನು 'ಜಮ್ಮದ ಆಳು' ಎಂದು ಕರೆಯುತ್ತಾರೆ. ಇವರನ್ನು, 'ಭೂಮಿ ಜಮ್ಮದ ಆಳು' ಮತ್ತು 'ಒಕ್ಕಲು ಜಮ್ಮದ ಆಳು' ಎಂದು ವಿಭಾಗಿಸಬಹುದಾಗಿದೆ. ಈ ಗುಲಾಮರಲ್ಲಿ ಕೊಡಗಿನ ವಿವಿಧ ಬುಡಕಟ್ಟುಗಳು ಮತ್ತು ಪರ್ವತವಾಸಿಗಳೂ ಆದ ಯರವರು, ಬೆಟ್ಟ ಕುರುಬರು, ಜೇನುಕುರುಬರು ಪ್ರಮುಖರು. ಗುಲಾಮರ ಮಾರುಕಟ್ಟೆಯಲ್ಲಿ ಪೊಲೆಯರಿಗಿಂತಲೂ ಕಡಿಮೆ ಬೆಲೆಯ ಗುಲಾಮರಾಗಿ ಯರವರು ಮತ್ತು ಕುರುಬರು ಇರುತ್ತಿದ್ದರು. ಗುಲಾಮರು ಸಮಾಜದ ಅತ್ಯಂತ ಕೆಳ ವರ್ಗದ ಪ್ರಾಣಿಗಳಂತಿದ್ದರು. ಕೊಡಗಿನ ಮೇಲುವರ್ಗವೂ ಸಾಮಾನ್ಯವಾಗಿ ಕೊಡವರು, ತುಳು ಗೌಡರು ಮತ್ತು ಕನ್ನಡ ಒಕ್ಕಲಿಗರಿಂದ ಕೂಡಿತ್ತು. ಇವರುಗಳು ತಮ್ಮ ಜಮ್ಮ ಭೂಮಿಯಲ್ಲಿ ದುಡಿಯಲು ಅಶ್ಪಸರುಗಳಾದ ಪೊಲೆಯ ಮತ್ತು ಹೊಲೆಯರುಗಳಿಗಿಂತ, ಬುಡಕಟ್ಟು ಜನರಾದ ಯರವರು, ಕುಡಿಯರು, ಬೆಟ್ಟ ಮತ್ತು ಜೇನು ಕುರುಬರನ್ನು ತಮ್ಮ ಕೃಷಿ ಭೂಮಿಯಲ್ಲಿ ದುಡಿಸಿಕೊಳ್ಳುತ್ತಿದ್ದರು ಎಂದು ಹೇಳುವ ಮೂಲಕ ಕೊಡಗಿನ ಭೂ ವ್ಯವಸ್ಥೆಯನ್ನು ದಾಖಲಿಸುವಾಗ ಇದು ವಿಭಿನ್ನ ಅನನ್ಯತೆಯನ್ನು ಸಾಧಿಸಿದೆ ಎಂದು ತಿಳಿದುಬರುತ್ತದೆ.

ಕೊಡಗಿನಲ್ಲಿ ಜಮ್ಮ, ಬಾಣೆ, ಜೋಡಿ, ಸಾಗು, ಜಾಗೀರ್, ಉಂಬ್ಳಿ ಎನ್ನುವ ವಿವಿಧ ರೂಪದ ರೈತಾಪಿ ಸಂಬಂಧದ ಜಮೀನುಗಳನ್ನು ಕಾಣಬಹುದು. ಜಮ್ಮ ಭೂಮಿಯು ವಸಾಹತುಶಾಹಿ ಪೂರ್ವದ ಕಾಲದಿಂದಲೂ ಪರಂಪರಾಗತ ಮತ್ತು ಖಾಯಂ ಭೂ ವ್ಯವಸ್ಥೆಯಾಗಿತ್ತು. ಈ ಭೂಮಿಯು ಮಲಬಾರಿನ ನಂಬೂದಿರಿಗಳು ಮತ್ತು ನಾಯರುಗಳು ಹೊಂದಿರುವ 'ಜೆನ್ಮಿ' ಭೂ ಹಿಡುವಳಿಯ ಹಾಗೆಯೇ 'ಜಮ್ಮ' ಭೂ ಹಿಡುವಳಿ ಕೊಡಗಿನ ವಿಶಿಷ್ಟ ಅನುಭೋಗಿಯಾಗಿ ಗುರುತಿಸಿಕೊಂಡಿದೆ. ಈ ಜಮ್ಮ ಭೂಮಿಯ ಒಡೆತನ 'ಸನ್ನದು' ಅಥವಾ 'ನಿರೂಪ'ಗಳಲ್ಲಿ ಇರುತ್ತಿತ್ತು. ಜಮ್ಮ ಭೂ ಹಿಡುವಳಿಯು ಕೊಡವರು, ಅಮ್ಮ ಕೊಡವರು, ಗೌಡರು, ಬಂಟರು, ಮಾಪಿಳ್ಳೆಗಳು, ಲಿಂಗಾಯಿತರು, ಹೆಗ್ಗಡೆಗಳು, ಕೋಯವರು ಮತ್ತು ಬ್ರಾಹ್ಮಣರು ಮುಂತಾದವರು ಭೂಮಿಯನ್ನು ಪಡೆಯುವ ವರ್ಗಗಳಾಗಿದ್ದರು. ಈ ಭೂಮಿಯನ್ನು ಮನಬಂದಂತೆ ಮಾರಾಟ ಮಾಡುವಂತೆ ಇರಲಿಲ್ಲ ಮತ್ತು ಭೂಮಿಯ ಮೇಲೆ ಉತ್ತರಾಧಿಕಾರತ್ವ ಇತ್ತು. ಜಾಗೀರ್ ಭೂಮಿಯು ಎಲ್ಲಾ ರೀತಿಯ ಕಂದಾಯದಿಂದ ಮುಕ್ತವಾಗಿತ್ತು. ಭಟ್ಟಮಾನ್ಯ ಮತ್ತು ಸರ್ವಮಾನ್ಯ ಭೂಮಿಯು ಧಾರ್ಮಿಕ ಆಚರಣೆಗಳಿಗೆ ನೀಡಲಾಗುತ್ತಿದ್ದ ಭೂಮಿಯಾಗಿತ್ತು. ಜಮ್ಮ ಭೂ ಹಿಡುವಳಿಯೂ ವಂಶಪಾರಂಪರ್ಯವಾಗಿದ್ದು ರಾಜರ ಆಡಳಿತದಲ್ಲಿ ಸರ್ಕಾರಕ್ಕೆ ಸಲ್ಲಿಸಬೇಕಾದ ದೈಹಿಕ ಹಾಗೂ ಸ್ವಾಮಿ ನಿಷ್ಠೆಯೊಂದಿಗೆ ಯಾವುದೇ ಪ್ರತಿಫಲ ನಿರೀಕ್ಷಿಸದೆ ಈ ಜನವಿಭಾಗಗಳು ಸೇವೆ ಮಾಡಬೇಕಾಗಿತ್ತು. ಕೊಡಗರ ಸೇವೆಗೆ ಪ್ರತಿಯಾಗಿ ಭೂಮಿಯನ್ನು ನೀಡಲಾಗುತ್ತಿತ್ತು. ಈ ಭೂ ಸ್ವಾಮ್ಯತೆಯನ್ನು ಜಮ್ಮ ಭೂಮಿಯೆಂದು ಕರೆಯುತ್ತಾರೆ. ಇದರ ಕಂದಾಯವನ್ನು ಪ್ರತಿ ಸಾಗು ಭೂಮಿ ಅಥವಾ ರೈತವಾರಿ ಹಿಡುವಳಿಯ ಅರ್ಧದಷ್ಟು ನಿಗದಿಗೊಳಿಸಲಾಗಿತ್ತು. ಈ ಜಮ್ಮ ಭೂಮಿಯು ಮಿಲಿಟರಿ ಪರಂಪರೆಯ ಅವಿಭಾಜ್ಯ ಅಂಗವೆಂದು ಕೂಡ ಹೇಳುತ್ತಾರೆ.

ಬ್ರಿಟಿಷ್ ಆಳ್ವಿಕೆಯಲ್ಲಿ ಕೊಡಗು ನಾಗರಿಕತೆಯೆಡೆಗೆ ವಾಲತೊಡಗಿತ್ತು. ಗಿರಿಕಂದರಗಳ ನಾಡಿನಲ್ಲಿ ಒಳ್ಳೆಯ ರಸ್ತೆಗಳ ಉಗಮದೊಂದಿಗೆ ಯೂರೋಪಿಯನ್ ಪ್ಲಾಂಟರುಗಳು ಈ ನಾಡಿನಲ್ಲಿ ಬಂಡವಾಳ ತೊಡಗಿಸುವುದರೊಂದಿಗೆ ಒಂದು ಹೊಸ ಕೊಡುಗೆಯನ್ನು ನೀಡಿದರು. ಅದರೊಂದಿಗೆ 'ಟೆಲಿಗ್ರಾಫ್' ಮತ್ತು 'ಶಿಕ್ಷಣ'ವನ್ನು ಪರಿಚಯಿಸಿ ಭೌತಿಕ ಸುಧಾರಣೆಗೆ ಬೆಂಬಲ ನೀಡಿದರು. ಕೊಡಗಿನಲ್ಲಿ ಕಾಫಿ ಬೆಳವಣಿಗೆಯನ್ನು ೧೮೪೭ ಹಾಗೂ ೧೮೮೮ರ ಅವಧಿಯಲ್ಲಿ ಯೂರೋಪಿಯನ್ ಪ್ಲಾಂಟರ್‌ಗಳು ಕೊಡಗಿನಲ್ಲಿ ಕಾಫಿಯ ಉತ್ಪಾದನೆ ಹಾಗೂ ಹಲವಾರು ಎಸ್ಟೇಟುಗಳ ಉಗಮವನ್ನು ರಿಕ್ಟರ್ ತಿಳಿಸುತ್ತಾನೆ. ಕೊಡಗಿನಲ್ಲಿ ಕೊಡಗು ಭಾಷೆಯನ್ನು ಮಾತನಾಡುವ ವಿವಿಧ ರೀತಿಯ ಬುಡಕಟ್ಟುಗಳನ್ನು ಪಟ್ಟಿ ಮಾಡಿ, ಕೊಡಗರ ಸಾಮಾಜಿಕ ಜೀವನಶೈಲಿ, ಅವರ ಕಾನೂನು ಕಟ್ಟಳೆಗಳು, ಸಂಪ್ರದಾಯದ



ಆಚರಣೆಗಳು, ಕೊಡಗರ ಚಾರಿತ್ರಿಕ ಹಬ್ಬ ಹರಿದಿನಗಳು, ಹುತ್ತರಿ, ಕಾವೇರಿ ತುಲಾ ಸಂಕ್ರಮಣ, ಭಗವತಿ ಹಬ್ಬಗಳ ಕುರಿತಂತೆ ಮಾಹಿತಿಯನ್ನು ದಾಖಲಿಸಿದ್ದಾನೆ. ಕನ್ನಡ ಭಾಷೆಯು ಕೊಡಗಿನ ಸ್ಥಳೀಯ ಭಾಷೆಯಾಗಿದೆ. ಆದರೆ ಯರವರು, ಹೊಲೆಯರು ಮತ್ತು ಕುರುಬರಿಗೆ ಅವರದೇ ಆದ ಸ್ವಂತವಾದ ಭಾಷೆಗಳಿವೆ ಎಂದು ಹೇಳುತ್ತಾನೆ. ಕೊಡಗಿನ ಕಾವೇರಿ ಪುರಣ, ಪ್ರಸಿದ್ಧ ಸಂಪ್ರದಾಯಗಳ ಬಗ್ಗೆ ಮಾಹಿತಿ ನೀಡುತ್ತಾನೆ. ರಿಕ್ಟರ್ ತನ್ನ ಗ್ರಂಥದಲ್ಲಿ ಕೊಡಗಿನಲ್ಲಿ ರಾಜರುಗಳ ಆಡಳಿತವನ್ನು ೧೬ನೇ ಶತಮಾನಕ್ಕೆ ನಿಗದಿಗೊಳಿಸಿ ಪ್ರಾಚೀನ ಕಾಲದಲ್ಲಿ ಕೊಡಗಿನ ಪೂರ್ವ ಇತಿಹಾಸದ ಕುರಿತು ಹೆಚ್ಚು ಶೋಧಕ್ಕೆ ಹೋಗದೆ ಪ್ರಾಚೀನ ಇತಿಹಾಸವನ್ನು ಮರೀಚಿಕೆಗೊಳಿಸಿದ್ದಾನೆ. ಕೂರ್ಗ್ ಎನ್ನುವುದು ಸ್ಥಳೀಯ ಹೆಸರಾದ 'ಕೊಡಗು' ಎಂಬುವುದರಿಂದ ಬಂದಿದೆ. 'ಕಾವೇರಿ ಪುರಣ'ದಲ್ಲಿ ಕೊಡಗು ಎನ್ನುವುದರ ಮಾಹಿತಿಯಿದೆ ಎಂದು ತಿಳಿಸಿದ್ದಾನೆ. ಕೊಡಗನ್ನು ಇಕ್ಕೇರಿ ರಾಜ್ಯದೊಂದಿಗೆ ಹೋಲಿಸಿ ನಾಯಕರ ಆಡಳಿತದಲ್ಲಿ ಕೊಡಗು ಒಂದು ರಾಜ್ಯವಾಗಿ ಬದಲಾವಣೆ ಹೊಂದಿತ್ತು. ಬ್ರಿಟಿಷರ ರಾಜಕೀಯ ಪ್ರತಿನಿಧಿಯಾದ ಫೆಸರ್ ಹೇಳುವಂತೆ ಕೊಡಗನ್ನು ವಶಪಡಿಸಿಕೊಂಡಿದ್ದು, ಜನರ ಅಭಿಲಾಷೆ, ಜೊತೆಗೆ ಬ್ರಿಟಿಷ್ ಆಡಳಿತದ ಅನಿವಾರ್ಯತೆ ಅವರಿಗಿತ್ತು ಎನ್ನುವುದನ್ನು ತಿಳಿಸುತ್ತಾನೆ. ಬ್ರಿಟಿಷ್ ಆಡಳಿತವು ಪರಿಚಯಿಸಿದ ಹೊಸ ಹೊಸ ಪದ್ಧತಿಗಳು ಹಾಗೂ ಪಾಶ್ಚಿಮಾತ್ಯೀಕರಣ ಈ ಬುಡಕಟ್ಟುಗಳ ಮೇಲೆ ಪ್ರಭಾವ ಬೀರತೊಡಗಿದವು. ಈ ರೀತಿಯ ಬುಡಕಟ್ಟು ಸಮುದಾಯವಾದ ಕೊಡವರು ಬ್ರಿಟಿಷ್ ಆಳ್ವಿಕೆಯ ಭೌತಿಕ ಬದಲಾವಣೆಗೆ ಒಳಗಾದರು. ಇವರು ಶಿಕ್ಷಣದ ಪ್ರಯೋಜನ ಪಡೆದು ಬ್ರಿಟಿಷ್ ಆಡಳಿತದಲ್ಲಿ ಉನ್ನತ ಹುದ್ದೆಗೆ ಏರಲು ಸಾಧ್ಯವಾಯಿತು. ಈ ಸಮುದಾಯವು ಬ್ರಿಟಿಷ್ ಆಡಳಿತದಲ್ಲಿ ಸಂತೃಪ್ತಿಯನ್ನು ಹೊಂದಿದವರಾಗಿದ್ದರು. ಇದರಿಂದ ೧೮೩೭ ಕೊಡಗು-ಕೆನರಾ ದಂಗೆ ಮತ್ತು ೧೮೫೭ರ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ಸಂದರ್ಭದಲ್ಲಿ ಶಾಂತ ರೀತಿಯಿಂದ ಇದ್ದರು. ಇವರಿಗೆ ಪಾಶ್ಚಿಮಾತ್ಯ ಶಿಕ್ಷಣವು ಅವರ ಜೀವನಶೈಲಿಯನ್ನು ಮಾತ್ರವಲ್ಲದೆ, ಅವರ ಚಿಂತನಾಕ್ರಮ ಮತ್ತು ವಿವೇಚನೆಯನ್ನು ಬದಲಿಸಿತ್ತು ಎಂದು ಹೇಳುತ್ತಾನೆ. ಈ ಮೂಲಕ ರಿಕ್ಟರ್‌ನ ಗೆಸೆಟಿಯರ್ ಕೊಡಗಿನಲ್ಲಿ ಬ್ರಿಟಿಷ್ ಆಳ್ವಿಕೆಯ ಕುರಿತ ಮಾಹಿತಿ ನೀಡುವ ಅತ್ಯಮೂಲ್ಯವಾದ ಗ್ರಂಥವಾಗಿದೆ.

**ಅವಿನಾಶ್ ವಿ.**
ಸಂಶೋಧನಾ ವಿದ್ಯಾರ್ಥಿ, ಇತಿಹಾಸ ವಿಭಾಗ
ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳಗಂಗೋತ್ರಿ, ಮಂಗಳೂರು

**ಪ್ರಮೀಳ ಎಮ್.**
ಉಪನ್ಯಾಸಕಿ, ಲೀಲಾವತಿ ಶೆಟ್ಟಿ ಕಾಲೇಜು
ಗಾಂಧಿನಗರ, ಮಂಗಳೂರು



ರಾಜಶೇಖರ್ ನಿಲೋಗಲ್‌ಮಠ ಅಬ್ದುಲ್‌ಸಾಬ್ ಅಣ್ಣಿಗೇರಿ

# ಅಗಲಿದ ರಂಗಚೇತನಗಳಿಗೆ ರಂಗನಮನ

ಕೇವಲ ಒಂದೇ ವಾರದ ಅಂತರದಲ್ಲಿ ಕನ್ನಡ ರಂಗಭೂಮಿಯು ಇಬ್ಬರು ರಂಗ ಕಲಾವಿದರನ್ನು ಕಳೆದುಕೊಂಡಿತು. ಒಬ್ಬರು ವೃತ್ತಿ ರಂಗಭೂಮಿಯ ದಿಗ್ಗಜ ಹಿರಿಯ ನಟ ಅಬ್ದುಲ್‌ಸಾಬ್ ಅಣ್ಣಿಗೇರಿಯವರಾದರೆ ಇನ್ನೊಬ್ಬ ಯುವ ರಂಗಕರ್ಮಿ ರಾಜಶೇಖರ್ ನಿಲೋಗಲ್‌ಮಠ. ರಂಗಭೂಮಿಗೆ ತಮ್ಮದೇ ಆದ ರೀತಿಯಲ್ಲಿ ಕೊಡುಗೆಯನ್ನು ಕೊಟ್ಟು ರಂಗಭೂಮಿಯ ಬೆಳವಣಿಗೆಗೆ ಜೀವ ಸವೆಸಿದ ಈ ಜೀವಗಳಿಗೆ ರಂಗನಮನಗಳು. ಅಗಲಿದ ಈ ಪ್ರತಿಭೆಗಳ ಕುರಿತು ಪುಟ್ಟ ಪರಿಚಯ ಇಲ್ಲಿದೆ.

## ಗ್ರಾಮೀಣ ರಂಗಪ್ರತಿಭೆ ಅಬ್ದುಲ್‌ಸಾಬ್ ಅಣ್ಣಿಗೇರಿ

ಅದು ೬೦ರ ದಶಕ, ವೃತ್ತಿ ಕಂಪನಿ ನಾಟಕಗಳ ಸುವರ್ಣ ದಿನಮಾನಗಳು. ಕಂಪನಿ ನಾಟಕಗಳು ಈ ನಾಡಿನಲ್ಲಿ ಸಾಂಸ್ಕೃತಿಕ ಸಂಚಲನವನ್ನುಂಟುಮಾಡುತ್ತಿದ್ದ ಕಾಲವದು. ನಾಟಕಾಸಕ್ತಿ ಹಾಗೂ ಹೊಟ್ಟೆಪಾಡಿಗಾಗಿ ಗ್ರಾಮೀಣ ಪ್ರದೇಶದ ಪ್ರತಿಭೆಗಳು ಬಹುತೇಕ ನಾಟಕ ಕಂಪನಿಗಳಲ್ಲಿ ಸೇರಿಕೊಂಡಿದ್ದರು. ಗದಗ ಜಿಲ್ಲೆಯ ಮುಳುಗುಂದ ಊರಿನ ಅಬ್ದುಲ್‌ಸಾಬ್ ಅಣ್ಣಿಗೇರಿ ಎನ್ನುವ ಹದಿನೈದು ವರ್ಷ ವಯಸ್ಸಿನ ಬಾಲಕ ಬಣ್ಣದ ಲೋಕದತ್ತ ಆಕರ್ಷಿತನಾದ. ಬಾಲನಟನಾಗಿ ಕಂಪನಿ ನಾಟಕದಲ್ಲಿ ೧೯೫೪ರಲ್ಲಿ ಸೇರಿಕೊಂಡ ಅಬ್ದುಲ್‌ಸಾಬ್‌ಗೆ ರಂಗಭೂಮಿಯೇ ಮನೆಯಾಯಿತು, ಬದುಕಾಯಿತು, ಭವಿಷ್ಯವೂ ಆಯಿತು. ಗುಬ್ಬಿ ವೀರಣ್ಣನವರ ಕಣ್ಣಿಗೆ ಬಿದ್ದು ಗುಬ್ಬಿ ಕಂಪನಿಯಲ್ಲಿ ಹಲವಾರು ವರ್ಷಗಳ ಕಾಲ ನಟನಾಗಿ ತೊಡಗಿಸಿಕೊಂಡ ಅಬ್ದುಲ್‌ಸಾಬ್ ನಂತರ ಹಲವಾರು ವೃತ್ತಿ ಕಂಪನಿಗಳಲ್ಲಿ ತಮ್ಮ ಪ್ರತಿಭೆಯನ್ನು ಮೆರೆದರು. ಸಾಮಾಜಿಕ, ಐತಿಹಾಸಿಕ ಹಾಗೂ ಪೌರಾಣಿಕ ನಾಟಕಗಳಲ್ಲಿ ಪ್ರಮುಖ ಪಾತ್ರಗಳನ್ನು ಅಭಿನಯಿಸುತ್ತಾ ಜನಪ್ರಿಯರಾದರು. ಅಬ್ದುಲ್‌ಸಾಬ್‌ರವರು ಅತ್ಯಮೋಘವಾಗಿ ಅಭಿನಯಿಸಿದ ಪರಶುರಾಮ, ರಾಮ, ಅಲ್ಲಮಪ್ರಭು, ಸತ್ಯಹರಿಶ್ಚಂದ್ರ ಪಾತ್ರಗಳಂತೂ ಎಂದೂ ಮರೆಯಲಾಗದಂತಹವು. ಕಲೆ ಎನ್ನುವುದು ಧರ್ಮಾತೀತವಾದದ್ದು ಎನ್ನುವುದಕ್ಕೆ ಸಾಕ್ಷಿಯಂತಿದ್ದ ಅಬ್ದುಲ್‌ಸಾಬ್ ರಂಗಭೂಮಿಯಲ್ಲಿ ಕೋಮುಸೌಹಾರ್ದದ ಪ್ರತೀಕವಾಗಿದ್ದರು.

ಅವರ ಪ್ರತಿಭೆ ಹಾಗೂ ಜನಪ್ರಿಯತೆ ಅವರನ್ನು ರಂಗಭೂಮಿಯ ಚೌಕಟ್ಟನ್ನು ದಾಟಿಸಿ ಚಲನಚಿತ್ರ ಕ್ಷೇತ್ರಕ್ಕೂ ಕರೆದೊಯ್ದವು. ಅಬ್ದುಲ್‌ಸಾಬ್‌ರವರ ಪ್ರತಿಭೆ ಹಾಗೂ ಕೊಡುಗೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ, ಹಾಗೆಯೇ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಯನ್ನು ಕರ್ನಾಟಕ ಸರಕಾರ ನೀಡಿದೆ. ಕಳೆದ ನಾಲ್ಕು ವರ್ಷಗಳಿಂದ ತೀವ್ರ ಅನಾರೋಗ್ಯಕ್ಕೊಳಗಾದ ಅಬ್ದುಲ್‌ಸಾಬ್‌ರವರು ತಮ್ಮ ಎಪ್ಪತ್ತಾರನೇ ವಯಸ್ಸಿನಲ್ಲಿ ೨೦೧೫ ಜೂನ್ ೧ರಂದು ಹುಬ್ಬಳ್ಳಿಯ ಗಣೇಶಪೇಟೆಯಲ್ಲಿರುವ ತಮ್ಮ ನಿವಾಸದಲ್ಲಿ ನಿಧನರಾದರು. ರಂಗಭೂಮಿಗಾಗಿ ಬದುಕು ಸವೆಸಿ ಅಪಾರವಾದ ಕೊಡುಗೆ ನೀಡಿದಂತಹ ಅಬ್ದುಲ್‌ಸಾಬ್‌ರವರು ವೃತ್ತಿ ರಂಗಭೂಮಿ ಎಂದೂ ಮರೆಯದಂತಹ ಪ್ರತಿಭೆ.

## ರಂಗಭೂಮಿಯನ್ನೇ ಬದುಕಾಗಿಸಿಕೊಂಡ ರಾಜಶೇಖರ್

ಎರಡೂ ಕಾಲು ದಶಕದ ಹಿಂದೆ ಕೊಪ್ಪಳ ಜಿಲ್ಲೆಯ ಹಳ್ಳಿಯೊಂದರಿಂದ ಬದುಕು ಕಟ್ಟಿಕೊಳ್ಳಬೇಕೆಂದು ಬೆಂಗಳೂರಿಗೆ ಬಂದ ಯುವಕ ರಾಜಶೇಖರ್ ನಿಲೋಗಲ್‌ಮಠ ರಂಗಾಸಕ್ತಿಯಿಂದ ಬಂದು ಸೇರಿದ್ದು 'ಅಭಿನಯ ತರಂಗ' ರಂಗಶಾಲೆಯನ್ನು. ಆ ನಂತರ ರಂಗಭೂಮಿಯನ್ನೇ ವೃತ್ತಿಯಾಗಿ ತೆಗೆದುಕೊಂಡು ನಟನಾಗಿ, ರಂಗ ನಿರ್ದೇಶಕನಾಗಿ, ನಾಟಕಕಾರನಾಗಿ... ನಾಟಕ ನಿರ್ಮಿತಿಯ ಎಲ್ಲಾ ಆಯಾಮಗಳಲ್ಲೂ ತನ್ನನ್ನು ತೊಡಗಿಸಿಕೊಂಡ. ನಾಟಕವೇ ಆತನ ಉಸಿರು, ವೃತ್ತಿ, ಬದುಕು ಎಲ್ಲಾ ಆಗಿತ್ತು.

ಚಿತ್ರಾ, ಅಭಿನಯ ತರಂಗ, ಸಂಚಯ, ಸ್ನೇಹ ಸಮೂಹ... ಹೀಗೆ ಕೆಲವಾರು ರಂಗತಂಡಗಳಲ್ಲಿ ಸಕ್ರಿಯ ನಟನಾಗಿ ಪ್ರಮುಖ ಪಾತ್ರಗಳಲ್ಲಿ ರಾಜಶೇಖರ್ ಅಭಿನಯಿಸಿ ಗಮನಸೆಳೆದಿದ್ದರು. ಶೋಕಚಕ್ರ, ಚಂದ್ರಹಾಸ, ಬರ, ಕೇಳು ಜನಮೇಜಯ, ಶಸ್ತ್ರಪರ್ವ, ಪ್ರತಿಬಿಂಬಗಳು... ಸಂಕ್ರಾಂತಿ, ಚಿದಂಬರ ರಹಸ್ಯ, ಕೋರಿಯೋಲೀನಸ್... ಹೀಗೆ ಹಲವಾರು ನಾಟಕಗಳಲ್ಲಿ ನಟಿಸಿ ತನ್ನ ಅಭಿನಯ ಪ್ರತಿಭೆಯನ್ನು ಸಾಬೀತುಪಡಿಸಿದ್ದರು. ಅಭಿನಯ ತರಂಗ ಹಾಗೂ ಚಿತ್ರ ತಂಡಗಳಿಗೆ ಹಲವಾರು ಬೀದಿನಾಟಕಗಳನ್ನು ಸ್ವತಃ ರಚಿಸಿ ನಿರ್ದೇಶಿಸಿದ್ದರು. ನೇಪಥ್ಯದಲ್ಲಿ ನಟರಿಗೆ ಮೇಕಪ್ ಅಗತ್ಯವೆನಿಸಿದಾಗ ಮೇಕಪ್ ಮಾಡಿದರು, ಬ್ಯಾಕ್‌ಸ್ಟೇಜ್‌ನಲ್ಲಿ ಅಗತ್ಯವೆನಿಸಿದಾಗ ತೊಡಗಿಕೊಂಡರು. ಹೆಚ್ಚೂ ಕಡಿಮೆ ರಂಗನಿರ್ಮಿತಿಯಲ್ಲಿ ಆಲ್‌ರೌಂಡರ್ ಆಗಿ ತನ್ನನ್ನು ತಾನು ತೊಡಗಿಸಿಕೊಂಡಿದ್ದನ್ನು ಬೆಂಗಳೂರಿನ ಆಧುನಿಕ ಹವ್ಯಾಸಿ ರಂಗಭೂಮಿ ಮರೆಯುವಂತಿಲ್ಲ. ರಂಗಭೂಮಿಯ ಕೆಲಸದಲ್ಲಿ ಬದ್ಧತೆ ಹಾಗೂ ಸಿದ್ಧತೆಗಳಿಗೆ ರಾಜಶೇಖರ್ ಮಾದರಿಯಾಗಿದ್ದಾರೆ.

ಆತ್ಮತೃಪ್ತಿಗಾಗಿ ರಂಗಭೂಮಿಯಲ್ಲಿ ಅವಿರತವಾಗಿ ದುಡಿದ ರಾಜಶೇಖರ್ ಹೊಟ್ಟೆಪಾಡಿಗಾಗಿ ಧಾರಾವಾಹಿಗಳಿಗೆ ಚಿತ್ರಕಥೆ ಬರೆಯುವುದನ್ನು ವೃತ್ತಿಯಾಗಿಸಿಕೊಂಡರು. ಬೆಳದಿಂಗಳಾಗಿ ಬಾ, ಬೃಂದಾವನ... ಧಾರಾವಾಹಿಯಿಂದ ಹಿಡಿದು ರಥಸಪ್ತಮಿಯವರೆಗೂ ಕಳೆದ ಹದಿನೈದು ವರ್ಷಗಳಿಂದ ಬರೆದೇ ಬದುಕಿದರು. ಆಗಾಗ ಕೆಲವೊಂದು ಧಾರಾವಾಹಿಗಳಲ್ಲಿ ನಟಿಸಿದರು. ೨೦೧೫ರ ಮೇ ೨೭ರಂದು ರಾಜಶೇಖರ್ ತಮ್ಮ ನಿವಾಸದಲ್ಲಿ ಅಸುನೀಗಿದರು. ಕೇವಲ ೪೬ರ ಹರೆಯದ ವಯಸ್ಸಲ್ಲಿ ಅಕಾಲಿಕವಾಗಿ ರಾಜಶೇಖರ್ ಮರಣಹೊಂದಿದ್ದು ಅವರ ಆತ್ಮೀಯರಿಗೆ, ರಂಗ ಬಂಧುಗಳಿಗೆ ನಿಜಕ್ಕೂ ಆಘಾತಕಾರಿಯಾಗಿದೆ. ರಾಜಶೇಖರ್ ತಮ್ಮ ಪ್ರತಿಭೆ ಹಾಗೂ ರಂಗಭೂಮಿಯ ಮೇಲಿದ್ದ ನಿಷ್ಠೆಗಳಿಗೆ ಆದರ್ಶವಾಗಿರುವಂತೆಯೇ ಅವರ ಬದುಕು 'ರೂಢಿಸಿಕೊಂಡ ಅಶಿಸ್ತಿನಿಂದ ದುರಂತ ತಪ್ಪಿದ್ದಲ್ಲ' ಎನ್ನುವ ಸಂದೇಶವನ್ನೂ ಸಾರುವಂತಿದೆ.

**ಶಶಿಕಾಂತ ಯಡಹಳ್ಳಿ**
'ಪ್ರಗತಿ ನಿವಾಸ', ನಂ. ೧೩೧, ರಾಮ ಟೆಂಪಲ್ ಸ್ಟ್ರೀಟ್
ದೊಮ್ಮಲೂರು ವಿಲೇಜ್, ಬೆಂಗಳೂರು – ೫೬೦ ೦೭೧




# ಇದು ಧರ್ಮಾಸ್ಪತ್ರೆಯಲ್ಲ ; ಕಾರ್ಪೊರೇಟ್ ಕಂಪನಿ !

ಒಂದು ಕಲ್ಯಾಣ ರಾಜ್ಯದಲ್ಲಿ ಆರೋಗ್ಯ, ಶಿಕ್ಷಣ, ಸುರಕ್ಷಿತ ಹಾಗೂ ಸುಸಜ್ಜಿತವಾದ ರಸ್ತೆ – ಇವುಗಳನ್ನು ನೀಡುವ ಜವಾಬ್ದಾರಿ ಪ್ರಭುತ್ವದ್ದಾಗಿರುತ್ತದೆ. ಈ ನಿಟ್ಟಿನಲ್ಲಿ ಕೆಲಸ ಮಾಡಿರುವ ಪ್ರಭುತ್ವಗಳ ಉದಾಹರಣೆ ನಮ್ಮಲ್ಲಿದೆ. ಮೈಸೂರಿನ ಅರಸರಂಥ ಜನಪರ ಆಡಳಿತಗಾರರು ಇಂಥ ಕೆಲಸವನ್ನು ಜನಸೇವೆಯೆಂದು ಬಗೆದಿದ್ದರು. ಆದರೆ ಸ್ವಾತಂತ್ರ್ಯದ ನಂತರ ಬಂದ ಪ್ರಜಾಪ್ರಭುತ್ವ ಆಡಳಿತದ ನಿಜವಾದ ಆಶಯ ಕಲ್ಯಾಣ ರಾಜ್ಯವನ್ನು ಕಟ್ಟುವುದೇ ಆಗಿತ್ತು. ಬಂಡವಾಳಶಾಹಿ ವ್ಯವಸ್ಥೆಯನ್ನು ಮತ್ತು ರಾಜಶಾಹಿಯನ್ನು ನಿರಾಕರಿಸಿ ಜನರ ಕಲ್ಯಾಣಕ್ಕಾಗಿ ದುಡಿಯುವ ಸಂಕಲ್ಪ ಆರಂಭದಲ್ಲಿ ಇದ್ದಂತೆ ತೋರುತ್ತದೆ. ಆದರ್ಶ ಆಲೋಚನೆಗಳ ಮೂಲಕ ಬಡವ ಬಲ್ಲಿದರೆಂಬ ಭಾವನೆಯನ್ನು ತೊಡೆದುಹಾಕಿ, ಸಮಾನತೆಯ ಆಧಾರದ ಮೇಲೆ ಎಲ್ಲರಿಗೂ ಎಲ್ಲಾ ಬಗೆಯ ಅನುಕೂಲಗಳು ದೊರೆಯುವಂತಾಗ ಬೇಕೆಂಬುದು ನಮ್ಮ ಸ್ವಾತಂತ್ರ್ಯ ಗಳಿಕೆಯ ಕನಸಾಗಿತ್ತು.

ಆದರೆ ಸ್ವಾತಂತ್ರ್ಯ ಬಂದ ನಂತರದ ದಿನಗಳಲ್ಲಿ ಕಲ್ಯಾಣ ರಾಜ್ಯದ ಮುಖ್ಯ ಕೆಲಸಗಳಾದ ಶಿಕ್ಷಣ ಮತ್ತು ಆರೋಗ್ಯ ನಿಧಾನವಾಗಿ ಸರ್ಕಾರದ ಹಿಡಿತದಿಂದ ಖಾಸಗಿಯವರ ಹಿಡಿತಕ್ಕೆ ಸೇರಲಾರಂಭಿಸಿದವು. ಮೊದಮೊದಲು ಆರೋಗ್ಯ ಮತ್ತು ಶಿಕ್ಷಣ ಕ್ಷೇತ್ರಗಳು ಸೇವಾ ಕ್ಷೇತ್ರಗಳೆಂದು ಕರೆಸಿಕೊಂಡು, ನಂತರ ಬಂಡವಾಳ ಗಳಿಕೆಯ ಮುಖ್ಯ ಸಾಧನಗಳಾಗಿ ರೂಪಾಂತರಗೊಂಡವು. ಸರ್ಕಾರದ ಧರ್ಮಾಸ್ಪತ್ರೆಗಳು ನಿರ್ಲಕ್ಷ್ಯಕ್ಕೊಳಗಾಗಿ ಜನಸಾಮಾನ್ಯರಿಗೆ ಅಗತ್ಯ ಸೇವೆಯನ್ನು ಮಾಡುವಲ್ಲಿ ವಿಫಲವಾಗತೊಡಗಿದವು. ಇದರಲ್ಲಿ ಅಲ್ಲಿ ಕೆಲಸ ಮಾಡುವ ವೈದ್ಯರ ಭ್ರಷ್ಟತೆಯ ಪಾಲು ಕೂಡ ಅಪಾರವಾಗಿತ್ತು. ಇಂಥ ಪರಿಸ್ಥಿತಿಯ ಉದ್ಭವದಿಂದ ಖಾಸಗಿಯವರು ತೆರೆದ, ಆಧುನಿಕ ಸೌಲಭ್ಯಗಳನ್ನೊಳಗೊಂಡ ಆಸ್ಪತ್ರೆಗಳು ಸೇವೆಗೆ ತಕ್ಕ ಹಣ ಪಡೆದು ಉತ್ತಮ ಚಿಕಿತ್ಸೆ ನೀಡಿ ಜನರ ಮೆಚ್ಚುಗೆ ಗಳಿಸಿದವು. 'ಇಲ್ಲಿ ಸೇವೆಗೆ ತಕ್ಕ ಹಣ ನೀಡಿದರೆ ಉತ್ತಮ ಚಿಕಿತ್ಸೆ ಸಿಗುತ್ತದೆ' ಎಂಬ ನಂಬಿಕೆ ಪ್ರಚಾರ ಗೊಂಡು ಖಾಸಗಿಯವರು ಆರೋಗ್ಯ ಸೇವೆಯೆಂಬ ಕಲ್ಯಾಣ ಕೆಲಸವನ್ನು ಉದ್ಯಮವನ್ನಾಗಿ ಮಾಡಿಕೊಂಡರು. ಸೇವೆಯ ಹೆಸರಿನಲ್ಲಿ ವಿಪುಲವಾಗಿ ಹಣ ಮಾಡುವ ಉದ್ಯಮ ಸೃಷ್ಟಿಗೊಂಡಿತು. ಇದರಿಂದ ದೇಶದಲ್ಲಿ ಆರೋಗ್ಯ ಕೆಟ್ಟಾಗ ಉಳ್ಳವರಿಗೊಂದು ಬಗೆಯ ಚಿಕಿತ್ಸೆ, ಇಲ್ಲದವರಿಗೊಂದು ಬಗೆಯ ಚಿಕಿತ್ಸೆ ಎನ್ನುವ ಸ್ಥಿತಿ ನಿರ್ಮಾಣವಾಯಿತು. ದೇಶದಲ್ಲಿ ನಿಧಾನವಾಗಿ ತನ್ನ ಅಸ್ತಿತ್ವವನ್ನು ಸ್ಥಾಪಿಸಿಕೊಂಡ ಜಾಗತಿಕ ಬಂಡವಾಳ ಶಾಹಿಗಳು ನಿರ್ಮಾಣ ಮಾಡಿದ ಆರ್ಥಿಕ ಏರುಪೇರಿನಿಂದ ಆರ್ಥಿಕ ಅಸಮಾನತೆ ಅತಿಯಾಗಿ ಜನರ ಬದುಕುವ ಸ್ಥಿತಿಯಲ್ಲಿ ಕಂದರವುಂಟಾಯಿತು.

ಇಂಥ ಸಾಮಾಜಿಕ–ಆರ್ಥಿಕ ಸ್ಥಿತಿಯು ಜೀವಂತ ಇರುವ ಸ್ಥಿತಿಯಲ್ಲಿ ನಾನು ಅಪೊಲೊ ಆಸ್ಪತ್ರೆ ಸೇರಿದ್ದೆ. ಸಾಮಾನ್ಯ ಮಧ್ಯಮ ವರ್ಗದ ಕುಟುಂಬದಿಂದ ಬಂದ ನಾನು ನನ್ನ ಉದ್ಯೋಗ ತಂದುಕೊಟ್ಟಿದ್ದ ವೇತನದ ಕಾರಣದಿಂದಾಗಿ ತುಸು ಅನುಕೂಲಕರ ಸ್ಥಿತಿಯಲ್ಲಿದ್ದೆ. ಆದರೆ ಅಪೊಲೊ ಆಸ್ಪತ್ರೆಯ ದುಬಾರಿ ಸೇವಾ ಶುಲ್ಕಗಳು ನನ್ನ ಅನೇಕ ವರ್ಷಗಳ ಉಳಿತಾಯವನ್ನು ಆಪೋಶನ ಮಾಡಿ ನನ್ನನ್ನು ಬರಿಗೈ ಮಾಡಿದವು.

'ಸೇವೆಗೆ ತಕ್ಕ ಹಣ' - ಇಲ್ಲಿಯ ಮೂಲಮಂತ್ರ. ಆಸ್ಪತ್ರೆ ನೀಡುವ ಕಿಂಚಿತ್ ಸೇವೆಯಿಂದ ಹಿಡಿದು ಶಸ್ತ್ರಚಿಕಿತ್ಸೆಯಂಥ ಗಂಭೀರ ಸ್ವರೂಪದ ಸೇವೆಯವರೆಗೂ, ಅದರ ತೀವ್ರತೆಯ ಸ್ವರೂಪದ ಆಧಾರದ ಮೇಲೆ ಹಣ ಪಡೆಯಲಾಗುತ್ತಿತ್ತು. ಇಲ್ಲಿ ಯಾವುದೇ ವಸ್ತು, ಸೇವೆ ಉಚಿತವಾಗಿ ದೊರೆಯುತ್ತಿರಲಿಲ್ಲ. ರೋಗಿಗೆ ತೊಡಿಸುವ ಬಟ್ಟೆ , ಚಡ್ಡಿ, ಹಾಸಿಗೆ, ಅದರ ಹೊದಿಕೆ, ರೋಗಿಗೆ ನೀಡುವ ಔಷಧ, ಅದನ್ನು ನೀಡಲು ಬಳಸುವ ಸಾಧನಗಳು, ರಕ್ತ ಪರೀಕ್ಷೆ ಮತ್ತು ರಕ್ತ ಪಡೆಯಲು ಬಳಸುವ ಸೂಜಿಗಳು, ನಳಿಕೆಗಳು, ಬಗೆ ಬಗೆಯ ಸೇವಾ ಟ್ಯೂಬುಗಳು - ಹೀಗೆ ಒಂದಲ್ಲ ಎರಡಲ್ಲ, ಪ್ರತಿಯೊಂದಕ್ಕೂ ಹಣ ಪಡೆಯಲಾಗುತ್ತಿತ್ತು. ತೀವ್ರ ನಿಗಾ ಘಟಕದಲ್ಲಿ ಚಿಕಿತ್ಸೆ ಪಡೆಯುತ್ತಿರುವ ರೋಗಿ ವೆಂಟಿಲೇಟರ್‌ನಿಂದ ಪಡೆಯುವ ಗಾಳಿ, ವೆಂಟಿಲೇಟರ್‌ನ ಶುಲ್ಕ, ಆತ ಪಡೆಯುವ ಆಮ್ಲಜನಕ - ಹೀಗೆ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ಮುಖ್ಯ ತಜ್ಞ ವೈದ್ಯರು ರೋಗಿಗೆ ಇರಬಹುದಾದ ಇತರೆ ರೋಗಗಳನ್ನು ಪರೀಕ್ಷಿಸಲು ಆ ರೋಗಕ್ಕೆ ಸಂಬಂಧಪಟ್ಟ ಇತರೆ ತಜ್ಞ ವೈದ್ಯರ ಸಲಹೆ ಕೇಳಿದರೆ, ಆ ವೈದ್ಯರ ಸೇವಾ ಶುಲ್ಕ - ಹೀಗೆ ರೋಗಿಯ ಲೆಕ್ಕದಲ್ಲಿ ಪ್ರತಿ ಕ್ಷಣದಲ್ಲಿ ಪ್ರತಿಯೊಂದು ಪೈಸೆಯೂ ಜಮಾ ಆಗುತ್ತಾ ಖರ್ಚು ಬೆಳೆಯುತ್ತಾ ಸಾಗುತ್ತದೆ.

**ಪ್ರೊ॥ ಶಿವರಾಮು ಕಾಡನಕುಪ್ಪೆ**

ನಾನು ಆಸ್ಪತ್ರೆಯಲ್ಲಿ ಐವತ್ತನಾಲ್ಕು ದಿನ ಇದ್ದೆ. ಅದರಲ್ಲಿ ಐಸಿಯುನಲ್ಲಿಯೇ ಸುಮಾರು ನಲವತ್ತು ದಿನಗಳು ಇರುವಂತಾಯಿತು. ಆಸ್ಪತ್ರೆಗಳಲ್ಲಿ ತೀವ್ರ ನಿಗಾ ಘಟಕದ ಶುಲ್ಕಗಳು ಅಧಿಕವಾಗಿರುತ್ತವೆ. ಅನಂತರದ ದಿನಗಳನ್ನು ಸ್ಪೆಶಲ್ ವಾರ್ಡ್‌ನಲ್ಲಿ ಕಳೆದಿದ್ದೆ.

ಭಾರತದಲ್ಲಿ ಶ್ರೀಮಂತ ಬಂಡವಾಳಶಾಹಿಗಳು ತೆರೆದಿದ್ದ ಆಸ್ಪತ್ರೆಗಳಿಗಿಂತ ಅಪೊಲೊ ಭಿನ್ನ ಸ್ವರೂಪದ ಆಸ್ಪತ್ರೆಯಾಗಿತ್ತು. ಇದು ಕೇವಲ ಖಾಸಗಿ ಆಸ್ಪತ್ರೆಯಲ್ಲ ; ಇದೊಂದು ಕಾರ್ಪೊರೇಟ್ ಕಂಪನಿಯು ನಡೆಸುತ್ತಿದ್ದ ಆಸ್ಪತ್ರೆಯಾಗಿತ್ತು. ಚೆನ್ನೈನಲ್ಲಿ ಇದರ ಆಡಳಿತ ಕಛೇರಿ ಇದ್ದು, ಇದರ ಅನೇಕ ಶಾಖೆಗಳು ದೇಶದ ಹಲವು ನಗರಗಳಲ್ಲಿ ಕೆಲಸ ನಿರ್ವಹಿಸುತ್ತಿದ್ದವು. ಆಡಳಿತಾಂಗದ ನೌಕರರು ಒಂದು ಕಡೆಯಿಂದ ಮತ್ತೊಂದು ಕಡೆಗೆ ವರ್ಗಾವಣೆಗೊಳ್ಳುತ್ತಿದ್ದರು. ಇಲ್ಲಿ ಎಲ್ಲ ರೋಗಗಳಿಗೆ ಸಂಬಂಧಿಸಿದಂತೆ ಚಿಕಿತ್ಸೆಗೆ ಬೇಕಾದ ಅತ್ಯಾಧುನಿಕ ಸೌಲಭ್ಯಗಳೂ ಇದ್ದವು. ಪ್ರತಿರೋಗವನ್ನು ಪರೀಕ್ಷಿಸಿ ಚಿಕಿತ್ಸೆ ನೀಡುವ ತಜ್ಞತೆಯನ್ನು ಹೊಂದಿರುವ ವೈದ್ಯರೂ ಇಲ್ಲಿದ್ದರು. ಭಾರತದ ಇತರೆ ಕಾರ್ಪೊರೇಟ್ ಕಂಪನಿಗಳು ನೀಡುತ್ತಿದ್ದಂತೆಯೇ ಇಲ್ಲಿಯೂ ನೌಕರರಿಗೆ, ವೈದ್ಯರಿಗೆ ಸಾಕಷ್ಟು ಉತ್ತಮ ಸಂಬಳ ನೀಡಲಾಗುತ್ತಿತ್ತು. ಪ್ರತಿ ಅಂತಸ್ತಿಗೂ ಸಂಪರ್ಕ ಕಲ್ಪಿಸುವ ಲಿಫ್ಟ್‌ಗಳು; ಸುಂದರವಾದ, ಸ್ವಚ್ಛತೆಯಿಂದ ಕೂಡಿದ ಅಮೃತಶಿಲೆಯಿಂದ ಮಾಡಿದ ಕಾರಿಡಾರ್‌ಗಳು; ಅತ್ಯುತ್ತಮ ನರ್ಸಿಂಗ್ ಸೇವೆ; ಔಷಧೀಯ ಸೇವೆ; ರೋಗಿಗಳಿಗೆ ಉತ್ತಮ ವಾತಾವರಣ ಮೂಡಿಸುವಂಥ ಸಕಲ ವ್ಯವಸ್ಥೆ ಇಲ್ಲಿದ್ದವು. ಇಲ್ಲಿಗೆ ಗಂಭೀರ ಸ್ವರೂಪದ ರೋಗಿಯನ್ನು ಸೇರಿಸಿದರೆ, ಅವನ ಸಂಪೂರ್ಣ ನಿಗಾ ವಹಿಸಿ ಗುಣಪಡಿಸುವ ಜವಾಬ್ದಾರಿಯನ್ನು ಆಸ್ಪತ್ರೆಯೇ ನಿಭಾಯಿಸುತ್ತಿತ್ತು. ಸದಾ ರೋಗಿಯ ಕಡೆಯವರೊಡನೆ ಸಂಪರ್ಕದಲ್ಲಿದ್ದು, ಸಮಯ ಸಂದರ್ಭ ಬಂದಾಗಲೆಲ್ಲಾ ಅವರೊಡನೆ ಸಮಾಲೋಚನೆ ನಡೆಸುವ ವ್ಯವಸ್ಥೆಯನ್ನು ಜಾರಿಗೊಳಿಸಲಾಗಿತ್ತು. ಹಣವೊಂದಿದ್ದಲ್ಲಿ ರೋಗಿಯ ಕಡೆಯವರು ಯಾವುದರ ಬಗ್ಗೆಯೂ ಚಿಂತಿಸಬೇಕಾದ ಅವಶ್ಯಕತೆ ಇರುತ್ತಿರಲಿಲ್ಲ.

'ಸೇವೆಗೆ ತಕ್ಕ ಹಣ' – ಇಲ್ಲಿಯ ಮೂಲಮಂತ್ರ. ಆಸ್ಪತ್ರೆ ನೀಡುವ ಕಿಂಚಿತ್ ಸೇವೆಯಿಂದ ಹಿಡಿದು ಶಸ್ತ್ರಚಿಕಿತ್ಸೆಯಂಥ ಗಂಭೀರ ಸ್ವರೂಪದ ಸೇವೆಯವರೆಗೂ, ಅದರ ತೀವ್ರತೆಯ ಸ್ವರೂಪದ ಆಧಾರದ ಮೇಲೆ ಹಣ ಪಡೆಯಲಾಗುತ್ತಿತ್ತು. ಇಲ್ಲಿ ಯಾವುದೇ ವಸ್ತು, ಸೇವೆ ಉಚಿತವಾಗಿ ದೊರೆಯುತ್ತಿರಲಿಲ್ಲ. ರೋಗಿಗೆ ತೊಡಿಸುವ ಬಟ್ಟೆ, ಚಡ್ಡಿ, ಹಾಸಿಗೆ, ಅದರ ಹೊದಿಕೆ, ರೋಗಿಗೆ ನೀಡುವ ಔಷಧ, ಅದನ್ನು ನೀಡಲು ಬಳಸುವ ಸಾಧನಗಳು, ರಕ್ತ ಪರೀಕ್ಷೆ ಮತ್ತು ರಕ್ತ ಪಡೆಯಲು ಬಳಸುವ ಸೂಜಿಗಳು, ನಳಿಕೆಗಳು, ಬಗೆ ಬಗೆಯ ಸೇವಾ ಟ್ಯೂಬುಗಳು – ಹೀಗೆ ಒಂದಲ್ಲ ಎರಡಲ್ಲ, ಪ್ರತಿಯೊಂದಕ್ಕೂ ಹಣ ಪಡೆಯಲಾಗುತ್ತಿತ್ತು. ತೀವ್ರ ನಿಗಾ ಘಟಕದಲ್ಲಿ ಚಿಕಿತ್ಸೆ ಪಡೆಯುತ್ತಿರುವ ರೋಗಿ ವೆಂಟಿಲೇಟರ್‌ನಿಂದ ಪಡೆಯುವ ಗಾಳಿ, ವೆಂಟಿಲೇಟರ್‌ನ ಶುಲ್ಕ, ಆತ ಪಡೆಯುವ ಆಮ್ಲಜನಕ – ಹೀಗೆ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ಮುಖ್ಯ ತಜ್ಞ ವೈದ್ಯರು ರೋಗಿಗೆ ಇರಬಹುದಾದ ಇತರೆ ರೋಗಗಳನ್ನು ಪರೀಕ್ಷಿಸಲು ಆ ರೋಗಕ್ಕೆ ಸಂಬಂಧಪಟ್ಟ ಇತರೆ ತಜ್ಞ ವೈದ್ಯರ ಸಲಹೆ ಕೇಳಿದರೆ, ಆ ವೈದ್ಯರ ಸೇವಾ ಶುಲ್ಕ – ಹೀಗೆ ರೋಗಿಯ ಲೆಕ್ಕದಲ್ಲಿ ಪ್ರತಿ ಕ್ಷಣದಲ್ಲಿ ಪ್ರತಿಯೊಂದು ಪೈಸೆಯೂ ಜಮಾ ಆಗುತ್ತಾ ಖರ್ಚು ಬೆಳೆಯುತ್ತಾ ಸಾಗುತ್ತದೆ.

ಐಟಿಬಿಟಿಯಂಥ ಕಾರ್ಪೊರೇಟ್ ಕಂಪನಿಗಳ ಎಲ್ಲಾ ಗುಣಲಕ್ಷಣಗಳು ಕಂಪನಿಯ ಕಾರ್ಯವಿಧಾನ ಮತ್ತು ಉದ್ಯಮಶೀಲತೆಯಲ್ಲಿ ಮಾತ್ರವಲ್ಲ, ಇಲ್ಲಿ ಕೆಲಸ ಮಾಡುವ ನಾಲ್ಕನೆಯ ದರ್ಜೆಯ ನೌಕರರನ್ನು ಹೊರತುಪಡಿಸಿ ಎಲ್ಲರಲ್ಲೂ ಕಾಣಬಹುದು. ಇಲ್ಲಿ ನೌಕರರು ಕೆಲಸಕ್ಕೆ ಸೇರುವ ಮುನ್ನ ಇಂತಿಷ್ಟು ದಿನ ಕೆಲಸ ಮಾಡುತ್ತೇವೆಂದು ಕಂಪನಿಗೆ ಮುಚ್ಚಳಿಕೆ ಬರೆದುಕೊಟ್ಟಿರುತ್ತಾರೆ. ಆ ಒಪ್ಪಂದದ ಪ್ರಕಾರ ಅವರು ಕೆಲಸ ಮಾಡುತ್ತಾರೆ. ಅವರ ಒಪ್ಪಂದದ ಅವಧಿ ಮುಗಿಯುವ ಸಂದರ್ಭ ಬಂದಾಗ ಕಂಪನಿ ನೀಡುವ ವೇತನ ಮತ್ತು ಕೆಲಸ ಅವರಿಗೆ ತೃಪ್ತಿ ನೀಡಿದರೆ ಅಲ್ಲಿಯೇ ಮುಂದುವರಿಯುತ್ತಾರೆ. ಆದರೆ ಕಂಪನಿಯ ಕೆಲಸದ ಒತ್ತಡ ಜಾಸ್ತಿಯಾಗಿ, ಬರುತ್ತಿರುವ ಸಂಬಳ ತೃಪ್ತಿಕರವಾಗಿಲ್ಲದಿದ್ದಲ್ಲಿ ರಾಜಿನಾಮೆ ನೀಡಿ ಬೇರೆ ಕಂಪನಿಯಲ್ಲಿ ಕೆಲಸ ಸಂಪಾದಿಸಿ ಹೊರಡುತ್ತಾರೆ.

ನಾನು ಅಪೊಲೊ ಆಸ್ಪತ್ರೆಗೆ ಸೇರಿದ್ದು ಡಿಸೆಂಬರ್ ತಿಂಗಳಲ್ಲಿ. ನಾನು ಆ ತಿಂಗಳ ಕೊನೆಯಲ್ಲಿ ಹಲವಾರು ನರ್ಸುಗಳು ಕೆಲಸ ಬಿಟ್ಟುಹೋದುದನ್ನು ಗಮನಿಸಿದೆ. ನರ್ಸುಗಳ ನಡುವೆ ಮೈಸೂರು ನಗರದ ವಿವಿಧ ಆಸ್ಪತ್ರೆಗಳಲ್ಲಿ ನೀಡುವ ಸಂಬಳ ಮತ್ತು ಇತರೆ ಸೌಲಭ್ಯಗಳ ಬಗ್ಗೆ ಚರ್ಚೆ ನಡೆಯುತ್ತಿತ್ತು. ಅವರಲ್ಲಿ ಬಹಳ ಜನರು ಈಗಾಗಲೇ ಮೈಸೂರಿನ ಹಲವು ಆಸ್ಪತ್ರೆಗಳಲ್ಲಿ ಕೆಲಸ ಮಾಡಿದ ಅನುಭವ ಪಡೆದಿದ್ದರು. ಒಂದು ಆಸ್ಪತ್ರೆಗಿಂತ ಮತ್ತೊಂದು ಆಸ್ಪತ್ರೆಯಲ್ಲಿ ನರ್ಸುಗಳ ಸೇವಾನುಭವ ಮತ್ತು ಕುಶಲತೆಯ ಆಧಾರದ ಮೇಲೆ ನಾಲ್ಕೈದು ಸಾವಿರ ಅಧಿಕ ಸಂಬಳ ದೊರೆಯುತ್ತದೆಯೆಂಬ ಸುಳಿವು ದೊರೆತ ಕೂಡಲೆ, ಒಂದು ತಿಂಗಳು ಮುಂಚಿತವಾಗಿ ಕಂಪನಿಗೆ ರಾಜಿನಾಮೆ ಪತ್ರ ನೀಡಿ ಜಾಗ ಖಾಲಿ ಮಾಡುತ್ತಿದ್ದರು.

ಒಂದು ದಿನ ರಾತ್ರಿ ಹನ್ನೊಂದು ಗಂಟೆಯ ಸಮಯದಲ್ಲಿ ನನ್ನ ಸ್ವಚ್ಛತೆಯ ಕಾರ್ಯದಲ್ಲಿ ತೊಡಗಿದ್ದ ಇಬ್ಬರು ನರ್ಸುಗಳ ಸಂಭಾಷಣೆ ನನಗೆ ಕುತೂಹಲ ಮೂಡಿಸಿತು. ಅವರಲ್ಲಿ ಒಬ್ಬ ಲಿಂಗಾಯಿತ ಕೋಮಿಗೆ ಸೇರಿದವನು. ಅವನು ಹೇಳುತ್ತಿದ್ದ : "ಜೆ.ಎಸ್.ಎಸ್.ನವರು ಪ್ರಾರಂಭ ಮಾಡಿರುವ ಹೊಸ ಆಸ್ಪತ್ರೆಯಲ್ಲಿ ಇರುವ ಕೆಲಸದ ಬಗ್ಗೆ ಮಾತನಾಡಿಕೊಂಡು ಬಂದೆ. ಅಲ್ಲಿಯ ಪ್ಲೇಸ್‌ಮೆಂಟ್ ಆಫೀಸರ್ ನನಗೆ ಭರವಸೆ ನೀಡಿದ್ದಾನೆ. ಇಲ್ಲಿಗಿಂತ ಐದು ಸಾವಿರ ಅಧಿಕ ಸಂಬಳ ಬರುತ್ತದೆ. ಜೊತೆಗೆ ನಮ್ಮ ಸಂಸ್ಥೆ ಬೇರೆ ! ನಮಗೆ ಒಂದು ಬಗೆಯ ಭಾವನಾತ್ಮಕ ಸಂಬಂಧ ಇರುತ್ತದೆ." ಆತನ ಜೊತೆಯಲ್ಲಿದ್ದ ಮತ್ತೊಬ್ಬ ನರ್ಸು ಕೊಲಂಬಿಯಾ ಆಸ್ಪತ್ರೆಯಿಂದ ಒಂದು ವರ್ಷದ ಹಿಂದೆ ಬಂದಿದ್ದ. ಆತ, "ಇಲ್ಲ, ನಾನು ಇಲ್ಲೇ ಇರುತ್ತೇನೆ, ಸದ್ಯಕ್ಕೆ ಬೇರೆ ಕಡೆ ಹೋಗಲ್ಲ. ಇಲ್ಲಿ ಕೆಲಸ ಚೆನ್ನಾಗಿ ಕಲಿಯಲು ಅವಕಾಶವಿದೆ. ಮುಂದೆ ಅದರಿಂದ ಪ್ರಯೋಜನ ಆಗುತ್ತದೆ" ಎಂದ.

ಡ್ಯೂಟಿ ಡಾಕ್ಟರ್‌ಗಳೂ ಅಷ್ಟೆ. ಐಸಿಯುಗಳಲ್ಲಿ ಪಾಳಿಯ ಮೇಲೆ ಕೆಲಸ ಮಾಡುತ್ತಿದ್ದರು. ಅವರು ಕೂಡ ಬೇರೆಡೆ ಕೆಲಸಕ್ಕೆ ಹೋದ ಸಂಗತಿ ನನಗೆ ತಿಳಿಯುತ್ತಿತ್ತು. ಏಕೆಂದರೆ ಅವರ ಬದಲು ಹೊಸ ಡಾಕ್ಟರ್‌ಗಳು ಕಂಪನಿಯಿಂದ ನೇಮಕಗೊಂಡು ಕೆಲಸಕ್ಕೆ ಹಾಜರಾಗುತ್ತಿದ್ದರು.

ಕಾರ್ಪೊರೇಟ್ ಕಂಪನಿಗಳಿಗೆ ಸೇವೆಗೆ ತಕ್ಕ ಹಣ ಪಡೆಯುವ ಗುಣಲಕ್ಷಣವಿದ್ದರೆ, ಅಲ್ಲಿ ಕೆಲಸ ಮಾಡುವ ನೌಕರರಿಗೆ ತಮ್ಮ ದುಡಿಮೆ ಮತ್ತು ಅರ್ಹತೆಗೆ ತಕ್ಕ ವೇತನ ಪಡೆಯುವ ನಿರೀಕ್ಷೆಯಲ್ಲಿರುತ್ತಾರೆ. ಇಲ್ಲಿ ಕೆಲಸ ಮಾಡುವ ನೌಕರನಿಗೆ ಕಂಪನಿಯ ಮಾಲೀಕನ ಅಥವಾ ಆಡಳಿತ ಮಂಡಳಿಯ ನೇರ ಸಂಪರ್ಕ ಇರುವುದಿಲ್ಲ. ಹೀಗಾಗಿ ಮಾಲೀಕರು ಮತ್ತು ನೌಕರರ ನಡುವೆ ಇರಬೇಕಾದ ಭಾವನಾತ್ಮಕ ಬೆಸುಗೆಯಾಗಲೀ, ಮಾನವೀಯ ಸಂಬಂಧವಾಗಲೀ ಮೂಡಿರುವುದಿಲ್ಲ.

ಇಲ್ಲಿ 'ಕಲ್ಯಾಣ' ಅಥವಾ 'ಸೇವೆ' ಎಂಬುದು ಹಣದಿಂದ ನಿರ್ಧಾರವಾಗುವ ಮೌಲ್ಯವಾಗಿರುತ್ತದೆ. ಕಂಪನಿಗೆ ಹಣ ಸಂಪಾದನೆ ಮುಖ್ಯ ಗುರಿ. ಅಲ್ಲಿ ಕೆಲಸ ಮಾಡುವ ನೌಕರರಿಗೂ ಹಣವೇ ಮುಖ್ಯ. ಸಾಮಾಜಿಕ ಸೇವಾ ಮನೋಧರ್ಮ ಮತ್ತು ಸಂಸ್ಥೆಯ ಬಗೆಗಿನ ಬದ್ಧತೆ ಯಾರಿಗೂ ಇರುವುದಿಲ್ಲ. ಇಲ್ಲಿ ಹಣ ಗಳಿಕೆಯು ಬದ್ಧತೆಯ ಸಂಗಾತಿಯಾಗಿ ವಿಜೃಂಭಿಸುತ್ತದೆ. ಸರ್ಕಾರದ ಕೈಯಿಂದ ಖಾಸಗಿಯವರಿಗೆ, ಅನಂತರ ಕಾರ್ಪೊರೇಟ್ ಕಂಪನಿಗಳ ಕೈವಶವಾದ ಭಾರತೀಯ ಉದ್ಯಮಗಳು ಸಮಾಜದ ಸಮಗ್ರ ಅಭಿವೃದ್ಧಿಯ ದೃಷ್ಟಿಕೋನವನ್ನು ಹೊಂದಿವೆ ಎಂದು ಹೇಳುವುದು ಕಷ್ಟವಾಗುತ್ತದೆ. ಇಲ್ಲಿ ಸಮಾಜದ ಅಭಿವೃದ್ಧಿಗೆ ಪೂರಕವಾಗಿ ತಮ್ಮ ಅಭಿವೃದ್ಧಿಯ ನಡೆ ಇರಬೇಕೆಂಬ ಆಶಯವಾಗಲೀ ಆದರ್ಶವಾಗಲೀ ಇದ್ದಂತೆ ತೋರುವುದಿಲ್ಲ, ಒಟ್ಟಿನಲ್ಲಿ ಬಂಡವಾಳ ಕ್ರೋಢೀಕರಣ ಮಾಡಿಕೊಳ್ಳುತ್ತಾ ತಮಗೆ ತಾವೇ ತೆಂಗಿನಮರದಂತೆ ಎತ್ತರಕ್ಕೆ ಬೆಳೆಯುವ ಲೋಭವಿರುತ್ತದೆ.

ಹೀಗಾಗಿ ಸಂಸ್ಥೆಗಳಲ್ಲಿ ಕೆಲಸ ಮಾಡುವ ನೌಕರರಿಗೆ ಒಂದು ಸಂಸ್ಥೆಯನ್ನು ಕಟ್ಟಿ ಬೆಳೆಸಿ ಅದನ್ನು ಸಮಾಜಮುಖಿಯನ್ನಾಗಿಸುವ ದೃಷ್ಟಿ ಮೂಡುವುದು ತೀರಾ ಅಪರೂಪ. ಸಂಸ್ಥೆಯಂತೆಯೇ ನೌಕರನು ಸಹ ಅರ್ಥ ಸಂಸ್ಕೃತಿಯ ಬೆನ್ನು ಹತ್ತಿ ಸಮಾಜಕ್ಕೆ ವಿಮುಖನಾಗುತ್ತಾನೆ. ಇದರಿಂದ ಕಂಪನಿ ಮತ್ತು ನೌಕರರ ನಡುವೆ ಒಂದು ಆರೋಗ್ಯವಂತ ಸುಸಂಸ್ಕೃತ ಸಮಾಜ ನಿರ್ಮಾಣ ಮಾಡುವ ಮನಸ್ಸು ಮೂಡುವುದು ಕಷ್ಟವಾಗುತ್ತದೆ. ನಾನು ಆಸ್ಪತ್ರೆಯಿಂದ ಬಿಡುಗಡೆಯಾಗುವ ಮುನ್ನ ಆಸ್ಪತ್ರೆಯವರು ನನ್ನ ಅನಿಸಿಕೆಯನ್ನು ಕೇಳಿದರು. ನಾನು ಬರೆದೆ : "ನಿಮ್ಮಲ್ಲಿ ಬಡವರು, ಮಧ್ಯಮವರ್ಗದವರು ಚಿಕಿತ್ಸೆ ಪಡೆಯಲು ಸಾಧ್ಯವೇ ಇಲ್ಲ. ನಿಮ್ಮ ಸಂಪಾದನೆಯಲ್ಲಿ ಶೇಕಡ ಐದರಷ್ಟು ಹಣವನ್ನಾದರೂ ದೀನದಲಿತರ – ಬಡಬಗ್ಗರ ಚಿಕಿತ್ಸೆಗೆ ಉಪಯೋಗಿಸುವುದಾದರೆ ಅದು ಅತ್ಯಂತ ದೊಡ್ಡ ಮಾನವ ಸೇವೆಯಾಗುತ್ತದೆ."

**ಪ್ರೊ|| ಶಿವರಾಮು ಕಾಡನಕುಪ್ಪೆ**
ನಂ. ೧೨೫೬, 'ನೇಸರ', ಆನೇ ಅಡ್ಡರಸ್ತೆ, ಪಡುವಣ ರಸ್ತೆ
ಕುವೆಂಪುನಗರ, ಮೈಸೂರು – ೫೭೦ ೦೨೩

# ತತ್ಕಾಲದ ದರ್ಶನ ಮಾಡಿಸುವ ಕಥೆಗಳು

ಕಥೆಗಾರಿಕೆಯ ವಿಚಾರದಲ್ಲಿ ಲೋಕವನ್ನು ನೋಡುವ ಕಲೆಯನ್ನು ಕರಗತ ಮಾಡಿಕೊಂಡಿರುವ ಜಿ. ಪಿ.ಯವರು ನಗರದ ಧಾವಂತದ ಬದುಕು ಮತ್ತು ಹಳ್ಳಿಗಳಲ್ಲಿನ ಸಹಜ ಬದುಕಿನಲ್ಲಿರಬಹುದಾದ ಸುಖ ಇವೆರಡರ ಕುರಿತಾಗಿ ಕಥೆಗಳಲ್ಲಿ ಪರ - ವಿರೋಧದ ಮಧ್ಯದ ಗೆರೆಯ ಮೇಲೆ ನಿಂತು ತಮ್ಮ ನಿಲುವನ್ನು ಮಂಡಿಸುತ್ತಾರೆ. ಈ ಸಂಕಲನದ ಮುನ್ನುಡಿಯಲ್ಲಿ ಡಾ॥ ಕಿಕ್ಕೇರಿ ನಾರಾಯಣರು ಗುರುತಿಸಿರುವಂತೆ, ಮುಖ್ಯವಾಗಿ ಜಿ. ಪಿ. ಯವರ ಕಥೆಗಳಲ್ಲಿ ವಿರುದ್ಧ ದಿಕ್ಕಿನ ಪರಿಕಲ್ಪನೆಗಳು, ವಾಸ್ತವ - ಅವಾಸ್ತವಗಳು, ನಿಜಜೀವನ ಮತ್ತು ಕನಸುಗಳು ಮುಖಾಮುಖಿಯಾಗುತ್ತವೆ. ಇನ್ನು, ಕೆಲವು ಕಥೆಗಳಲ್ಲಿ ವಾಸ್ತವ ಮತ್ತು ಕಲ್ಪನೆಗಳು ಒಂದರೊಳಗೊಂದು ಬೆರೆಯುವುದನ್ನೂ ಕಾಣಬಹುದು. ಕೆಲವು ಕಥೆಗಳು ವಾಸ್ತವ ಜಗತ್ತಿಗೆ ಹಿಡಿಯುವ ಕನ್ನಡಿಯಾಗಿ ಅರ್ಥಪೂರ್ಣವಾಗಿ ಬೆಳೆಯುತ್ತ, ಕಥೆಯ ಧ್ವನಿಶಕ್ತಿಯನ್ನು ಹೆಚ್ಚಿಸುತ್ತ ಹೋಗುತ್ತವೆ. ಈ ಕಾರಣಕ್ಕಾಗಿಯೇ ಇಲ್ಲಿನ ಕಥೆಗಳು ಓದುಗನಿಗೆ ಹೆಚ್ಚು ಹೆಚ್ಚು ಆಪ್ತವಾಗುತ್ತಲೇ ಈ ಲೋಕದ ತತ್ಕಾಲದ ದರ್ಶನವೊಂದನ್ನು ಮಾಡಿಸುತ್ತವೆ.




**ಕಲ್ಲೇಶ್ ಕುಂಬಾರ್**

ಪ್ರಸ್ತುತ, 'ಬೆತ್ತಲೆಯ ಬೆಳಕನುಟ್ಟು' ಜಿ. ಪಿ. ಬಸವರಾಜು ಅವರ ಮೂರನೆಯ ಕಥಾ ಸಂಕಲನ. ಈ ಸಂಕಲನದಲ್ಲಿರುವ ಕಥೆಗಳು, ಅವರ ಗಹನವಾದ ಓದು, ಸಮುದಾಯಗಳೊಂದಿಗಿನ ಒಡನಾಟ, ಸಾಮಾಜಿಕ ಅನುಭವ ಮತ್ತು ಲೋಕಾನುಭವ ಗಳಿಂದ ಉಂಟಾದ ಬದುಕಿನ ತಿಳುವಳಿಕೆ – ಇವೆಲ್ಲವುಗಳಿಂದ ಅವರು ಪಡೆದುಕೊಂಡ ತಾತ್ವಿಕತೆಯು ಕಥೆಗಳ ರಚನಾ ಕ್ರಿಯೆಯಲ್ಲಿ ಬದಲಾದ ಅವರ ಆಲೋಚನಾಕ್ರಮಗಳಿಗೆ ಕನ್ನಡಿ ಹಿಡಿಯುತ್ತದೆ.

ಈ ಸಂಕಲನದ ಶೀರ್ಷಿಕೆಯೂ ಆಗಿರುವ, 'ಬೆತ್ತಲೆಯ ಬೆಳಕನುಟ್ಟು' ಕಥೆ, ವ್ಯಕ್ತಿಕೇಂದ್ರಿತವಾದ ಸಮಸ್ಯೆಯೊಂದರ ಮೂಲಕ ಸಾರ್ವತ್ರಿಕವಾದ ಮತ್ತು ಸಂಕೀರ್ಣವಾದ ಸಮಸ್ಯೆಯೊಂದರ ಹಿಂದಿರುವ ಕಾರಣಗಳನ್ನು ಶೋಧಿಸುತ್ತ ಹೋಗುತ್ತದೆ. ಇಲ್ಲಿ, ಮಗಳು ರತ್ನಿಯ ಹರಕೆ ತೀರಿಸಲೆಂದು ಎಲ್ಲಮ್ಮನ ಗುಡ್ಡಕ್ಕೆ ಬರುವ ದ್ಯಾಮವ್ವ, ತನ್ನ ಮಗಳ(ರತ್ನಿ)ನ್ನು ಓಡಿಸಿಕೊಂಡು ಹೋಗುವ ಗೋವಿಂದದಾಸನಿಂದಾಗಿ ತನ್ನದೇ ಬದುಕಿನ ಕುರಿತಾದ ಎಲ್ಲವನ್ನೂ ಸ್ವಯಂ ತಾನೇ ಬೆತ್ತಲುಗೊಳಿಸುವ ಕ್ರಿಯೆಗೆ ಒಳಗಾಗುತ್ತಲೇ 'ಬೆತ್ತಲೆ ಸೇವೆ' – ಎಂಬ ಮೌಢ್ಯವನ್ನು ಈ ವ್ಯವಸ್ಥೆಯ ಮೇಲೆ ಹೇರಿರುವ ಮನಸ್ಸುಗಳನ್ನು ಪುನರ್ ಬೆತ್ತಲೆಗೊಳಿಸುವ ಕ್ರಿಯೆಯಲ್ಲಿ ತೊಡಗುತ್ತಾಳೆ. ದೇವರ ಹೆಸರಿನಲ್ಲಿ ಕೆಳವರ್ಗದ ಸ್ತ್ರೀಯರನ್ನು 'ಬೆತ್ತಲೆ ಸೇವೆ'ಯಂಥ ಶುದ್ಧ ಅನಾಗರಿಕ ಆಚರಣೆಯ ಮೂಲಕ ಲೈಂಗಿಕವಾಗಿ ಶೋಷಿಸುವ ಮೇಲ್ವರ್ಗದ ಜನರ ಕ್ರೌರ್ಯದ ಪರಮಾವಧಿಯನ್ನು ಕಥೆ ಬಿಚ್ಚಿಡುತ್ತದೆ. ಕಥೆಯಲ್ಲಿ, ಅಂಥವರೆಲ್ಲ ಸೆಳೆದ ಸೀರೆ, ಬೆಟ್ಟದಂತೆ ರಾಶಿ ರಾಶಿಯಾಗಿ ಬಿದ್ದಿರುವುದು ಒಂದರ್ಥದಲ್ಲಿ ಅನಾದಿಕಾಲದಿಂದಲೂ ನಡೆದುಕೊಂಡು ಬಂದ ಇಂಥ ಹೇಯ ಅನಾಗರಿಕ ಪದ್ಧತಿಯು ಆಧುನಿಕ ಜಗತ್ತಿನಲ್ಲಿ ಈಗಲೂ ಉಳಿದುಕೊಂಡು ಬಂದಿರುವುದಕ್ಕೆ ಪ್ರತಿಮೆಯಂತಿದೆ.

ಇನ್ನು, 'ಕ್ಯಾನ್ವಾಸ್' ಕಥೆಯಲ್ಲಿ, ತನ್ನ ಸುತ್ತಲಿನ ಲೋಕದ ಸಂಗತಿಗಳ ಮೂಲಕವೇ ಆಧುನಿಕ ಜಗತ್ತಿನ ಸಂಗತಿಗಳಿಗೆ ತೆರೆದುಕೊಳ್ಳುವ ಮನೋಸ್ಥಿತಿಯನ್ನು ಹೊಂದಿದ ಕಥೆಯ ಮುಖ್ಯ ಪಾತ್ರ ತಾಳಿತ್ತಾಯರು. ಕಾಲಾಂತರದಲ್ಲಿ ತನ್ನ ಮಕ್ಕಳು ಅದೇ ಆಧುನಿಕ ಜಗತ್ತಿನಲ್ಲಿ ತಮ್ಮ ಅಸ್ತಿತ್ವ ಉಳಿಸಿಕೊಳ್ಳುವುದಕ್ಕಾಗಿ ಧಾವಂತದ ಬದುಕನ್ನು ಬಾಳುತ್ತಿರುವುದಕ್ಕೆ ಸಂಕಟಪಡುವುದು ಇದೆಯಲ್ಲ, ಅದಕ್ಕೆ, ಹಳ್ಳಿ ಮೂಲ ಸಂಸ್ಕೃತಿಯಿಂದ ಅವರ ಮಕ್ಕಳು ವಿಮುಖರಾಗಿರುವುದೇ ಕಾರಣವಾಗಿದೆ. ಇಡೀ ಕಥೆ ಹಳ್ಳಿ ಬದುಕಿನಲ್ಲಿರ ಬಹುದಾದ ನಿಜವಾದ ಸುಖ ಮತ್ತು ಆಧುನಿಕವಾದ ಭೋಗ ಜಗತ್ತು, ಹಳ್ಳಿಯ ಜೀವನಕ್ರಮ ಹಾಗೂ ಸಂಸ್ಕೃತಿಗೆ ತಂದೊಡ್ಡುತ್ತಿರುವ ಅಪಾಯದ ಕುರಿತಾಗಿ ಯೋಚಿಸುವಂತೆ ಮಾಡುತ್ತದೆ.

ಕೃತಿಯ ಹೆಸರು
**ಬೆತ್ತಲೆಯ ಬೆಳಕನುಟ್ಟು** (ಕಥಾ ಸಂಕಲನ)
*ಲೇಖಕರು* : **ಜಿ. ಪಿ. ಬಸವರಾಜು**
*ಪುಟಗಳು* : ೧೫೨ *ಬೆಲೆ* : ರೂ. ೧೫೦/-
ಪ್ರಕಾಶಕರು
**ಅಹರ್ನಿಶಿ ಪ್ರಕಾಶನ,** ಶಿವಮೊಗ್ಗ

ಜಿ. ಪಿ.ಯವರು ಸ್ವತಃ ಪತ್ರಕರ್ತರಾಗಿರುವುದರಿಂದ ಪತ್ರಿಕೋದ್ಯಮದ ಒಳಸುಳಿಗಳನ್ನೆಲ್ಲ ತೀರ ಹತ್ತಿರದಿಂದ ಕಂಡವರು. ಅಂತೆಯೇ, ಈ ಸ್ಪರ್ಧಾತ್ಮಕ ಯುಗದಲ್ಲಿ ತನ್ನ ಪ್ರತಿಸ್ಪರ್ಧಿಯನ್ನು ಮೀರಿ ಜನರನ್ನು ತ್ವರಿತವಾಗಿಯೂ, ಪರಿಣಾಮಕಾರಿಯಾಗಿಯೂ ತಲುಪಬೇಕೆಂಬ ಧಾವಂತದಲ್ಲಿ ಮಾಧ್ಯಮಗಳು ಅದೇ ಜನರ ಭಾವನೆಗಳೊಂದಿಗೆ ಹೇಗೆಲ್ಲ ಚೆಲ್ಲಾಟವಾಡುತ್ತವೆ ಎಂಬ ಕಟು ಸತ್ಯವನ್ನು 'ಕುದುರೆ' ಕಥೆಯಲ್ಲಿ ಅನಾವರಣ ಮಾಡಿದ್ದಾರೆ. ಈ ದೇಶದ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ, ವ್ಯಕ್ತಿಗತವಾದ ಕ್ಷುಲ್ಲಕ ಸಂಗತಿಯೊಂದನ್ನು ಸಾರ್ವತ್ರಿಕವಾದ ವಿಚಾರವಾಗಿಸುವ ಭರದಲ್ಲಿ ಜನರ ಭಾವನೆಗಳ ಮೇಲೆ ಮಾಧ್ಯಮಗಳು ಸವಾರಿಮಾಡುತ್ತಲೇ ಅವರನ್ನು ಹೇಗೆಲ್ಲ ಇನ್ನಿಲ್ಲದ ಸಂಕಟಕ್ಕೀಡುಮಾಡಿ, ತಮ್ಮ ಸ್ವಾರ್ಥ ಸಾಧಿಸಿಕೊಳ್ಳುತ್ತವೆ ಎಂಬುದನ್ನು ಕಥೆ ವಿವರಿಸುತ್ತದೆ. ಇಲ್ಲಿ ಕುದುರೆಯಂಥ ಸಾಕುಪ್ರಾಣಿಯೊಂದಿಗೆ ಗಾಢವಾದ, ಭಾವನಾತ್ಮಕವಾದ ಸಂಬಂಧವನ್ನು ಬೆಸೆದುಕೊಳ್ಳುವ

ಕಥೆಗಾರ, ನಂತರದಲ್ಲಿ ಎದುರಿಸುವ ಸಮಸ್ಯೆಗಳ ಮೂಲಕ ಪೊಲೀಸ್ ವ್ಯವಸ್ಥೆ ಮತ್ತು ಪ್ರಾಣಿ ದಯಾಸಂಘಗಳ ಕಾರ್ಯ ವೈಖರಿಯ ಮೇಲೂ ಕಥೆ ಬೆಳಕು ಚೆಲ್ಲುತ್ತದೆ. ಕುದುರೆಯ ಮೇಲಿನ ವ್ಯಾಮೋಹದಿಂದಾಗಿ ಕಥೆಗಾರ ಜೈಲುಪಾಲಾಗುವುದು ಒಂದರ್ಥದಲ್ಲಿ ಆಧುನಿಕ ಜಗತ್ತಿನಲ್ಲಿ ನಿಜದ ಪ್ರೀತಿಯನ್ನು ಬಂಧನದಲ್ಲಿರಿಸಿದ ವಿಕ್ಷಿಪ್ತ ಮನಸ್ಸುಗಳ ಹಿಂದಿನ ಕಾರಣಗಳನ್ನು ಅರಿವಿಗೆ ತರುತ್ತದೆ.

ಇನ್ನೊಂದು, 'ಸ್ನಾನ' ಕಥೆ, ಗ್ರಾಮ ಜೀವನದಲ್ಲಿನ ನಂಬಿಕೆಯ ಮಹತ್ವ ಮತ್ತು ಅದೇ ನಂಬಿಕೆಯೇ ಅವರ ಬದುಕಿನ ನಿರ್ವಹಣೆಗೆ ಹೇಗೆಲ್ಲ ಪ್ರೇರಕ ಶಕ್ತಿಯಾಗಬಲ್ಲದು ಎಂಬುದನ್ನು ವಿವರಿಸುತ್ತಲೇ ನಗರ ಜೀವನದ ಧಾವಂತ ಮತ್ತು ಆ ಧಾವಂತದ ಬದುಕನ್ನು ನಿರ್ವಹಿಸುತ್ತಿರುವ ನಾಗರಿಕ ಮನಸ್ಸುಗಳಿಗೆ ಅಡರಿರುವ ಒಣ ಪ್ರತಿಷ್ಠೆ ಎಂಬ ಮೈಲಿಗೆಯಿಂದಲೂ ಮನುಷ್ಯ ಸಂಬಂಧಗಳು ಹೇಗೆ ಶಿಥಿಲಗೊಳ್ಳುತ್ತವೆ ಎಂಬುದನ್ನು ಅನಾವರಣಮಾಡುತ್ತದೆ. ಜೊತೆಗೆ, ಮನುಷ್ಯನ ದೇಹದ ಮೈಲಿಗೆಯನ್ನು ಮೀರಿ ನಿಷ್ಕಲ್ಮಶವಾದ ಮನಸ್ಸು ಅದೆಷ್ಟು ಪವಿತ್ರ ಮತ್ತು ಕ್ರಿಯಾಶೀಲವಾಗಿರುತ್ತದೆ ಎಂಬ ಅರ್ಥವನ್ನೂ ಸಹ ಕಥೆ ಧ್ವನಿಸುತ್ತದೆ.

ಇನ್ನು, 'ಅಂಕಲ್, ನಿಮ್ಮ ಬೈಕ್' ಕಥೆ, ಇಡೀ ವಿಶ್ವವೇ ಒಂದು ಹಳ್ಳಿಯಾಗಿರುವ ಈ ಹೊತ್ತಿನಲ್ಲಿ ಕೃತ್ರಿಮವಾದ ಮನೋಸ್ಥಿತಿಯ ನೆಲೆಯಲ್ಲಿ ಉಂಟಾಗುವ ಸಂಬಂಧಗಳು ಕ್ರಮೇಣವಾಗಿ ಹೇಗೆ ಅಳ್ಳಕಾಗುತ್ತ ಹೋಗುತ್ತವೆ ಎಂಬ ಕಟು ಸತ್ಯವನ್ನು ಅರಿವಿಗೆ ತರುತ್ತದೆ. ವಿದೇಶದಲ್ಲಿ ಸಾಫ್ಟ್‌ವೇರ್ ಇಂಜಿನಿಯರ್ ಆಗಿರುವ ಕಥಾ ನಾಯಕಿ, ಪುಟ್ಟಿ ತನ್ನ ಬಾಲ್ಯದ ಬದುಕನ್ನು ನಿರಂತರವಾಗಿ ಪ್ರೀತಿಸಲು ಕಾರಣವಾಗಿರುವ ಜಲಮೂಲದಂತಿರುವ 'ಅಂಕಲ್' ನೊಂದಿಗೆ ಕಳೆದ ದಿನಗಳು, ತನ್ನೊಳಗೆ ಈಗಲೂ ಹಚ್ಚಹಸಿರಾಗಿರುವುದರ ಹಿಂದಿನ ಕಾರಣಗಳನ್ನು ಹುಡುಕುತ್ತಲೇ ಪ್ರಸ್ತುತ ಸಂದರ್ಭದಲ್ಲಿ ವೃತ್ತಿ ಕಾರಣವಾಗಿ ತಾನು ನಿರ್ವಹಿಸುತ್ತಿರುವ ಯಾಂತ್ರಿಕ ಬದುಕು ಮತ್ತು ಆ ಮೂಲಕ ಏರ್ಪಡುವ ಕೃತ್ರಿಮವಾದ ಸಂಬಂಧಗಳು ತಂದೊಡ್ಡಿರುವ ಘೋರ ಅಪಾಯಗಳ ಕುರಿತಾಗಿ ಕಥೆ ಚಿಂತಿಸುವಂತೆ ಮಾಡುತ್ತದೆ. ಜೊತೆಗೆ, ಬದುಕನ್ನು ಪ್ರೀತಿಸುವಂತೆ ಮಾಡುವ ಮನುಷ್ಯ ಮೂಲದ ಕಳಕಳಿಯ ಮೇಲಿನ ಸಂಬಂಧಗಳ ಅನಿವಾರ್ಯತೆ ಈ ಹೊತ್ತಿನ ತುರ್ತು ಎಂಬ ಅಂಶವನ್ನು ಓದುಗನ ಗಮನಕ್ಕೆ ತರುತ್ತದೆ.

ಜಿ. ಪಿ.ಯವರು ತುಂಬ ಸಂಯಮದಿಂದ ತನ್ಮಯರಾಗಿ ಕಥೆ ಹೇಳುತ್ತಾರೆ. ಅದಕ್ಕೆ, ಈ ಸಂಕಲನದಲ್ಲಿರುವ 'ಪಿಸ್ತೂಲು' ಕಥೆಯೇ ಸಾಕ್ಷಿ. ಪತ್ತೇದಾರಿ ಕಥೆಯಾಗಬಲ್ಲ ವಸ್ತುವೊಂದನ್ನು ತುಂಬ ಜಾಗರೂಕತೆಯಿಂದ ತಮ್ಮ ಹರಿತವಾದ ಆಲೋಚನಾ ಕ್ರಮದಲ್ಲಿ, ವಾಸ್ತವ ಬದುಕಿಗೆ ಹತ್ತಿರವಿರುವಂತೆ ಆ ವಸ್ತುವನ್ನು ಒಳಗೊಳಿಸುತ್ತಲೇ ಕಥೆಯಾಗಿಸಿದ್ದಾರೆ. ಇಲ್ಲಿ, ಸಾತ್ವಿಕ ಮನಸ್ಸಿನ ವ್ಯಕ್ತಿಯೊಬ್ಬ ದುರ್ಬಲ ಘಳಿಗೆಯಲ್ಲಿ ಅತ್ಯಂತ ಸೂಕ್ಷ್ಮವಾದ ಸಂಗತಿಯೊಂದು ಸಂಭವಿಸುವುದಕ್ಕೆ ಕಾರಣವಾಗುವುದರ ಮೂಲಕ ಅನ್ಯರಿಗೆ ಕೇಡನ್ನು ಬಯಸುವುದು ಇದೆಯಲ್ಲ... ಅದು, ಪ್ರೀತಿ ಅಂಕುರಿಸಬೇಕಾದ ಎದೆಯಲ್ಲಿ ಹೀಗೆ ರಾಗ – ದ್ವೇಷಗಳು ಹುಟ್ಟುವುದಕ್ಕೆ ಸಂದರ್ಭ, ಸನ್ನಿವೇಶಗಳೇ ಕಾರಣವಾಗುತ್ತವೆ ಎಂಬ ಸತ್ಯವನ್ನು ಕಥೆ ಬಿಚ್ಚಿಡುತ್ತದೆ. ಜೊತೆಗೆ, ಬಾಹ್ಯ ಒತ್ತಡದಿಂದ ಹುಟ್ಟುವ ಕ್ರೌರ್ಯಕ್ಕಿಂತ, ವ್ಯಕ್ತಿಯ ಅಂತರಂಗದಲ್ಲಿ ತಾನೇ ಹುಟ್ಟುವ ಕ್ರೌರ್ಯ ಬಹಳ ಅಪಾಯಕಾರಿ ಎಂಬ ಅರ್ಥವನ್ನೂ ಸಹ ಧ್ವನಿಸುತ್ತದೆ.

ಇನ್ನೊಂದು, 'ಮತ್ತೆ ಬಂದ ಮಳೆ' ಕಥೆ, ಮನುಷ್ಯ ಸಂಬಂಧಗಳ ಆಳದಲ್ಲಿನ ಅತಿ ಸೂಕ್ಷ್ಮವಾದ ಸಂಗತಿಗಳನ್ನು ನಿಜದ ಬದುಕಿಗೆ ತೀರ ಹತ್ತಿರವಿರುವಂತೆ ನಿರೂಪಿಸುತ್ತದೆ. ಇಲ್ಲಿ ಮತ್ತೆ ಮತ್ತೆ ಬರುವ ಮಳೆ, ಮನುಷ್ಯ ಬದುಕಿನಲ್ಲಿ ಆಗಾಗ ಬಂದೆರಗುವ ಕಷ್ಟಗಳನ್ನು ಸಂಕೇತಿಸಿದರೆ, ಕಥೆಯ ಕೊನೆಯಲ್ಲಿ ಪಾರ್ವತಿಯೂ ತನ್ನ ಮಾವ ಬಾಳಪ್ಪನ ಕೈ ಹಿಡಿದು, ನಾಡಿ ನೋಡಿ ಸಮಾಧಾನಪಡುವುದು ಒಂದರ್ಥದಲ್ಲಿ ಇಂಥ ಈ ಎಲ್ಲ ಕಷ್ಟಗಳನ್ನು ಮೀರಿ ಮತ್ತೆ ಮತ್ತೆ ಬದುಕನ್ನು ಪ್ರೀತಿಸುವ ಮತ್ತು ಆ ಮೂಲಕವೇ ಭವಿಷ್ಯದಲ್ಲಿ ಕಷ್ಟಗಳನ್ನು ಎದುರಿಸಲು ಸಜ್ಜಾಗುವ ಕ್ರಿಯೆಗೆ ಪೂರಕವೆಂಬಂತಿದೆ.

ಸಂಕಲನದ ಮತ್ತೊಂದು ಕಥೆ 'ಅಂತರಾಳ'. ನಾಗರಿಕ ಸಮಾಜದಲ್ಲಿ ರೂಪುಗೊಂಡ ಮನುಷ್ಯನ ವಿಚ್ಛಿದ್ರಕಾರಿ ಮನೋಸ್ಥಿತಿಯನ್ನು ಲಾತೂರ – ಖಿಲಾರಿಯಲ್ಲಿ ಸಂಭವಿಸಿದ ಘೋರ ಭೂಕಂಪದ ದುರಂತದೊಂದಿಗೆ ಸಮೀಕರಿಸಿ ಹೇಳುತ್ತದೆ. ಅಲ್ಲಿ, ಸಂಭವಿಸಿದ ಭೂಕಂಪದಿಂದ ಉಂಟಾದ ಕಷ್ಟನಷ್ಟಗಳನ್ನು ಸೆರೆಹಿಡಿಯಲು ಬರುವ ಫೋಟೋಗ್ರಾಫರ್, ಕನ್ನಡ ಭಾಷೆ ಬಲ್ಲ ಹೆಣ್ಣುಮಗಳೊಬ್ಬಳು ಮಾಡಿದ ಹಬ್ಬದೂಟದ ಆತಿಥ್ಯ ಸ್ವೀಕರಿಸುವ ಸಂದರ್ಭದಲ್ಲಿ ಆಕೆಯ ಕುಡಿದು ಬಂದ ಗಂಡನಿಂದ ಹಲ್ಲೆಗೊಳಗಾಗುವುದು ಮನುಕುಲದಮೇಲೆ ಭೂಕಂಪ ಮೆರೆದ ಅಟ್ಟಹಾಸವನ್ನು ಮೀರಿದ ಕ್ರೌರ್ಯ ಎಂಬಂತೆ ಭಾಸವಾಗುತ್ತದೆ. ಮನುಷ್ಯನ ಅಂತರಂಗದಲ್ಲಿ ಹೆಪ್ಪುಗಟ್ಟಿದ ದ್ವೇಷ, ಅಸೂಯೆ, ಅನುಮಾನ – ಇವೆಲ್ಲವುಗಳ ಕುರಿತಾದ ಚಿತ್ರವನ್ನು ನೀಡುವ 'ಅಂತರಾಳ' ಓದುಗನನ್ನು ಮತ್ತೆ ಮತ್ತೆ ಚಿಂತನೆಗೀಡುಮಾಡುತ್ತದೆ.

'ಚಿಯರ್ಸ್' ಕಥೆ, ಆ ಕ್ಷಣದಲ್ಲುಂಟಾದ ಮನುಷ್ಯನ ಮನೋಪಲ್ಲಟದ ಹಿಂದಿನ ಕಾರಣಗಳನ್ನು ಶೋಧಿಸುತ್ತಲೇ, ಆ ಕಾರಣಗಳೇ ಹೇಗೆಲ್ಲ ಮುಂದಿನ ಕ್ರಿಯೆಗಳನ್ನು ಉತ್ತೇಜಿಸುತ್ತವೆ ಎಂಬುದನ್ನು ವಿವರಿಸುತ್ತದೆ. ಇಲ್ಲಿ ವ್ಯಕ್ತಿಯೊಬ್ಬನ ಮನಸ್ಸು, ಅಪಾಯದ ಅಡ್ಡಗೋಡೆಯನ್ನು ದಾಟಿದ ಮೇಲೆ, ತಾನು ಮೊದಲು ಹೊಂದಿದ್ದ ನಿಲುವನ್ನು ಮೀರಿ ತತ್ಕಾಲದಲ್ಲಿ ಹೊಂದುವ ನಿಲುವಿಗೆ ಬದ್ಧನಾಗುತ್ತ ಬದುಕಿನುದ್ದಕ್ಕೂ ತನ್ನ ಸುತ್ತಲಿನ ಸಂಗತಿಗಳನ್ನು ಬಾಹ್ಯ ಮತ್ತು ಆಂತರ್ಯದಲ್ಲಿ ಎದುರಿಸುತ್ತ ಹೋಗುವ ಪರಿಯನ್ನು ಅನಾವರಣ ಮಾಡುತ್ತದೆ. ಆಡಿನ ಮರಿಯ ಸಾವಿಗೆ ಕಾರಣನಾಗುವ ಕಾರ್ ಡ್ರೈವರ್ ರಂಗ, ಮುಂದೆ ಸಂಭವಿಸಲಿರುವ ಘಟನೆಯನ್ನು ಕಲ್ಪಿಸಿಕೊಂಡು ಮೊದಲು ಹೆದರಿದರೂ ಸಹ ಆ ಘಟನೆಯಿಂದ ಪಾರಾದ ನಂತರದಲ್ಲಿ ಆತ ಹೊಂದುವ ಕ್ರೌರ್ಯವನ್ನೊಳಗೊಂಡ ಧೈರ್ಯದ ಮನೋಸ್ಥಿತಿಯೇ ಮುಂದೆ ಸಂಭವಿಸುವ ಎಲ್ಲ ಘಟನೆಗಳಿಗೆ ಆತ ತೆರೆದುಕೊಳ್ಳಬಹುದಾದ ಸಾಧ್ಯತೆಯ ಒಂದರ್ಥದಲ್ಲಿ, ಒಂದಾನೊಮ್ಮೆ ಸಾಧು ಸ್ವಭಾವದವನೇ ಆಗಿರಬಹುದಾದ, ಆದರೆ ಕಾಲಾಂತರದಲ್ಲಿ ಇಂಥದೇ ಘಟನೆಯಿಂದ ಬದಲಾದ, ಬರೀ ಕ್ರೌರ್ಯವೇ ತುಂಬಿದ ವೀರಪ್ಪನ್‌ನ ಮನೋಸ್ಥಿತಿಗೆ ಪ್ರತಿಮೆಯಂತಿದೆ. ಇಡಿಯಾಗಿ ಕಥೆಯನ್ನು ಓದಿದ ಮೇಲೆ ಗಾಢವಾದ ನಿರ್ವಾತವೊಂದು ಓದುಗನ ಮನಸ್ಸನ್ನು ಆವರಿಸಿಬಿಡುತ್ತದೆ.

ಓದುಗನನ್ನು ಗಹನವಾದ ಚಿಂತನೆಗೀಡುಮಾಡುವ 'ಹುಲಿ ಹಿಡಿದದ್ದು' ಕಥೆ ಜಿ. ಪಿ.ಯವರು ಹೊಂದಿರಬಹುದಾದ ಕಥೆಗಾರಿಕೆಯ ಹಿಂದಿರುವ ಅಗಾಧ ಶಕ್ತಿಗೆ ಸಾಕ್ಷಿ ಎಂಬಂತಿದೆ. ಕೇವಲ ಶೀರ್ಷಿಕೆಗಷ್ಟೆ ಸೀಮಿತವಾಗಿರುವ, ಕಥೆಯಲ್ಲಿ ಎಲ್ಲೂ ಹುಲಿಯ ಸ್ವಭಾವದ ಕುರಿತಾದ ವಿವರಣೆ ಇಲ್ಲ. ಆದರೆ ಅದಕ್ಕೆ ವ್ಯತಿರಿಕ್ತವಾದ ನಾಯಿಯ ಸಾಧು ಸ್ವಭಾವದ ವಿವರಣೆಯ ಮೂಲಕವೇ ವ್ಯಾಘ್ರ ಸ್ವಭಾವದ ಲಕ್ಷಣಗಳನ್ನು ಕಥೆ ಓದುಗನ ಕಣ್ಮುಂದೆ ತೆರೆದಿಡುತ್ತದೆ. ಜೊತೆಗೆ ಈ ವ್ಯವಸ್ಥೆಯಲ್ಲಿ ದುರ್ಬಲರನ್ನು ತಮ್ಮ ಸ್ವಾರ್ಥ ಸಾಧನೆಗಾಗಿ ಬಳಸಿಕೊಳ್ಳುತ್ತಲೇ ಇಡಿಯಾಗಿ ಅವರ ಬದುಕನ್ನು ಬೇಟೆಯಾಡುವ, ಮುಖವಾಡ ಹೊತ್ತ ಪ್ರಬಲರ ವಿಕಾರ ಮನೋಸ್ಥಿತಿಯನ್ನು ಅನಾವರಣ ಮಾಡುತ್ತದೆ. ಈ ಕಾರಣಕ್ಕಾಗಿಯೇ ಏನೋ ಎಂಬಂತೆ ಓದುಗನನ್ನು ಭಿನ್ನ ಭಿನ್ನ ನೆಲೆಯಲ್ಲಿ ಅರ್ಥೈಸಿಕೊಳ್ಳುವಂತೆ ಮಾಡುವ ಈ ಕಥೆಯನ್ನು ಓದೋದುತ್ತಲೇ ದೇವನೂರ ಮಹಾದೇವರ 'ಮೂಡಲ ಸೀಮೇಲಿ ಕೊಲೆ ಗಿಲೆ...' ಕಥೆಯೂ ಕೂಡ ನೆನಪಾಗುತ್ತದೆ.

'ಒಂದು ಹಸು, ಒಂದು ಹುಲಿ', 'ರೊಟ್ಟಿ', 'ಬಿಳಿ ಬೆಕ್ಕು, ಕರಿ ಬೆಕ್ಕು', 'ಬೇಜಾರು', 'ಆಟ' ಮತ್ತು 'ಕಾಣದೂರಿಗೆ ಖಾಲಿ ಕ್ಯಾಮರ' ಎಂಬ ಎರಡು ಮೂರು ಪುಟಗಳಿಗೆ ಸೀಮಿತವಾಗಿರುವ, ಆದರೆ ಗಹನವಾದ ತಾತ್ವಿಕತೆಯನ್ನು ಹೊಂದಿರುವ ಸಣ್ಣ ಕಥೆಗಳೂ ಈ ಸಂಕಲನದಲ್ಲಿವೆ.

ಕಥೆಗಾರಿಕೆಯ ವಿಚಾರದಲ್ಲಿ ಲೋಕವನ್ನು ನೋಡುವ ಕಲೆಯನ್ನು ಕರಗತ ಮಾಡಿಕೊಂಡಿರುವ ಜಿ. ಪಿ.ಯವರು ನಗರದ ಧಾವಂತದ ಬದುಕು ಮತ್ತು ಹಳ್ಳಿಗಳಲ್ಲಿನ ಸಹಜ ಬದುಕಿನಲ್ಲಿರಬಹುದಾದ ಸುಖ ಇವೆರಡರ ಕುರಿತಾಗಿ ಕಥೆಗಳಲ್ಲಿ ಪರ – ವಿರೋಧದ ಮಧ್ಯದ ಗೆರೆಯ ಮೇಲೆ ನಿಂತು ತಮ್ಮ ನಿಲುವನ್ನು ಮಂಡಿಸುತ್ತಾರೆ. ಈ ಸಂಕಲನದ ಮುನ್ನುಡಿಯಲ್ಲಿ ಡಾ॥ ಕಿಕ್ಕೇರಿ ನಾರಾಯಣರು ಗುರುತಿಸಿರುವಂತೆ, ಮುಖ್ಯವಾಗಿ ಜಿ. ಪಿ.ಯವರ ಕಥೆಗಳಲ್ಲಿ ವಿರುದ್ಧ ದಿಕ್ಕಿನ ಪರಿಕಲ್ಪನೆಗಳು, ವಾಸ್ತವ – ಅವಾಸ್ತವಗಳು, ನಿಜಜೀವನ ಮತ್ತು ಕನಸುಗಳು ಮುಖಾಮುಖಿಯಾಗುತ್ತವೆ. ಕೆಲವು ಕಥೆಗಳಲ್ಲಿ ವಾಸ್ತವ ಮತ್ತು ಕಲ್ಪನೆಗಳು ಒಂದರೊಳಗೊಂದು ಬೆರೆಯುವುದನ್ನೂ ಕಾಣಬಹುದು. ಇನ್ನು ಕೆಲವು ವಾಸ್ತವ ಜಗತ್ತಿಗೆ ಹಿಡಿಯುವ ಕನ್ನಡಿಯಾಗಿ ಅರ್ಥಪೂರ್ಣವಾಗಿ ಬೆಳೆಯುತ್ತ, ಕಥೆಯ ಧ್ವನಿಶಕ್ತಿಯನ್ನು ಹೆಚ್ಚಿಸುತ್ತ ಹೋಗುತ್ತವೆ. ಈ ಕಾರಣಕ್ಕಾಗಿಯೇ ಇಲ್ಲಿನ ಕಥೆಗಳು ಓದುಗನಿಗೆ ಹೆಚ್ಚು ಹೆಚ್ಚು ಆಪ್ತವಾಗುತ್ತಲೇ ಈ ಲೋಕದ ತತ್ಕಾಲದ ದರ್ಶನವೊಂದನ್ನು ಮಾಡಿಸುತ್ತವೆ.

**ಕಲ್ಲೇಶ್ ಕುಂಬಾರ್**
ಮಲ್ಲಿಕಾರ್ಜುನ ಹೋಟೆಲ್, ಅಂಚೆ : ಹಾರೂಗೇರಿ – ೫೯೧ ೨೨೦
ರಾಯಭಾಗ ತಾಲೂಕು, ಬೆಳಗಾವಿ ಜಿಲ್ಲೆ

# ಭಾರತದಲ್ಲಿ ಗೋವುಗಳ ಸಂತತಿ ನಶಿಸುತ್ತಿದೆಯೇ...?

೧೯ನೇ ಭಾರತೀಯ ಲೈವ್ ಸ್ಟಾಕ್ ಸಂಸ್ಥೆ ನಡೆಸಿದ ಸಮೀಕ್ಷೆಯ ಪ್ರಕಾರ ೨೦೦೭ನೇ ಇಸ್ವಿಯಲ್ಲಿ ೭.೧೪ ಮಿಲಿಯನ್‌ಗಳಷ್ಟಿದ್ದ ಗೋವುಗಳ ಸಂಖ್ಯೆ ೨೦೧೨ರಲ್ಲಿ ೨೧೪ ಮಿಲಿಯನ್‌ನಷ್ಟು ಏರಿಕೆ ಕಂಡಿದೆ. ಆದರೆ ಇದೇ ಅವಧಿಯಲ್ಲಿ ಎತ್ತು (ಹೋರಿ)ಗಳ ಸಂಖ್ಯೆ ಮಾತ್ರ ಗಣನೀಯವಾಗಿ ಇಳಿದಿದೆ. ೨೦೦೭ರಲ್ಲಿ ೧೮.೪ ಮಿಲಿಯನ್‌ನಷ್ಟಿದ್ದ ಅದರ ಸಂಖ್ಯೆ ೨೦೧೨ರಲ್ಲಿ ೮೪ ಮಿಲಿಯನ್‌ಗೆ ಇಳಿದಿದೆ. ಅಂದರೆ ಇಡೀ ಜಾನುವಾರಗಳಲ್ಲೇ ಎತ್ತುಗಳ ಸಂಖ್ಯೆ ಶೇ. ೩೦ರಷ್ಟು ಮಾತ್ರ ಇದೆ. ಅಂದರೆ ಹತ್ಯೆಯಾಗುತ್ತಿರುವುದು, ಕೆಲವರು ತಲೆಬುಡವಿಲ್ಲದೆ ಪ್ರಚಾರ ಮಾಡುತ್ತಿರುವಂತೆ, ಪವಿತ್ರ ಗೋವುಗಳಲ್ಲ. ಬದಲಾಗಿ ಎತ್ತುಗಳು...! ಆದರೆ ಸಂಘ ಪರಿವಾರದವರು ಮತ್ತು ನಮ್ಮ ದೇಶದ ಆರ್ಥಿಕತೆಯನ್ನು ರೂಪಿಸಲು ಹೊರಟಿರುವವರು ಇದನ್ನು ಅರ್ಥ ಮಾಡಿಕೊಳ್ಳುತ್ತಿಲ್ಲ.

**ಕೆ. ಮಹಾಂತೇಶ**

ಇದೀಗ ಕೇಂದ್ರದಲ್ಲಿ ಭಾರೀ ಬಹುಮತದೊಂದಿಗೆ ಅಧಿಕಾರಕ್ಕೆ ಬಂದ ನರೇಂದ್ರ ಮೋದಿ ಸರ್ಕಾರವು ಗೋಹತ್ಯೆ ಹಾಗೂ ಗೋಮಾಂಸ ಮಾರಾಟವನ್ನು ದೇಶಾದ್ಯಂತ ನಿಷೇಧಿಸುವ ಮಾತು ಆರಂಭಿಸುತ್ತಿದ್ದಂತೆ ಅದೇ ಪಕ್ಷ ಅಧಿಕಾರದಲ್ಲಿರುವ ಮಹಾರಾಷ್ಟ್ರ ಹಾಗೂ ಗೋವಾ ಹಾಗೂ ಹರಿಯಾಣ ಸರ್ಕಾರಗಳು ಗೋಹತ್ಯೆ ಹಾಗೂ ಗೋಮಾಂಸ ಮಾರಾಟ ಮತ್ತು ಸೇವನೆ ಮೇಲೆ ನಿಷೇಧವನ್ನು ಹೇರಿವೆ. ಇದಕ್ಕೆ ಆ ಎರಡೂ ರಾಜ್ಯ ಸರ್ಕಾರಗಳು ಮತ್ತು ಗೋಮಾಂಸ ನಿಷೇಧ ಮಾಡಬೇಕೆಂದು ವಾದಿಸುತ್ತಿರುವ ಆರ್‌ಎಸ್‌ಎಸ್ ಹಾಗೂ ಇತರೆ ಬಲಪಂಥೀಯರು ಹೇಳುತ್ತಿರುವ ಕಾರಣ ಗೋವು ಹಿಂದುಗಳಿಗೆ ಪವಿತ್ರತೆಯ ಸಂಕೇತ, ಅವುಗಳನ್ನು ಹತ್ಯೆ ಮಾಡುವುದೆಂದರೆ ನಮ್ಮ ಹೆತ್ತ ತಾಯಿಯನ್ನೇ ಹತ್ಯೆಗೈದಂತೆ ಮತ್ತು ಹೀಗೆ ಗೋವುಗಳನ್ನು ಆಹಾರಕ್ಕಾಗಿ ಹತ್ಯೆಗೈಯುತ್ತಾ ಹೋದರೆ ಮುಂದೊಂದು ದಿನ ಭಾರತದಲ್ಲಿ ಗೋವುಗಳ ಸಂಖ್ಯೆ ಕಡಿಮೆಯಾಗಿ ಅವುಗಳ ಸಂತತಿಯೇ ನಾಶವಾಗುತ್ತದೆ ಎಂಬುದು.

**ಯಾವುದು ಪವಿತ್ರ ? ಯಾವುದು ಅಪವಿತ್ರ ...?**

ಮೊದಲನೆದಾಗಿ, ಪವಿತ್ರ–ಅಪವಿತ್ರ ಎಂಬುದು ಒಂದು ಧರ್ಮದ ಅಥವಾ ಒಂದು ಕೋಮಿನ ಅಥವಾ ಒಬ್ಬ ವ್ಯಕ್ತಿಯ ವೈಯಕ್ತಿಕವಾದ ವಿಚಾರ. ಅದನ್ನು ಇನ್ನೊಂದು ಕೋಮಿನ ಜನರ ಆಚಾರ–ವಿಚಾರದೊಂದಿಗೆ ತಳಕುಹಾಕುವುದು ಸರಿಯಲ್ಲ. ಯಾಕೆಂದರೆ, ಇಡೀ ಭಾರತ ಬಹು ಸಂಸ್ಕೃತಿ ಹಾಗೂ ವಿಭಿನ್ನ ಆಚಾರ ವಿಚಾರಗಳನ್ನು ತನ್ನ ಒಡಲಲ್ಲಿ ಇಟ್ಟುಕೊಂಡೇ ಐಕ್ಯತೆಯನ್ನು ಹಾಗೂ ಸೌಹಾರ್ದತೆಯನ್ನು ಕಾಪಾಡಿಕೊಂಡಿರುವ ದೇಶ. ಮೇಲ್ನೋಟಕ್ಕೆ ಒಂದೇ ಧಾರ್ಮಿಕ ಗುಂಪಿಗೆ ಸೇರಿದವರಲ್ಲೂ ವಿಭಿನ್ನ ಆಚರಣೆಗಳು ಹಾಗೂ ವಿಭಿನ್ನ ಆಹಾರ ಪದ್ಧತಿಗಳು ನಮ್ಮ ಸಮಾಜದೊಳಗಿವೆ. ವಿಷ್ಣುವಿನ ಆರಾಧಕರಿಗೆ ವರಾಹ ಪವಿತ್ರವಾದರೆ, ಅದೇ ಧಾರ್ಮಿಕತೆಯ ಭಾಗವಾಗಿರುವ ಮತ್ತೊಂದು ಜಾತಿಗೆ ಅದು ಆಹಾರವಾಗುತ್ತದೆ. ಆದರೆ ಅದೇ ವರಾಹ (ಹಂದಿ) ಇನ್ನೊಂದು ಧರ್ಮದ ಜನರ ದೃಷ್ಟಿಯಲ್ಲಿ ಅನಿಷ್ಟ ಪ್ರಾಣಿಯಾಗುತ್ತದೆ. ಇನ್ನು, ಮೂಷಕ (ಇಲಿ)



ಪುರಾಣ ಕಥೆಗಳಲ್ಲಿ ಗಣೇಶನ ವಾಹನವಾಗಿದೆ. ಭಾದ್ರಪದ ಮಾಸದಲ್ಲಿ ಗಣೇಶನ ವಿಗ್ರಹವನ್ನು ಮನೆಗೆ ತರುವ ಆಸ್ತಿಕರು ಅದರ ಜೊತೆಗೇ ಇರುವ ಇಲಿಗೂ ಹಾಗೂ ಹಾವಿಗೂ ಪೂಜೆ ಸಲ್ಲಿಸುತ್ತಾರೆ. ಆದರೆ ಅದೇ ಹಿಂದು ಧರ್ಮದ ಕೆಲ ಗುಂಪಿನ ಜನರಿಗೆ (ಗುಡ್ಡಗಾಡು-ಆದಿವಾಸಿ ಜನರಿಗೆ) ಇಲಿ ಮತ್ತು ಹಾವುಗಳು ಆಹಾರವೂ ಆಗುತ್ತವೆ.

ಮತ್ತೊಂದೆಡೆ, ಕ್ರೈಸ್ತ ಧರ್ಮದ ಸ್ಥಾಪಕನಾದ ಪವಿತ್ರ ಯೇಸುವೇ ತನ್ನ ೧೨ ಮಂದಿ ಶಿಷ್ಯಂದಿರಿಗೆ, "ನನ್ನ ದೇಹವನ್ನು ಮಾಂಸವಾಗಿ ಪರಿಗಣಿಸಿ ಸೇವಿಸಿದರೆ ಮಾತ್ರವೇ ನಿಮಗೆ ಮುಕ್ತಿ ದೊರೆಯುವುದು" ಎಂದು ಉಪದೇಶಿಸಿದ್ದರಿಂದಲೇ ಈಗಲೂ ಕ್ಯಾಥೊಲಿಕರು ತಮ್ಮ ಪವಿತ್ರತೆಯ ಸಂಕೇತವಾದ ಯೇಸುವಿನ ಮಾಂಸವನ್ನು ಬ್ರೆಡ್ಡಿನ ತುಂಡಾಗಿ ಮತ್ತು ಗೋಧಿಯ ಮೂಲಕ ನೀಡುವ ವೈನನ್ನೇ ರಕ್ತದ ಸಂಕೇತವಾಗಿ ಎಲ್ಲಾ ಚರ್ಚುಗಳಲ್ಲಿ ಸೇವಿಸಿ ತಮ್ಮ ದೈವತ್ವವನ್ನು ಪ್ರಾರ್ಥಿಸುತ್ತಾರೆ. ಆದರೆ ಇದನ್ನು ಅದೇ ಕ್ರಿಶ್ಚಿಯನ್ ಧರ್ಮದ ಮತ್ತೊಂದು ಗುಂಪಾದ ಪ್ರೊಟಸ್ಟೆಂಟ್‌ರು, ಮೂರ್ತಿ ಪೂಜೆಯೂ ಸೇರಿದಂತೆ, ಇಂತಹ ಎಲ್ಲಾ ಆಚರಣೆಗಳನ್ನು ವಿರೋಧಿಸುತ್ತಾರೆ. ಹಾಗೆಯೇ ಒಂಟೆಯನ್ನು ತಮ್ಮ ಧರ್ಮದ ಪವಿತ್ರತೆಯ ಸಂಕೇತವೆಂದು ಭಾವಿಸುವ ಮುಸಲ್ಮಾನರು ಬಕ್ರೀದ್ ಹಬ್ಬವನ್ನು ಆಚರಿಸುವಾಗ ಅದನ್ನು ಬಲಿಯಾಗಿ ನೀಡಿ ಆಹಾರವನ್ನಾಗಿ ಸೇವಿಸುತ್ತಾರೆ. ಹಾಗೆಯೇ ಹಿಂದೂ ಧರ್ಮದ ಪವಿತ್ರತೆಯ ಸಂಕೇತವೆಂದು ಭಾವಿಸಲಾದ ಗೋವು ಮತ್ತು ಎತ್ತುಗಳನ್ನು ವೇದಗಳ ಕಾಲದಲ್ಲಿ ಯಾಗ-ಯಜ್ಞಗಳಿಗೆ ಬಳಸಿ ಸ್ವತಃ ಅವುಗಳನ್ನು ಋಷಿ ಮುನಿಗಳಾದಿಯಾಗಿ ಭಕ್ಷಿಸುತ್ತಿದ್ದ ಹತ್ತಾರು ನಿದರ್ಶನಗಳಿವೆ. ಇದು ಯಾರ ಒತ್ತಡವೂ ಇಲ್ಲದೆ ಆಯಾ ಕಾಲಘಟ್ಟದಲ್ಲಿ ಇದ್ದ ಪರಿಸ್ಥಿತಿಗೆ ಅನುಗುಣವಾಗಿ ಬೆಳೆದುಬಂದಿವೆ ಇಂತಹ ಆಹಾರ ಪದ್ಧತಿಗಳು. ಹೀಗಾಗಿ ಈ ಪ್ರಶ್ನೆಯನ್ನು ಕೇವಲ ಭಾವನಾತ್ಮಕವಾಗಿ ನೋಡದೆ ಭಾರತದ ಜನಸಂಸ್ಕೃತಿಯ ಭಾಗವಾಗಿ ನೋಡಬೇಕು.




**ಗೋವುಗಳ ಸಂತತಿ ಅಪಾಯದಲ್ಲಿದೆಯಾ...?**

ಇನ್ನು ಎರಡನೇ ಅತಿ ಮುಖ್ಯ ಅಂಶವಾದ ಗೋವುಗಳ ಸಂತತಿ ನಾಶವಾಗುವ ಪ್ರಶ್ನೆಯ ಬಗ್ಗೆ ಚರ್ಚಿಸುವುದಾದರೆ, ಭಾರತದಲ್ಲಿ ಗೋವುಗಳು ಅಪಾಯದ ಅಂಚಿನಲ್ಲಿಲ್ಲ! ಮಾತ್ರವಲ್ಲ, ಅವುಗಳ ಸಂಖ್ಯೆ ವರ್ಷದಿಂದ ವರ್ಷಕ್ಕೆ ಏರಿಕೆಯಾಗುತ್ತಲೇ ಇದೆ...! ಆಶ್ಚರ್ಯವಾಗುತ್ತಿದೆಯಾ...? ಹೌದು, ಇದು ಸತ್ಯ ಸಂಗತಿ. ಆದರೆ ಕೇವಲ ಗೋವುಗಳ ಬಗ್ಗೆ ಭಾವನಾತ್ಮಕವಾಗಿ ಮಾತನಾಡುವ ಜನರು ಈ ಬಗ್ಗೆ ಸ್ವಲ್ಪ ವಾಸ್ತವಾಂಶಗಳನ್ನು ತಿಳಿದುಕೊಳ್ಳಬೇಕು. ೧೯ನೇ ಭಾರತೀಯ ಲೈವ್ ಸ್ಟಾಕ್ ಸಂಸ್ಥೆ ನಡೆಸಿದ ಸಮೀಕ್ಷೆಯ ಪ್ರಕಾರ ೨೦೦೭ನೇ ಇಸ್ವಿಯಲ್ಲಿ ೭.೧೬ ಮಿಲಿಯನ್‌ಗಳಷ್ಟಿದ್ದ ಗೋವುಗಳ ಸಂಖ್ಯೆ ೨೦೧೨ರಲ್ಲಿ ೨೧೬ ಮಿಲಿಯನ್‌ನಷ್ಟು ಏರಿಕೆ ಕಂಡಿದೆ. ಆದರೆ ಇದೇ ಅವಧಿಯಲ್ಲಿ ಎತ್ತು (ಹೋರಿ)ಗಳ ಸಂಖ್ಯೆ ಮಾತ್ರ ಗಣನೀಯವಾಗಿ ಇಳಿದಿದೆ. ೨೦೦೭ರಲ್ಲಿ ೧೮.೬ ಮಿಲಿಯನ್‌ನಷ್ಟಿದ್ದ ಅದರ ಸಂಖ್ಯೆ ೨೦೧೨ರಲ್ಲಿ ೮೪ ಮಿಲಿಯನ್‌ಗೆ ಇಳಿದಿದೆ. ಅಂದರೆ ಇಡೀ ಜಾನುವಾರಗಳಲ್ಲೇ ಎತ್ತುಗಳ (ಗಂಡು) ಸಂಖ್ಯೆ ಶೇ. ೩೦ರಷ್ಟು ಮಾತ್ರ ಇದೆ. ಅಂದರೆ ಹತ್ಯೆಯಾಗುತ್ತಿರುವುದು, ಕೆಲವರು ತಲೆಬುಡವಿಲ್ಲದೆ ಪ್ರಚಾರ ಮಾಡುತ್ತಿರುವಂತೆ, ಪವಿತ್ರ ಗೋವುಗಳಲ್ಲ. ಬದಲಾಗಿ ಎತ್ತುಗಳು...! ಆದರೆ ಸಂಘ ಪರಿವಾರದವರು ಮತ್ತು ನಮ್ಮ ದೇಶದ ಆರ್ಥಿಕತೆಯನ್ನು ರೂಪಿಸಲು ಹೊರಟಿರುವವರು ಇದನ್ನು ಅರ್ಥ ಮಾಡಿಕೊಳ್ಳುತ್ತಿಲ್ಲ.

**ಆರ್ಥಿಕತೆಯ ಪ್ರಶ್ನೆ ಪ್ರಧಾನವೇ ಹೊರತು ಧಾರ್ಮಿಕ ಪ್ರಶ್ನೆಯಲ್ಲ !**

ಭಾರತದ ವಿವಿಧ ರಾಜ್ಯಗಳಲ್ಲಿ ಇತ್ತೀಚಿನ ವರ್ಷಗಳಲ್ಲಿ ನಡೆದಿರುವ ಸಮೀಕ್ಷೆಯ ಪ್ರಕಾರ ಸದ್ಯ ಇರುವ ಜಾನುವಾರುಗಳಲ್ಲಿ ಗೋವುಗಳ ಪ್ರಮಾಣ ೨/೩ ಭಾಗದಷ್ಟಿದೆ. ನಮ್ಮ ದೇಶದಲ್ಲಿ ಬಹುತೇಕವಾಗಿ ಎಲ್ಲಾ (ಕುರಿ, ಕೋಳಿ, ಹಂದಿ, ಎತ್ತು) ರೀತಿಯ ಮಾಂಸವನ್ನು ಭಕ್ಷಿಸುವವರು ಹೆಚ್ಚಾಗಿ ಗಂಡು ಪ್ರಾಣಿಗಳನ್ನೇ ಬಳಸುವುದು ಇದಕ್ಕೆ ಪ್ರಮುಖ ಕಾರಣ. ಇನ್ನು ಹೆಣ್ಣು ಜಾತಿಗೆ ಸೇರಿದ ಪ್ರಾಣಿಗಳು ಮತ್ತು ಪಕ್ಷಿಗಳು ಹೆಚ್ಚಾಗಿ ಹಾಲು, ಮೊಟ್ಟೆ ಮತ್ತು ಸಂತತಿ ಅಭಿವೃದ್ಧಿಗಾಗಿ ಬಳಸಲ್ಪಡುತ್ತವೆ. ಗಂಡು ಜಾತಿಗೆ ಸೇರಿದ ಎತ್ತು, ಕೋಣ ಮೊದಲಾದವುಗಳನ್ನು ಸಾಮಾನ್ಯವಾಗಿ ಕೃಷಿ ಉಳುಮೆಗೆ ಬಳಸಲಾಗುತ್ತದೆ. ಅದು ಬಿಟ್ಟರೆ ಅವುಗಳನ್ನು ಮೊದಲಿನಿಂದಲೂ ಮಾಂಸಕ್ಕಾಗಿಯೇ ಉಪಯೋಗಿಸಲಾಗುತ್ತಿದೆ. ಇದರ ಪರಿಣಾಮವಾಗಿ ಜಾನುವಾರುಗಳಲ್ಲಿ ಗಂಡು ಸಂತತಿ ವರ್ಷದಿಂದ ವರ್ಷಕ್ಕೆ ಕಡಿಮೆಯಾಗುತ್ತಿದೆ. ಆಶ್ಚರ್ಯದ ಸಂಗತಿ ಎಂದರೆ ಜಾನುವಾರುಗಳಲ್ಲಿ ಲಿಂಗ ಅಸಮಾನತೆ ವರ್ಷದಿಂದ ವರ್ಷಕ್ಕೆ ಏರಿಕೆಯಾಗುತ್ತಲೇ ಇದೆ. ಇತ್ತೀಚಿಗೆ ಭೋಪಾಲ್‌ನಲ್ಲಿರುವ ಸೆಂಟ್ರಲ್ ಇನ್‌ಸ್ಟಿಟ್ಯೂಟ್ ಆಫ್ ಅಗ್ರಿಕಲ್ಚರಲ್ ಎಂಜಿನಿಯರಿಂಗ್ ಎಂಬ ಸಂಸ್ಥೆ ನಡೆಸಿರುವ ಅಧ್ಯಯನದ ಪ್ರಕಾರ ಕೃಷಿಗೆ ಬಳಸುವ ಜಾನುವಾರುಗಳ ಸಂಖ್ಯೆ ೧೯೭೭ರಲ್ಲಿ ಶೇ. ೪೪ ಇದ್ದಿದ್ದು ೨೦೧೨-೧೩ರಲ್ಲಿ ಶೇ. ೪ಕ್ಕೆ ಇಳಿದಿದೆ. ಇದಕ್ಕೆ ಪ್ರಮುಖ ಕಾರಣ ಕೃಷಿಯಲ್ಲಿ ತೀವ್ರ ಪ್ರಮಾಣದಲ್ಲಿ ಹೆಚ್ಚಿರುವ ಟ್ರ್ಯಾಕ್ಟರ್ ಮತ್ತು ಎಲೆಕ್ಟ್ರಾನಿಕ್ ಯಂತ್ರಗಳ ಬಳಕೆ. ಹಾಗೆ ಎಮ್ಮೆ ಕೋಣಗಳಿಗೂ ಇದು ಅನ್ವಯವಾಗುತ್ತದೆ. ಇದೇ ಅವಧಿಯಲ್ಲಿ ೧೭.೮ ಮಿಲಿಯನ್‌ನಷ್ಟಿದ್ದ ಕೋಣಗಳ ಸಂಖ್ಯೆ ೧೬ ಮಿಲಿಯನ್‌ಗೆ ಇಳಿದಿದ್ದರೆ ೭.೯ಮಿಲಿಯನ್‌ನಷ್ಟಿದ್ದ ಎಮ್ಮೆಗಳ ಸಂಖ್ಯೆ ೯೨ ಮಿಲಿಯನ್‌ಗೆ ಏರಿಕೆಯಾಗಿದೆ. ಅಂದರೆ ಅವುಗಳ ನಡುವಿನ ಪ್ರಮಾಣ ೬/೧ ತಲುಪಿದೆ. ಇನ್ನೂ ವಿಶೇಷ ಹಾಗೂ ಆಶ್ಚರ್ಯದ ಸಂಗತಿ ಎಂದರೆ ಎಲ್ಲಿ ಗೋಮಾಂಸವನ್ನು ಹೆಚ್ಚಾಗಿ ಬಳಸುತ್ತಾರೋ ಅಂತಹ ಪ್ರದೇಶಗಳಲ್ಲಿ ಈ ಲಿಂಗ ಅಸಮಾನತೆ ಪ್ರಮಾಣ ಕಡಿಮೆ ಇರುವುದು ಅಂಕಿ-ಅಂಶಗಳಿಂದ ಸ್ಪಷ್ಟವಾಗಿದೆ.

ಇದೀಗ ಕಾನೂನು ಮೂಲಕ ದನದ ಮಾಂಸದ ಮಾರಾಟ ಹಾಗೂ ಸೇವನೆಯನ್ನು ನಿಷೇಧಿಸಿದರೆ, ಇದು ಗ್ರಾಮೀಣ ಪ್ರದೇಶದ ಜನರ ಮೇಲೆ ಧರ್ಮಾತೀತವಾಗಿ ತೀವ್ರ ಪರಿಣಾಮ ಬೀರುತ್ತದೆ. ವಿರೋಧಾಭಾಸದ ಸಂಗತಿ ಎಂದರೆ ಜಾನುವಾರುಗಳನ್ನು ಸಾಕುವವರು ಅವುಗಳ ಮೇಲೆ ತೀವ್ರ ರೀತಿಯ ದೌರ್ಜನ್ಯಗಳನ್ನು ನಡೆಸುತ್ತಿದ್ದಾರೆ. ಹಸು, ಎಮ್ಮೆಗಳನ್ನು ಸಾಕುವವರು ತಮ್ಮ ಬದುಕನ್ನು ಮುನ್ನಡೆಸಲು ಗರ್ಭಾಧಾರಿತ ಹಸು ಹಾಗೂ ಎಮ್ಮೆಗಳನ್ನು ನಗರಗಳಿಗೆ ತಂದು ನಗರವಾಸಿಗಳಿಗೆ ಹಾಲು ನೀಡಿ ಅವರ ಅಗತ್ಯಗಳನ್ನು ಪೂರೈಸುತ್ತಾರೆ. ಹಾಗೆ ಬಂದಂತಹ ಎಮ್ಮೆ ಹಾಗೂ ಆಕಳುಗಳು ಒಂದು ವೇಳೆ ಗಂಡು ಕರುಗಳಿಗೆ ಜನ್ಮ ನೀಡಿದರೆ ಅವುಗಳನ್ನು ಸಾಕುವ ಹೊಣೆಗಾರಿಕೆ ಅವುಗಳ ಮಾಲಿಕರಿಗೆ ಬರುತ್ತದೆ. ಹಾಗಾಗಿ ಅಂತಹ ಹೊಣೆಗಾರಿಕೆಯಿಂದ ತಪ್ಪಿಸಿಕೊಳ್ಳಲು ಆ ಕರುಗಳನ್ನು ನಿರ್ದಾಕ್ಷಿಣ್ಯವಾಗಿ ಸಾಯಿಸುವಂತಹ ಪ್ರಕ್ರಿಯೆ ನಿರಂತರವಾಗಿ ನಡೆಯುತ್ತಲೇ ಇದೆ.



ಹಾಗೆಂದ ಮಾತ್ರಕ್ಕೆ ಅವುಗಳ ಮಾಲಿಕರೇನೂ ಅವುಗಳನ್ನು ಬಂದೂಕಿನ ಗುಂಡಿನಿಂದ ಅಮಾನವೀಯವಾಗಿ ಹೊಡೆದು ಸಾಯಿಸುವುದಿಲ್ಲ. ಬದಲಾಗಿ ಲಾಭದಾಯಕವಲ್ಲದ ಆ ಗಂಡು ಮರಿಗಳನ್ನು ಮನೆಯ ಹೊರಗಿನ ಬಿಸಿಲಿಗೆ ಕಟ್ಟಿ ಅವುಗಳಿಗೆ ಎಷ್ಟು ಪ್ರಮಾಣದಲ್ಲಿ ನೀರು ಹಾಗೂ ಮೇವು ಬೇಕೋ ಅಷ್ಟನ್ನು ನೀಡದೆ ಅವುಗಳು ಹಸಿವಿನಿಂದ ನಿಂತಲ್ಲೇ – ಕುಂತಲ್ಲೇ ಸಾಯುವಂತಹ (ಒಂದರ್ಥದಲ್ಲಿ ಕೊಲೆ) ಪರಿಸ್ಥಿತಿಗೆ ದೂಡಲಾಗುತ್ತದೆ. ಇಲ್ಲವೇ ಮಾಂಸದ ವ್ಯಾಪಾರಿಗಳಿಗೆ ಕೈಗೆ ಸಿಕ್ಕ ದುಡ್ಡಿಗೆ ಮಾರಿ ತಮ್ಮ ಜವಾಬ್ದಾರಿಯಿಂದ ಮುಕ್ತರಾಗುತ್ತಾರೆ. ಇದು ತೀರ ಸಂಪ್ರದಾಯವಾದಿಗಳು ವಾಸಿಸುವ ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿಯೂ ಸರ್ವೇಸಾಮಾನ್ಯ ಸಂಗತಿಯಾಗಿದೆ. ಅಂದರೆ ಎತ್ತುಗಳ ಸಂಖ್ಯೆ ಕ್ಷೀಣಿಸುತ್ತಿರುವುದರ ಹಿಂದಿರುವುದು ಪ್ರಧಾನವಾಗಿ ಆರ್ಥಿಕತೆಯ ಪ್ರಶ್ನೆಯೇ ಹೊರತು ಧಾರ್ಮಿಕ ಅಥವಾ ಭಾವನಾತ್ಮಕ ಪ್ರಶ್ನೆಯಲ್ಲ !

**ಕೃಷಿಯ ಬಿಕ್ಕಟ್ಟು ಕೂಡ ಪ್ರಮುಖ ಕಾರಣ**

ಭಾರತದಲ್ಲಿ ನಡೆದಿರುವ ಸಮೀಕ್ಷೆಯಂತೆ ಇವತ್ತು ದೇಶದಲ್ಲಿ ೨೯೯ ಮಿಲಿಯನ್ ಜಾನುವಾರುಗಳಿವೆ. ಇವುಗಳನ್ನು ಸಾಕಲು ಒಂದು ಅಂದಾಜಿನ ಪ್ರಕಾರ ೩೦ ಮಿಲಿಯನ್ ಹೆಕ್ಟೇರ್‌ನಷ್ಟು ಹುಲ್ಲುಗಾವಲಿನ ಅವಶ್ಯಕತೆ ಇದೆ. ಮತ್ತು ಅಷ್ಟೇ ದೊಡ್ಡ ಪ್ರಮಾಣದ ಭೂಮಿ ಜಾನುವಾರುಗಳ ಇತರೆ ಆಹಾರದ ಅಗತ್ಯಗಳನ್ನು ಪೂರೈಸಲು ಅಗತ್ಯವಿದೆ. ಭಾರತದಲ್ಲಿ ಸದ್ಯ ಬೆಳೆ ಬೆಳೆಯುತ್ತಿರುವುದು ೧೯೦ ಮಿಲಿಯನ್ ಹೆಕ್ಟೇರ್ ಪ್ರದೇಶದಲ್ಲಿ ಮಾತ್ರ. ಇದರಲ್ಲಿ ಜಾನುವಾರು ಸಾಕಾಣಿಕೆಗೆ ಅಷ್ಟು ದೊಡ್ಡ ಪ್ರಮಾಣದ ಕೃಷಿ ಭೂಮಿ ಮೀಸಲಿಡಬೇಕೆಂದರೆ ಅದು ಅಸಾಧ್ಯವೇ ಸರಿ. ಇಂತಹ ಸನ್ನಿವೇಶದಲ್ಲಿ ಇದೀಗ ಹಲವು ರಾಜ್ಯ ಸರಕಾರಗಳು ಗೋಹತ್ಯೆ ನಿಷೇಧ ಕಾನೂನನ್ನು ರೂಪಿಸಿ ಜಾರಿಗೆ ತಂದರೆ ಜಾನುವಾರುಗಳ ಉಳಿಕೆಯ ಪ್ರಮಾಣದಲ್ಲಿ ಮತ್ತಷ್ಟು ಏರಿಕೆಯಾಗುತ್ತದೆ. ಆಗ ಮತ್ತೆ ಸಾವಿರಾರು ಹೆಕ್ಟೇರ್ ಭೂಮಿ ಈ ಜಾನುವಾರುಗಳ ಅಗತ್ಯವನ್ನು ಪೂರೈಸಲು ಬೇಕಾಗುತ್ತದೆ. ಆದರೆ ಸಣ್ಣ ರೈತಾಪಿ ಜನರ ಕೈಯಲ್ಲಿದ್ದ ಭೂಮಿಯನ್ನು ಹತ್ತಾರು ಯೋಜನೆಗಳ ಹೆಸರಲ್ಲಿ ಸರಕಾರವೇ ವಶಕ್ಕೆ ತೆಗೆದುಕೊಂಡು ದೇಶೀಯ ಮತ್ತು ವಿದೇಶೀ ಬಂಡವಳಿಗರ ಕೈಗೆ ಒಪ್ಪಿಸುತ್ತಿದೆ. ಅಂಕಿ ಸಂಖ್ಯೆಗಳು ಹೇಳುವಂತೆ ಈಗಿರುವ ಜಾನುವಾರುಗಳಲ್ಲಿ ಮುದಿಯ ಹಾಗೂ ಉತ್ಪಾದನೆಯಲ್ಲಿ ತೊಡಗಲು ಅಸಾಧ್ಯವಾದವುಗಳ ಸಂಖ್ಯೆಯೇ ೮೦ ಮಿಲಿಯನ್‌ನಷ್ಟಿದೆ. ಕೃಷಿಯಲ್ಲಿನ ಬಿಕ್ಕಟ್ಟು ಮತ್ತು ಪಶು ಆಹಾರ ಬೆಲೆಏರಿಕೆಯ ನಿರಂತರ ಏರಿಕೆಯಿಂದಾಗಿ ಅವುಗಳನ್ನು ಸಾಕುವುದೇ ಅವುಗಳ ಮಾಲಿಕರಿಗೆ ಸವಾಲಿನ ಕೆಲಸವಾಗಿದೆ. ಇಂತಹ ಸನ್ನಿವೇಶದಲ್ಲಿ ಆರ್ಥಿಕ ಹೊರೆಯಾಗಿ ಪರಿಣಮಿಸುವ ಆ ಜಾನುವಾರುಗಳಿಂದ ಅವರಿಗೆ ಆಗುವ ಲಾಭವಾದರೂ ಏನು ? ಆಗ ಅವುಗಳನ್ನು ಸಾಕುತ್ತಿರುವವರಿಗೆ ಉಳಿದಿರುವ ದಾರಿ ಎಂದರೆ ತಮ್ಮ ಕಣ್ಣೆದುರು ಅವುಗಳ ಸಾವನ್ನು ನೋಡಲು ಬಯಸದೆ ಸಿಕ್ಕ ಬೆಲೆಗೆ ಮಾಂಸದ ವ್ಯಾಪಾರಿಗಳಿಗೆ ಮಾರುವುದು ಮಾತ್ರ. ಇದರಿಂದ ಸಾಕಿದವನಿಗೂ ಅಲ್ಪ ಸ್ವಲ್ಪ ಆರ್ಥಿಕ ಲಾಭವಾದರೆ, ಮತ್ತೊಂದೆಡೆ ಅದನ್ನು ಆಹಾರವಾಗಿ ಬಳಸುವ ಲಕ್ಷಾಂತರ ಜನರಿಗೂ ಅದು ಅವರ ಅಗತ್ಯತೆಯನ್ನು ಪೂರೈಸುತ್ತದೆ.



**ಗೋಮಾಂಸ ಸೇವನೆ ಹಿಂದೂ ಧರ್ಮ ವಿರೋಧಿಯಲ್ಲ**

ಯಾವ ಹಿಂದೂ ಶಾಸ್ತ್ರಗಳೂ ಯಾವುದೇ ಮಾಂಸದ ಸೇವನೆ, ಅದರಲ್ಲೂ ಗೋಮಾಂಸದ ಭಕ್ಷಣೆಯನ್ನು ವಿರೋಧಿಸಿಲ್ಲ. ನಿಜ ಸಂಗತಿ ಎಂದರೆ ವೇದಕಾಲದ ಪ್ರಧಾನ ದೇವರು ಸ್ವತಃ ಇಂದ್ರನೇ ಒಳ್ಳೆಯ ಗೋಮಾಂಸವನ್ನು ಇಷ್ಟಪಡುತ್ತಿದ್ದ. ವೇದಗಳು, ಮಹಾಭಾರತ, ರಾಮಾಯಣಗಳಂತಹ ಇತರೆ ಪ್ರಾಚೀನ ಹಿಂದು ಪವಿತ್ರ ಗ್ರಂಥಗಳೆಲ್ಲದರಲ್ಲೂ ಗೋಮಾಂಸ ಸೇವನೆಯ ಸಮರ್ಥನೆ ಇದೆ. ಆ ಕಾಲದಲ್ಲೆಲ್ಲಾ ಬ್ರಾಹ್ಮಣರಿಗೆ ಗೋಮಾಂಸವನ್ನು ವಿಶೇಷ ಖಾದ್ಯವಾಗಿಯೇ ಮೀಸಲಿಟ್ಟು ಬಡಿಸಲಾಗುತ್ತಿತ್ತು.

ಭಾರತದಲ್ಲಿ ದನದ ಮಾಂಸವನ್ನು ಮುಸ್ಲಿಮರು ಹೆಚ್ಚಾಗಿ ಬಳಸುತ್ತಿರುವ ಕಾರಣದಿಂದಾಗಿಯೇ ಅದನ್ನು ಪದೇ ಪದೇ ಭಾವನಾತ್ಮಕ ಪ್ರಶ್ನೆಯನ್ನಾಗಿ ಎತ್ತಲಾಗುತ್ತಿದೆ ಮತ್ತು ಆ ವಿಷಯ ರಾಜಕೀಯಕರಣಗೊಳ್ಳುತ್ತಿದೆ ಇದಕ್ಕೆ ಇತಿಹಾಸವೇ ಸಾಕ್ಷಿ. ಗೋಹತ್ಯೆ ನಿಷೇಧದ ಬೇಡಿಕೆಯನ್ನು ಮುಂದುಮಾಡಿ ಮೊದಲ ಚಳುವಳಿ ಭಾರತದಲ್ಲಿ ಆರಂಭಗೊಂಡಿದ್ದು ೧೮೭೦ರಲ್ಲಿ. ಅದು ಸಿಖ್ಖ ಕುಕಾ (ನಾಮಧಾರಿ) ಎಂಬುವವರಿಂದ. ೧೮೮೨ರಲ್ಲಿ ದಯಾನಂದ ಸರಸ್ವತಿ ಅವರು ಆರಂಭಿಸಿದ ಗೋರಕ್ಷಿಣೆ ಸಭಾ, ಗೋಮಾಂಸ ಸೇವನೆ ವಿರುದ್ಧ ನಡೆಸಿದ ತೀವ್ರ ಪ್ರಚೋದನಕಾರಿ ಚಳುವಳಿಯೂ ೧೮೮೦–೧೮೯೦ ಅವಧಿಯಲ್ಲಿ ಹಲವು ಸರಣಿ ಕೋಮುಗಲಭೆಗಳನ್ನು ಹುಟ್ಟುಹಾಕಿತ್ತು. ಅದೇ ಮುಂದುವರಿದು ೧೮೯೩ರಲ್ಲಿ ಆಜಾಮ್‌ಘರ್‌ನಲ್ಲಿ, ೧೯೧೨ರಲ್ಲಿ ಅಯೋಧ್ಯೆಯಲ್ಲಿ, ೧೯೭೧ರಲ್ಲಿ ಶಾಹಬಾದ್‌ನಲ್ಲಿ ನಡೆದ ಕೋಮುಗಲಭೆಗಳಲ್ಲಿ ಹಲವು ಜನರು ಪ್ರಾಣ ಕಳೆದುಕೊಂಡರು. ಅಂದರೆ ಗೋಮಾಂಸ ಸೇವನೆಯು ಕೇವಲ ಒಂದು ಆಹಾರದ ಪ್ರಶ್ನೆಯಾಗಿ ಮಾತ್ರ ಉಳಿದಿಲ್ಲ. ಅದು ಮುಸ್ಲಿಮರ ವಿರುದ್ಧ ಹಿಂದುಗಳನ್ನು ಎತ್ತಿಕಟ್ಟುವ ಪ್ರತಿಷ್ಠೆಯ ಪ್ರಶ್ನೆಯನ್ನಾಗಿ ಪರಿವರ್ತಿಸಲಾಗಿದೆ.

ಕೊನೆಯದಾಗಿ, ನಮ್ಮ ದೇಶದ ಬಹುಪಾಲು ಹಿಂದುಗಳು ಗೋಮಾಂಸವನ್ನು ಸೇವಿಸದೆ ಇರಬಹುದು. ಆದರೆ ಜಾನುವಾರುಗಳನ್ನು ಸಾಕುವವರಿಗೆ ಮಾತ್ರ ಭಾವನಾತ್ಮಕ ಪ್ರಶ್ನೆಗಳಿಗಿಂತ ಅವರಿಗೆ ನಿತ್ಯ ಕಾಡುವ ಆರ್ಥಿಕ ಸಂಕಟಗಳೇ ಪ್ರಧಾನವಾಗಿರುತ್ತವೆ. ಆದರೆ ಇದನ್ನೇ ರಾಜಕೀಯ ದಾಳವಾಗಿ ಬಳಸುತ್ತಿರುವವರಿಗೆ ಇದೊಂದು ನಿತ್ಯ ಹೊತ್ತಿ ಉರಿಯುತ್ತಿರಲೇಬೇಕಾದ ಜ್ವಲಂತ ಪ್ರಶ್ನೆಯಾಗಿ ಇರಲು ಬಯಸುತ್ತಾರೆ. ಭಾರತದ ಪ್ರಜ್ಞಾವಂತ ಜನರು ಈ ದಿಸೆಯಲ್ಲಿ ಜಾಗೃತಗೊಂಡು ಸಂಘಪರಿವಾರ ಶಕ್ತಿಗಳು ಹರಿಯಬಿಡುತ್ತಿರುವ ಭಾವನಾತ್ಮಕ ಪ್ರಶ್ನೆಗಳನ್ನು ಸೋಲಿಸುವ ಪ್ರಯತ್ನಕ್ಕೆ ಮುಂದಾಗಬೇಕು. ಆ ಮೂಲಕ ನಮ್ಮ ದೇಶದ ರೈತಾಪಿ ಜನರು ಮತ್ತಷ್ಟು ಸಂಕಷ್ಟಕ್ಕೆ ಸಿಲುಕದಂತೆ ನೋಡಿಕೊಳ್ಳಬೇಕು ಮತ್ತು ಜನರ ಆಹಾರದ ಹಕ್ಕನ್ನು ಎತ್ತಿಹಿಡಿಯಬೇಕು.

*(ಆಧಾರ : ಬಿಸಿನೆಸ್ ಸ್ಟಾಂಡರ್ಡ್‌ನಲ್ಲಿ ಮುರಾದ್ ಅಲಿ ಬೇಗ್ ಬರೆದ ಲೇಖನ)*

**ಕೆ. ಮಹಾಂತೇಶ**
ನಂ. ೬, ಎರಡನೇ ಮಹಡಿ
೫ನೇ ಕ್ರಾಸ್, ಶಾರದಾಂಬ ನಗರ
ಜಾಲಹಳ್ಳಿ, ಬೆಂಗಳೂರು – ೫೬೦ ೦೧೩

## ಅಭಿನಂದನೆ

ಭಾರತದ ಹೆಸರಾಂತ ಚಲನಚಿತ್ರ ನಿರ್ದೇಶಕ, ರಂಗಕರ್ಮಿ, ಭಾರತೀಯ ಜನಕಲಾ ಸಮಿತಿಯ (ಇಪ್ಟಾ) ರಾಷ್ಟ್ರೀಯ ನಾಯಕರಾದ ಕನ್ನಡಿಗ ಎಂ. ಎಸ್. ಸತ್ಯು ಅವರು ಕೇಂದ್ರದ ಸಂಗೀತ ನಾಟಕ ಅಕಾಡೆಮಿಯ ಫೆಲೋ (ಅಕಾಡೆಮಿ ರತ್ನ), ಆಗಿ ಆಯ್ಕೆ ಆಗಿದ್ದಾರೆ. ಅವರಿಗೆ 'ಹೊಸತು' ಬಳಗದಿಂದ ಅಭಿನಂದನೆಗಳು.



## ಮೋದಿ ಚೀಣಾ ಪ್ರವಾಸ – ಭರವಸೆಗಳ ಸುರಿಮಳೆ

ಪ್ರಧಾನಿ ನರೇಂದ್ರ ಮೋದಿ ಅಧಿಕಾರ ವಹಿಸಿಕೊಂಡ ಒಂದೇ ವರ್ಷದಲ್ಲಿ ಹತ್ತು ಹಲವು ದೇಶಗಳಿಗೆ ಭೇಟಿ ನೀಡಿ ದಾಖಲೆ ನಿರ್ಮಿಸಿದ್ದಾರೆ. ಇದರಲ್ಲಿ ವಿದೇಶಾಂಗ ಸಚಿವರ ಪಾತ್ರ ನಗಣ್ಯ. ಪ್ರವಾಸದ ಕಾಲದಲ್ಲಿ ತಮ್ಮ ಹಾವಭಾವಗಳಿಂದ, ಮಾತುಗಳಿಂದ ಮೆಚ್ಚುಗೆ ಗಳಿಸಿದ್ದರೂ, ಬೇಕಾದಷ್ಟು ಪ್ರಚಾರ ಪಡೆದರೂ ಫಲಿತಾಂಶ ಮಾತ್ರ ಹೇಳಿಕೊಳ್ಳುವಂಥದ್ದೇನಿಲ್ಲ. ಭರವಸೆಗಳ ಮಹಾಪೂರ ಹರಿದಿದ್ದರೂ ಅವು ಕಾಗದಕ್ಕಷ್ಟೇ ಸೀಮಿತ. ಅಂಥವುಗಳಲ್ಲಿ ಒಂದು ಪ್ರವಾಸ ಪ್ರಧಾನಿ ಮೋದಿ ಮೇ ತಿಂಗಳಲ್ಲಿ ಚೀಣಾಗೆ ನೀಡಿದ ವರ್ಷದ ಕೊನೆಯ ಭೇಟಿ. ವಿಪರೀತ ಪ್ರಚಾರ ಪಡೆದಿದ್ದ ಈ ಪ್ರಯಾಣ ಭಾರತ–ಚೀಣಾ ದ್ವಿಪಕ್ಷೀಯ ಸಂಬಂಧಗಳಲ್ಲಿ ಗಮನಾರ್ಹವಾದ ಬೆಳವಣಿಗೆಯನ್ನೇನೂ ತರಲಿಲ್ಲ. ತಮ್ಮ 'ಸೆಲ್ಫೀ' ಚಿತ್ರಗಳಿಂದ ಯುವಜನರನ್ನು ಆಕರ್ಷಿಸಿದರೇ ಹೊರತು ಬೇರೇನಿಲ್ಲ.

ಷಾಂಘಾಯ್‌ನಲ್ಲಿ ಜರುಗಿದ ಭಾರತ ಚೀಣಾ ಉದ್ದಿಮೆದಾರರ ಸಮಾವೇಶದ ಸಂದರ್ಭದಲ್ಲಿ ೨೨ ಬಿಲಿಯನ್ ಡಾಲರುಗಳ ಭಾರಿ ಮೊತ್ತದ ೨೧ ಒಪ್ಪಂದಗಳಿಗೆ ಸಹಿ ಹಾಕಲಾಯಿತು. ಇವೆಲ್ಲ ಕಾರ್ಯಗತವಾದರೆ ಮೋದಿಯವರ ಕನಸಿನ 'ಭಾರತದಲ್ಲೇ ತಯಾರಿಸಿ' ಯೋಜನೆ ನನಸಾಗಲು ತಕ್ಕಮಟ್ಟಿಗೆ ಸಹಾಯಕವಾದೀತು. ಇವೆಲ್ಲ 'ಎಮ್‌ಓಯು'ಗಳು, ಎಂದರೆ ಪರಸ್ಪರ ತಿಳಿವಳಿಕೆಯ ಪತ್ರಗಳು. ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ಮಾನ್ಯವಾಗಿರುವ ದ್ವಿಪಕ್ಷೀಯ ಒಡಂಬಡಿಕೆಗಳು. ಎಲ್ಲವೂ ಕಾರ್ಯಗತವಾಗುತ್ತವೆ, ಕಾರ್ಯಗತವಾಗಬೇಕು ಎಂದೇನಲ್ಲ.

ಚೀಣೀ ಅಧ್ಯಕ್ಷ ಕ್ಸಿಜಿನ್‌ಪಿಂಗ್ ಮತ್ತು ಪ್ರಧಾನಿ ಲೀ ಕೆಕ್‌ವಿಯಾಂಗ್ ಇವರೊಂದಿಗೆ ಪ್ರಧಾನಿ ಮೋದಿ ನಡೆಸಿದ ಮಾತುಕತೆಗಳಲ್ಲಿ ಪ್ರಮುಖವಾದ ವಿಷಯಗಳನ್ನು ಬದಿಗಿರಿಸಿ ಉಳಿದೆಲ್ಲ ವಿಷಯಗಳನ್ನು ಪರಿಶೀಲಿಸಲಾಯಿತು. ಗಡಿವಿವಾದ ದ್ವಿಪಕ್ಷೀಯ ಸಂಬಂಧಗಳಿಗೆ, ಅಂದರೆ ವಾಣಿಜ್ಯ, ಸಾಂಸ್ಕೃತಿಕ ವಿನಿಮಯ ಮುಂತಾದ ಕ್ಷೇತ್ರಗಳ ಬೆಳವಣಿಗೆಗೆ ಅಡ್ಡಿಯಾಗಕೂಡದು ಎನ್ನುವುದು ಚೀಣಾದ ನಿಲುವು ಹಿಂದಿನಿಂದ. ಭಾರತ–ಚೀಣಾ ಗಡಿವಿವಾದ ಸಂಬಂಧಗಳನ್ನು ಉತ್ತಮಗೊಳಿಸುವುದಕ್ಕೆ ಬಾಧಕವಾಗದು ಎನ್ನುವುದನ್ನು ಈ ಭೇಟಿ ದೃಢಪಡಿಸಿತು. ಗಡಿಪ್ರದೇಶದಲ್ಲಿ ಕಿರಿಕಿರಿ ಉಂಟುಮಾಡುವ ಘರ್ಷಣೆಗೆ ಅವಕಾಶ ನೀಡದಂತೆ ವಿಶ್ವಾಸಾರ್ಹವಾದ ಕ್ರಮಗಳನ್ನು ಕೈಗೊಳ್ಳಲು ಎರಡೂ ದೇಶಗಳು ನಿರ್ಧಾರವನ್ನು ಪುನರುಚ್ಚರಿಸಿವೆ. ಇದಕ್ಕಾಗಿ ಭಾರತ–ಚೀಣಾ ಸೇನಾ ಕೇಂದ್ರಗಳ ಮಧ್ಯೆ ನೇರ ಸಂಪರ್ಕ ಏರ್ಪಡಿಸಲು ತೀರ್ಮಾನಿಸಲಾಗಿದೆ. ಹಾಗೆಯೇ ಗಡಿಪ್ರದೇಶದಲ್ಲಿ ಹೊಸ ಪರಿವೀಕ್ಷಣಾ ನಿಲಯಗಳನ್ನು ಸ್ಥಾಪಿಸಲು ಒಪ್ಪಲಾಗಿದೆ. ಇವೆಲ್ಲ ಹಳೆಯ ಸವಕಲು ಪ್ರಸ್ತಾಪಗಳೆ. ಮಾತುಕತೆಗಳ ಸಮಯದಲ್ಲಿ ಪರಸ್ಪರರ ವಶದಲ್ಲಿರುವ ಭೂಪ್ರದೇಶ ಕುರಿತು ಸ್ಪಷ್ಟೀಕರಣದ ಅವಶ್ಯಕತೆಯನ್ನು ಭಾರತದ ಪ್ರಧಾನಿ ಪ್ರಸ್ತಾಪಿಸಿದ್ದನ್ನು ಚೀಣೀ ನಾಯಕರು ಕಡೆಗಣಿಸಿದರು. ಅಂದರೆ ಅರ್ಥಾತ್ ಗಡಿಪ್ರದೇಶದಲ್ಲಿ ಯಥಾಸ್ಥಿತಿ ಮುಂದುವರಿಯುವುದು ಖಚಿತವಾಗಿದೆ. ಮಾತುಕತೆಗಳಲ್ಲಿ ಈ ವಿಚಾರದಲ್ಲಿ ಯಾವುದೇ ಪ್ರಗತಿಯಾಗಿಲ್ಲ. ಚೀಣೀಯರಿಗೆ ಬೇಕಾಗಿರುವುದೂ ಅಷ್ಟೆ.

ಭಾರತ–ಚೀಣಾ ಗಡಿವಿವಾದ ಇಂದು ನಿನ್ನೆಯದಲ್ಲ. ಅದು ಒಂದು ಭೇಟಿಯ ಕಾಲದಲ್ಲಿ ಅಥವಾ ಶೀಘ್ರವಾಗಿ ಇತ್ಯರ್ಥಗೊಳ್ಳದು ಎಂಬುದು ನಿಜ. ಅರ್ಧ ಶತಮಾನಕ್ಕೂ ಹೆಚ್ಚು ಕಾಲದಿಂದ ಇರುವ ಸಮಸ್ಯೆ. ೧೯೬೨ರಲ್ಲಿ ಚೀಣೀ ದುರಾಕ್ರಮಣದ ನಂತರ ದ್ವಿಪಕ್ಷೀಯ ಸಂಬಂಧಗಳು ಮರುಸ್ಥಾಪನೆಯಾದ್ದು ೧೯೮೮ರಲ್ಲಿ. ಆಗಾಗ್ಗೆ ಗಡಿಪ್ರದೇಶದಲ್ಲಿ ತಳಮಳ ಉಂಟಾದರೂ, ಕಿರಿಕಿರಿ ಉಂಟು ಮಾಡುವ ಘಟನೆಗಳು ಸಂಭವಿಸಿದರೂ, ದ್ವಿಪಕ್ಷೀಯ ಸಂಬಂಧಗಳಿಗೆ ಅಡ್ಡಿಯಾಗಿಲ್ಲ. ಈಗ ಎರಡೂ ದೇಶಗಳು ಏಶಿಯಾದಲ್ಲಿ ಪ್ರವರ್ಧಮಾನಕ್ಕೆ ಬಂದಿರುವ ಶಕ್ತರಾಷ್ಟ್ರಗಳಾಗಿವೆ. ಚೀಣೀ ವಾರ್ತಾ ಸಂಸ್ಥೆ ಸಿನ್ಹುವಾ ಪ್ರಕಾರ ಏಶಿಯ ಮತ್ತು ಜಗತ್ತಿನಲ್ಲಿ ಎರಡೂ ದೇಶಗಳೂ ಪ್ರಭಾವಿ ಶಕ್ತಿಯಾಗಿ ಬೆಳೆಯುತ್ತಿವೆ. ವಿವಾದಗಳನ್ನು ನಿಯಂತ್ರಣದಲ್ಲಿರಿಸಿ, ಪರಸ್ಪರ ಸಹಕಾರದಿಂದ ಅಭಿವೃದ್ಧಿ ಸಾಧಿಸಿದಲ್ಲಿ ಭಾರತ ಮತ್ತು ಚೀಣಾಗಳು ಪ್ರಪಂಚದಲ್ಲಿ ಏಷಿಯಾ ಯುಗ ಸ್ಥಾಪಿಸಿಯಾವು.

## ಮಣಿಪುರ ದುರ್ಘಟನೆಗೆ ಮಿತಿಮೀರಿದ ಪ್ರತಿಕ್ರಿಯೆ

ಅತಿರೇಕದ ಪ್ರತಿಕ್ರಿಯೆಗೆ ಇಂಗ್ಲಿಷಿನಲ್ಲಿ ಜಿಂಗೋಯಿಸಮ್ ಎನ್ನುವ ಪದ ಬಳಸುತ್ತಾರೆ. ಇಂಥ ಜಿಂಗೋಯಿಸಮ್ ಅಥವಾ ಅತಿರೇಕದ ರಾಷ್ಟ್ರಪ್ರೇಮ ಅಪಾಯಕಾರಿ. ಇದು ಒಂದು ಕಾಲ್ಕೆರೆದು ಯುದ್ಧೋನ್ಮಾದ ತೋರುವ ಪ್ರತಿಕ್ರಿಯೆ ನೆರೆರಾಷ್ಟ್ರಗಳಿಗೆ ಸಂಬಂಧಿಸಿದಂತೆ. ಹಿಟ್ಲರ್ ಇಂಥ ಜಿಂಗೋಯಿಸಮ್‌ಗೆ ಪ್ರಸಿದ್ಧಿಯಾಗಿದ್ದ.

ಭಾರತದ ನೆರೆರಾಷ್ಟ್ರ ಮ್ಯೆನ್ಮಾರ್ ಗಡಿಪ್ರದೇಶದಲ್ಲಿ ನಡೆದ ಕಾರ್ಯಾಚರಣೆ ಕುರಿತು ನಡೆದಿರುವ ಅಬ್ಬರದ ಪ್ರಚಾರ ಅಂಥ ಅತಿರೇಕದ ಪ್ರತಿಕ್ರಿಯೆ. ನಮ್ಮ ಇಲೆಕ್ಟ್ರಾನಿಕ್ ಮಾಧ್ಯಮದ ಅರಚಾಟ ಅಸಹ್ಯಕರ. ಭಾರಿ ಕದನವೇ ನಡೆದುಹೋಯಿತೇನೋ ಎನ್ನುವ ಚಿತ್ರಣ. ಪ್ರಧಾನಿ ನರೇಂದ್ರ ಮೋದಿ ಈ ಕಾರ್ಯಾಚರಣೆ ಮೂಲಕ ಪಾಕಿಸ್ತಾನಕ್ಕೆ ಎಚ್ಚರಿಕೆ ನೀಡಿದ್ದಾರೆ, ದೃಢನಿರ್ಧಾರ ಪ್ರದರ್ಶಿಸಿದ್ದಾರೆ ಎಂದೆಲ್ಲ ಉತ್ಪ್ರೇಕ್ಷೆ . ಇದಕ್ಕೆ ಪಾಕಿಸ್ತಾನಿ ಆಡಳಿತದಿಂದ ನಿರೀಕ್ಷಿಸಿದ್ದಂತೆ ಉಗ್ರವಾದ ಪ್ರತಿಕ್ರಿಯೆಯೂ ಬಂದಿದೆ. ಸೂಕ್ಷ್ಮವಾದ ಗಡಿಪ್ರದೇಶಗಳಿರುವಾಗ ಇಂಥ ಮೇರೆ ಮೀರಿದ ಅಬ್ಬರ ಅನಾಹುತಕ್ಕೆಡೆಮಾಡಿಕೊಟ್ಟೀತು. ಇದನ್ನು ಭಾಜಪ ವಕ್ತಾರರುಗಳು ಅರಿತರೆ ಒಳ್ಳೆಯದು.

ಮಣಿಪುರದಲ್ಲಿ ಜೂನ್ ೪ರಂದು ಉಗ್ರಗಾಮಿಗಳು ನಡೆಸಿದ ದಾಳಿಯಲ್ಲಿ ೨೦ ಮಂದಿ ಭಾರತೀಯ ಯೋಧರು ಹತರಾದರು. ಈಶಾನ್ಯ ಗಡಿಯಲ್ಲಿ ಮಣಿಪುರ, ಅಸ್ಸಾಮ್, ನಾಗಾಲ್ಯಾಂಡ್ ಮೊದಲಾದವುಗಳಲ್ಲಿ ಇಂಥ ದುಷ್ಕೃತ್ಯಗಳು ಆಗಾಗ ಸಂಭವಿಸುತ್ತಲೇ ಇವೆ ಆರು ದಶಕಗಳಿಂದ. ಈ ಪ್ರದೇಶಗಳೆಲ್ಲ ಹೆಚ್ಚು ಕಡಿಮೆ ಸೇನೆಯ ಮೇಲ್ವಿಚಾರಣೆಯಲ್ಲೇ ಇವೆ. ಇಂಥ ದುರ್ಘಟನೆಗಳು ನಡೆದಾಗ ಅಂಥ ಉಗ್ರರ ಬೆನ್ನಟ್ಟಿ ನಡೆಸುವ ದಬ್ಬಾಳಿಕೆಗೆ ಮಿತಿಯೇ ಇರುವುದಿಲ್ಲ. ಈ ಪ್ರದೇಶದ ಜನರಿಗೆ ಅದು ಒಗ್ಗಿಹೋಗಿದೆಯೇನೋ. ಎಗ್ಗಿಲ್ಲದ ಕಾರ್ಯಾಚರಣೆಗಳಿಗೆ ಸೇನೆಗೆ ರಕ್ಷಾಕವಚ ವಿಶೇಷ ಕಾಯಿದೆ. ಇದರ ವಿರುದ್ಧ ಈಶಾನ್ಯ ಪ್ರದೇಶದ ರಾಜ್ಯಗಳಲ್ಲಿ, ಕಾಶ್ಮೀರದಲ್ಲಿ ಪ್ರತಿಭಟನೆ ನಡೆದೇ ಇದೆ, ವಿಶೇಷ ಕಾಯಿದೆಯನ್ನು ರದ್ದುಗೊಳಿಸಬೇಕೆಂಬ ಒತ್ತಾಯವೂ ಇದೆ. ಅದೇನೇ ಇರಲಿ. ಮಣಿಪುರದಲ್ಲಿ ನಡೆದ ಘಟನೆಯ ನಂತರ ಭಾರತೀಯ ಭದ್ರತಾಪಡೆ ಮ್ಯೆನ್ಮಾರ್ ಗಡಿಪ್ರದೇಶದಲ್ಲಿ ನೆಲೆಗೊಂಡಿರುವ ಉಗ್ರರ ಶಿಬಿರಗಳ ಮೇಲೆ ದಾಳಿ ನಡೆಸಿ ಅರವತ್ತು ಉಗ್ರರನ್ನು ಹತ್ಯೆಗೈದರು. ಉಗ್ರರ ಬೆನ್ನಟ್ಟಿ ಭಾರತದ ಸೈನಿಕರು ಗಡಿ ದಾಟಿ ಮ್ಯೆನ್ಮಾರ್ ಪ್ರದೇಶದಲ್ಲಿ ಕಾರ್ಯಾಚರಣೆ ನಡೆಸಿದರೇ ಎನ್ನುವುದಕ್ಕೆ ಸ್ಪಷ್ಟೀಕರಣವಿಲ್ಲ. ವಾರ್ತಾ ಸಚಿವಾಲಯದ ಕಿರಿಯ ಸಚಿವ ರಾಜ್ಯವರ್ಧನ ಸಿಂಗ್ ರಾಥೋರ್ ಪ್ರಕಾರ ಭಾರತೀಯ ಸೇನೆ ಮ್ಯೆನ್ಮಾರ್ ಪ್ರದೇಶದೊಳಗೆ ನುಗ್ಗಿ ಉಗ್ರರ ಮೇಲೆ ದಾಳಿ ನಡೆಸಿತು. ಮೋದಿ ಧೈರ್ಯವಾಗಿ ಮುನ್ನಡಿ ಇರಿಸಿದ್ದಾರೆ ಎಂಬುದು ಅವರ ಅಂಬೋಣ. ಆದರೆ ಸೈನ್ಯಾಧಿಕಾರಿಗಳು ಮಾತ್ರ ಈ ವಿಚಾರದಲ್ಲಿ ಮೌನ. ಅಲ್ಲಿಂದ ಮುಂದೆ ನಡೆದದ್ದೇ ಅಬ್ಬರದ ಪ್ರಚಾರ. ಪ್ರಧಾನಿ ಮೋದಿ ಮಾತ್ರ ಯಾವತ್ತಿನಂತೆ ಚಕಾರವೆತ್ತಿಲ್ಲ.

**ಸೀಯಾರ್ಕೆ**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

ಸಾಥಿ ಎಸ್. ಆರ್.

ನಾನು ಓದಿದ ಪುಸ್ತಕ

# ಹಕ್ಕಿ ಮತ್ತು ಗೂಡು

## ಪಕ್ಷಿಗಳ ಬದುಕು


ಲೇಖಕ : **ಕೃಷ್ಣ ಎಂ. ವಿ. ಮಳವಳ್ಳಿ**
ಅನುವಾದ : **ಎಲ್. ಸಿ. ನಾಗರಾಜ್**
ಪುಟಗಳು : ೮೪
ಬೆಲೆ : ರೂ.೨೬೫

ಪ್ರಕಾಶಕರು : **ಚಲನ ಪ್ರಕಾಶನ**
ನಂ. ೨೦, ವರ್ಗೀಸ್ ಪಿ. ಎಂ.
೩ನೇ 'ಬಿ' ಮೇನ್, ಕೆ.ಎಂ. ಕಾಲೋನಿ
ಜಯನಗರ ೧ನೇ ಬ್ಲಾಕ್, ಬೆಂಗಳೂರು – ೧೧


**ಯಾ**ವುದೇ ಪಕ್ಷಿಪ್ರಿಯರು, ಛಾಯಾಗ್ರಾಹಕರು ಪಕ್ಷಿಗಳನ್ನು ಚಿತ್ರಿಸಲು ಮಾಡಬೇಕಾದ ಮೊದಲ ಸಿದ್ಧತೆ ಹಕ್ಕಿಯ ಗೂಡನ್ನು ಹುಡುಕುವುದು. ಈ ಸೂಕ್ಷ್ಮಪ್ರಜ್ಞೆ ಇಲ್ಲದಿದ್ದರೆ ಪಕ್ಷಿಗಳು ನಮ್ಮನ್ನು ಅಲೆದಾಡಿಸಿ, ಓಡಾಡಿಸಿ ಹಣ್ಣುಗಾಯಿ ಮಾಡಿಬಿಡುತ್ತವೆ. ನಮ್ಮ ಪಕ್ಕದಲ್ಲೇ ಏನೋ ಹುಳುವಿಗಾಗಿ ಹೊಂಚಿಹಾಕಿ ನಿಂತಂತಿರುವ ಹಕ್ಕಿ, ಕ್ಯಾಮಾರಾ ತೆಗೆದು, ಲೆನ್ಸ್ ಇಣುಕಿಸಿದರೆ, 'ನನ್ನನ್ನೇ ಥಂ ಎನ್ನಿಸಲೇ ಬಂದಿರುವರು' ಎಂದು ಓಡಿಹೋಗುತ್ತವೆ. ಗಂಡುಹಕ್ಕಿ ನಾವು ನಿಂತಿರುವ ಎಡಕ್ಕೆ ಹಾರಿದರೆ, ಹೆಣ್ಣು ಬಲಕ್ಕೆ. ನಾವು ಒಂದು ಹಕ್ಕಿಯ ಹಿಂದೆ ಹೊರಟರೆ, ಇನ್ನೊಂದು ಹಕ್ಕಿ ಆರಾಮಾಗಿ ತನ್ನ ಕೆಲಸ ಮುಂದುವರಿಸುತ್ತಿರುತ್ತದೆ. ಏನಾದರೂ ಅಪಾಯವಿದ್ದರೆ ಒಂದಕ್ಕೊಂದು ಸಂವಹಿಸಿಕೊಳ್ಳುತ್ತವೆ. ಇದು ಹಕ್ಕಿಗಳು ತಮ್ಮ ವಾಸಸ್ಥಳವನ್ನು ಗೌಪ್ಯವಾಗಿಟ್ಟುಕೊಳ್ಳುವ ಉಪಾಯಗಳಲ್ಲೊಂದು. ಛಾಯಾಚಿತ್ರಗಾರನೊಬ್ಬ ಗೂಡಿನ ಸ್ಥಳಗಳನ್ನು ಹುಡುಕಿಕೊಂಡ ಅವುಗಳಿಗೆ ತೊಂದರೆಯಾಗದಂತೆ ಮರೆಮಾಡಿಕೊಂಡು ಕುಂತರೆ, ಹಕ್ಕಿಗಳು ಗೂಡಿನತ್ತ ಬಂದೇಬರುತ್ತವೆ. ಚಿತ್ರಗಳೂ ಸಿಕ್ಕೇ ಸಿಗುತ್ತವೆ. ಇಂತಹ ಸೂಕ್ಷ್ಮಪ್ರಜ್ಞೆಯನ್ನು ಪ್ರಚೋದಿಸುವ ಪುಸ್ತಕ 'ಹಕ್ಕಿ ಮತ್ತು ಗೂಡು'. ಪಕ್ಷಿಗಳ ಜೀವನಕ್ರಮ, ಗೂಡು ಕಟ್ಟುವ ಕಲೆಗಾರಿಕೆ, ಮೊಟ್ಟೆಗಳ ವಿವಿಧತೆ, ಮರಿಗಳಿಗೆ ಬಾಯ್ತುತ್ತು ನೀಡುವ ಪರಿ, ಪಕ್ಷಿತಜ್ಞ ಸಲೀಂಅಲಿ ಅವರ ವಿವರಣೆಯ ಅನೇಕ ಮಾಹಿತಿ 'ಹಕ್ಕಿ ಮತ್ತು ಗೂಡು'ನಲ್ಲಿ ಚಿತ್ರಗಳ ಸಮೇತ ಸೆರೆಯಾಗಿರುವುದು ಈ ಪುಸ್ತಕದ ವಿಶೇಷ. ಗೂಡಿನ ವಿವರಗಳನ್ನು ಚಿತ್ರಸಮೇತ ನೀಡಿರುವುದು ನಿಜಕ್ಕೂ ಅಭಿನಂದನೀಯ.

'ಹಕ್ಕಿ ಮತ್ತು ಗೂಡು' ಕೇವಲ ಅಂದವಾದ ಚಿತ್ರಗಳ ಸಂಗ್ರಹವಷ್ಟೇ ಅಲ್ಲದೇ, ಉತ್ತಮ ಉಲ್ಲೇಖ (ರೆಫೆರೆನ್ಸ್) ಪುಸ್ತಕವೂ ಆಗಿದೆ. ಪುಸ್ತಕದಲ್ಲಿ ಒಟ್ಟು ಸುಮಾರು ೫೦ಕ್ಕೂ ವಿವಿಧ ಪಕ್ಷಿಗಳ ಚಿತ್ರಗಳಿದ್ದರೂ ಮೊದಲು ಗಮನ ಸೆಳೆಯುವುದು ಮುನ್ನುಡಿ; 'ಪಾಪದ ಹೂಗಳು'ಗೆ ಲಂಕೇಶರ ಮುನ್ನುಡಿ














ಬೋದಿಲೇರನ ಪದ್ಯಗಳಿಗಿಂತ ದೀರ್ಘವಾಗಿತ್ತು. ಆದರೆ ಓದುಗನೊಬ್ಬ ಇಡೀ ಪದ್ಯಗಳನ್ನು ಗ್ರಹಿಸುವ ಕ್ರಮವನ್ನು ಬದಲಾಯಿಸುವ ಶಕ್ತ ಮುನ್ನುಡಿ ಕನ್ನಡ ಸಾಹಿತ್ಯದಲ್ಲೇ ವಿರಳ. ಅದು ಲಂಕೇಶರ ಸಿದ್ಧಿ. ಅಂತೆಯೇ 'ಹಕ್ಕಿ ಮತ್ತು ಗೂಡು'ನ ಕೃಷ್ಣ ಅವರ ಮುನ್ನುಡಿ ದೀರ್ಘವೆನಿಸಿದರೂ ಪಕ್ಷಿ – ರೈತ – ಆಧುನಿಕ ತಂತ್ರಜ್ಞಾನಗಳ ತಿಕ್ಕಲುತನ – ಪರಿಸರ ಕಾಳಜಿ – ಇಂದಿನ ತುರ್ತು – ಛಾಯಾಗ್ರಹಣದ ಅಪಾಯಗಳನ್ನೆಲ್ಲಾ ಅಕ್ಷರವಾಗಿಸಿರುವುದರಿಂದ ಓದುಗನಲ್ಲಿ ಹೊಸ ಹೊಳಹುಗಳ ಹುಟ್ಟಿಗೆ ಕಾರಣವಾಗುತ್ತದೆ.

ಪುಸ್ತಕದಲ್ಲಿನ ಹಕ್ಕಿಯೊಂದರ ವಿವರ ಹೀಗಿದೆ: ಗೀಜಗ, ಮೊದಲು ಅರ್ಧ ಗೂಡು ಕಟ್ಟಿ, ಗೂಡು ಪೂರ್ಣಗೊಳ್ಳುವ ಮುನ್ನ ಸುಮಧುರವಾದ ಧ್ವನಿಯಿಂದ ಹೆಣ್ಣುಹಕ್ಕಿಯನ್ನು ಕರೆಯುತ್ತದೆ. ಗೂಡಿಗೆ ಬಂದ ಹೆಣ್ಣುಹಕ್ಕಿಗೆ ಆ ಅರ್ಧಕಟ್ಟಿರುವ ಗೂಡು ಇಷ್ಟವಾದರೆ ಅಲ್ಲೇ ಉಳಿಯುತ್ತದೆ. ನಂತರ ಗೂಡಿನ ಕೊಳವೆಯಂತಹ ಭಾಗವನ್ನು ಗಂಡುಹಕ್ಕಿ ಪೂರ್ಣಗೊಳಿಸುತ್ತದೆ. ಹೆಣ್ಣುಹಕ್ಕಿಗೆ ಇಷ್ಟವಾಗದಿದ್ದರೆ ಆ ಗೂಡು – ಮತ್ತದರ ಯಜಮಾನನನ್ನು ಒಪ್ಪಿಕೊಳ್ಳುವುದಿಲ್ಲ. ಹೆಣ್ಣುಹಕ್ಕಿಯಿಂದ ತಿರಸ್ಕೃತಗೊಂಡ ಗೂಡನ್ನು ಗಂಡೂ ಕೂಡ ತ್ಯಜಿಸಿ, ಮತ್ತೊಂದು ಗೂಡನ್ನು ನೆಯ್ಯಲು ಸಿದ್ಧವಾಗುತ್ತದೆ. ಮತ್ತೆ ಹೆಣ್ಣುಗಳಿಗಾಗಿ ಕರೆಯಿಡುತ್ತದೆ. ಒಂದು ಹೆಣ್ಣು ಒಪ್ಪಿಗೆ ನೀಡಿದ ನಂತರ, ಅಂತಹುದೇ ಹತ್ತಾರು ಗೂಡುಗಳನ್ನು ಕಟ್ಟಿ, ಬಹುಪತ್ನಿತ್ವವನ್ನು ಆಚರಿಸುತ್ತದೆ. ಜೈವಿಕವಾದ ಈ ಸಂತಾನಕಾಲ ಮುಗಿದ ನಂತರ, ಗಂಡು – ಹೆಣ್ಣುಗಳು ಬೇರ್ಪಟ್ಟು, ಮುಂದೆ ಮತ್ತೆ ಒಟ್ಟಿಗೆ ಕಾಣಸಿಗುವುದು ಇನ್ನೊಂದು ಸಂತಾನೋತ್ಪತ್ತಿ ಋತುವಿನಲ್ಲೇ. ತನ್ನನ್ನು ತಾನು ನಿಯಂತ್ರಿಸಿಕೊಳ್ಳುವ ಸಾಮರ್ಥ್ಯವನ್ನು ಕಳೆದುಕೊಂಡಿರುವ ಮಾನವರ ಮಧ್ಯೆ ಪಕ್ಷಿ – ಪ್ರಾಣಿಗಳ ಇಂತಹ ಆರೋಗ್ಯಕರ ಮಾದರಿಗಳು ಎಲ್ಲ ಸಿದ್ಧಾಂತವನ್ನು ಮೀರಿದ್ದು ಎನ್ನಿಸಿಬಿಡಬಹುದು. ಇಂತಹ ಮಾದರಿಗಳ ಮುಂದೆ ಮನುಷ್ಯನ ಜ್ಞಾನ – ವಿದ್ಯೆ ಕುಬ್ಜವಾದ ಅರ್ಥಕ್ಕಿಳಿದುಬಿಡುತ್ತದೆ.

ತೇಜಸ್ವಿಯವರೂ ಗೀಜಗನ ಹಕ್ಕಿಯನ್ನು ಚಿತ್ರಿಸಿದ್ದಾರೆ; ಆದರೆ ಇಲ್ಲಿರುವ ಮಾಹಿತಿಯನ್ನು ನೀಡಿಲ್ಲ. ಇದು ಹೋಲಿಕೆ ಎಂದರೆ ತಪ್ಪಾಗುತ್ತದೆ. ತೇಜಸ್ವಿ, ಎಂ.ವೈ ಘೋರ್ಪಡೆ, ಶಿವಶಂಕರ್‌ರಂತಹ ಕೆಲ ಹೆಸರುಗಳನ್ನು ಬಿಟ್ಟರೆ, ಕನ್ನಡದಲ್ಲಿ ರೆಕ್ಕೆಜೀವಿಗಳ ಬಗೆಗೆ ಪ್ರಕಟವಾಗಿರುವ ಹೊತ್ತಿಗೆಗಳು ತೀರಾ ವಿರಳ. ತೇಜಸ್ವಿಯವರ 'ಹಕ್ಕಿ ಮತ್ತು ಪುಕ್ಕ' ಕೇವಲ ಪಕ್ಷಿಗಳಿಗೆ ಮಾತ್ರ ಸೀಮಿತವಾಗಿರದೆ, ಅವರ ಒಟ್ಟು ಛಾಯಾಚಿತ್ರಗಳನ್ನು ತೆರೆದಿಡುವ ಪುಸ್ತಕ. ಚಿತ್ರಗಳಿಗಿಂತ ತೇಜಸ್ವಿ ಅವರ ಬರವಣಿಗೆಯಿಂದಲೇ ಅವರೆಲ್ಲಾ ಪುಸ್ತಕಗಳು ನಮಗೆ ಆತ್ಮೀಯವೆನಿಸುವುದು. ಮೇಲೆ ಹೇಳಿದಂತೆ ಇಲ್ಲಿರುವ ಅಷ್ಟೂ ಪಕ್ಷಿಗಳ ಬಗ್ಗೆ ಒಂದೊಂದು ವಿಶೇಷವಾದ ಕಥೆ ಇದೆ. ಇದು ಓದುವ ಪುಸ್ತಕವಾಗಿರದೆ, ಬಹುತೇಕ ಚಿತ್ರಗಳಿಂದ ಕೂಡಿರುವುದರಿಂದ ನೋಡುವ ಪುಸ್ತಕವಾಗಿದೆ.

ಚಳುವಳಿಗಳ ಹಿನ್ನೆಲೆಯಲ್ಲಿ ಕೃಷ್ಣ ಎಂ. ವಿ. ಮಳವಳ್ಳಿಯವರನ್ನು ನೋಡಿರುವ ಅನೇಕರಿಗೆ 'ಹಕ್ಕಿ ಮತ್ತು ಗೂಡು' ಅವರ ಇನ್ನೊಂದು ಮುಖವನ್ನು ಪರಿಚಯಿಸುತ್ತದೆ. ಆರೇಳು ವರ್ಷಗಳ ಅವರ ಶ್ರಮ ಪುಸ್ತಕದಲ್ಲಿ ಢಾಳಾಗಿ ಕಾಣುತ್ತದೆ. ಪ್ರತೀ ಅಕ್ಷರವನ್ನೂ ಧ್ಯಾನದಂತೆ ಇಂಗ್ಲಿಷ್‌ಗೆ ತರ್ಜುಮೆಗೊಳಿಸಿರುವ ಕವಿ – ಪ್ರಗತಿಪರ ರೈತ ಎಲ್. ಸಿ. ನಾಗರಾಜ್ ಅವರ ಬರವಣಿಗೆಯನ್ನು ಓದುವುದೇ ಚೆಂದ. ಮೂಲತಃ ಕವಿಯಾದ ನಾಗರಾಜ್ ಪ್ರತೀ ಪದದಲ್ಲೂ ಕಾವ್ಯಾತ್ಮಕ ಶೈಲಿಯೊಂದಿಗೆ, ಒಂದಕ್ಷರವೂ ಅಸ್ಖಲಿತವಲ್ಲದಂತೆ ತುರ್ಜುಮೆ ಮಾಡಿದ್ದಾರೆ. ಇದು ಕನ್ನಡಿಗರಿಗೆ ಮತ್ತು ಪಕ್ಷಿಪ್ರಿಯರಿಗೆ ಅತ್ಯುತ್ತಮ ಪುಸ್ತಕ ಎನ್ನುವುದರಲ್ಲಿ ಅತಿಶಯೋಕ್ತಿ ಇಲ್ಲ.

ಇತ್ತೀಚೆಗೆ ಭಾರತೀಯ ವಿಜ್ಞಾನ ಸಂಸ್ಥೆಗೆ ಉಪನ್ಯಾಸಕ್ಕೆ ಬಂದಿದ್ದ ಪಕ್ಷಿತಜ್ಞ ಡಾ॥ ವಿಜಯನ್ ಒಂದು ಪಕ್ಷಿಯ ಕಥೆ ಹೇಳಿದರು. ಜಂಗಲ್ ಬಾಬ್ಲರ್ ಕಥೆ. ಅತ್ಯುತ್ತಮ ಮಳೆಯಾಗಿ, ಉತ್ತಮ ಬೆಳೆಗಳಿದ್ದ ಕಾಲದಲ್ಲಿ ಈ ಹಕ್ಕಿ ನಾಲ್ಕು ಮೊಟ್ಟೆಗಳನ್ನಿಡುತ್ತದೆ. ವಾಡಿಕೆಯ ಅರ್ಧದಷ್ಟು ಮಳೆಯಾದಾಗ ಎರಡು ಮೊಟ್ಟೆಗಳನ್ನು, ತೀರಾ ಕಡಿಮೆ ಬೆಳೆಯ ಸಂದರ್ಭದಲ್ಲಿ ಒಂದು ಮೊಟ್ಟೆಯಿಡುತ್ತದೆ. ಮಳೆಯಿಲ್ಲದ ವರ್ಷದಲ್ಲಿ, ಬೆಳೆಯೂ ಇಲ್ಲದಾಗ, ಈ ಹಕ್ಕಿ ಯಾವುದೇ ಮೊಟ್ಟೆಗಳನ್ನು ಇಡುವುದಿಲ್ಲ. ಇದು ಎರಡು – ಮೂರು ವರುಷ ಮುಂದುವರಿದರೆ, ಅಂತಹ ಪಕ್ಷಿಪ್ರಭೇದವೊಂದು ಅಳಿಸಿಹೋಗಿರುತ್ತದೆ. ಅದರೊಟ್ಟಿಗೆ ಅಳಿಸಿಹೋಗುವ ಸರತಿಯಲ್ಲಿ ನಾವುಗಳೇ ಇರುತ್ತೇವೆ. ಪಕ್ಷಿಗಳ ಉಳಿವು, ಕಾಡಿನ ರಕ್ಷಣೆ, ಉತ್ತಮ ಇಳುವರಿ, ಆರೋಗ್ಯಕರ ಜೀವನ ಎಲ್ಲವೂ ಒಂದಕ್ಕೊಂದು ಹೆಣೆದುಕೊಂಡಿವೆ. ಕೊಂಡಿಯ ಯಾವ ಭಾಗ ಕತ್ತರಿಸಿದರೂ ಎಲ್ಲವೂ ಅಸ್ತವ್ಯಸ್ಥವಾಗಿರುತ್ತದೆ. ಬದಲಾದ ಕಾಲಘಟ್ಟದ ಮೌಲ್ಯಗಳ ನಡುವೆ, 'ಹಕ್ಕಿ ಮತ್ತು ಗೂಡು'ನಂತಹ ಪುಸ್ತಕಗಳು ಇಂದಿನ ಅನಿವಾರ್ಯವಾಗಿವೆ.

ಸಾಥಿ ಎಸ್. ಆರ್

# ಮೊರೆಯ ಕೇಳು ಮಾಧವ



**ಹೇ** ಮಾಧವ,
ಕರುಣೆಯಿಡು ಈ ದೀನಳ ಮೇಲೆ.
ಗೊತ್ತಿಲ್ಲ ನನಗೆ ಪ್ರೀತಿಯಲಿ ಉರಿದು
ಹೋಗುವ ರೀತಿ,
ಯಾಕೆಂದರೆ ರಾಧೆ ನಾನಲ್ಲ.
ಆದರೆ...
ಅವಳಂತೆ ಕಳೆದುಹೋದ ಪ್ರೀತಿಗಾಗಿ
ಪರಿತಪಿಸುತ್ತಿರುವುದಂತೂ ನಿಜ.
ಜಾರುತಿರುವುದು ಕಾಲ ಸದ್ದಿಲ್ಲದೆ
ಕ್ಷಣವೂ ನಿಲ್ಲದೆ, ಅಂಗೈಯಲ್ಲಿನ
ಮರಳು ಜಾರುವಂತೆ,
ಆದರೂ ನಾನಿಲ್ಲೆ ಕಾಯುತಿರುವೆ
ನಿನ್ನ ಬರುವಿಕೆಗಾಗಿ ಕಾಲದ ಪರಿವೇ ಇಲ್ಲದೆ.
ಇದಾವ ಪರಿಯ ಮುನಿಸು ನಿನ್ನದು,
ಈ ನಿರಪರಾಧಿ ಹೃದಯದ ಮೇಲೆ.
ಕಾರಣವನ್ನೂ ಹೇಳದೆ ಕಾಡುತಿರುವೆ ಹೀಗೇಕೆ.
ಬಂದು ಸಂತೈಸಿಬಿಡು ಈ ಬಡ ಜೀವವನ್ನು
ಆ ಕ್ಷಣವೇ ನನ್ನುಸಿರು ನಿಂತರೂ ಸರಿಯೇ
ಹಾಯಾಗಿ ಬೆರೆತುಬಿಡುವೆ ನಿನ್ನುಸಿರಿನಲಿ ಉಸಿರಾಗಿ.




ಮೀನಾಕ್ಷಿ ಒಕ್ಕುಂದ ಮಠ್
ಪ್ರಾಧ್ಯಾಪಕರು, ಬೈಲಹೊಂಗಲ ಡಿಗ್ರಿ ಕಾಲೇಜು

ವೈ. ಜಿ. ಮುರಳೀಧರನ್

# ಗಾಂಧಿ ನಾಡಿಗೆ ನನ್ನ ಪ್ರಯಾಣ

ಬಹಳ ವರ್ಷಗಳಿಂದ ನಾನು ಭಾರತಕ್ಕೆ ಭೇಟಿ ನೀಡಬೇಕೆಂದು ಬಯಸಿದ್ದೆ. ನನ್ನ ಬಾಲ್ಯದ ದಿನಗಳಲ್ಲಿ ಇಡೀ ಭಾರತ ನನ್ನನ್ನು ಬಲವಾಗಿ ಆಕರ್ಷಿಸಿತ್ತು. ಅಲ್ಲಿನ ಆನೆಗಳು, ಹುಲಿ, ದೇವಾಲಯಗಳು, ಹಾವಾಡಿಗರು ಮತ್ತು ಅಲ್ಲಿನ ಕಥೆಗಳಲ್ಲಿನ ವ್ಯಕ್ತಿಗಳು. ಮಾಂಟ್ಗೋಮೆರಿಯಲ್ಲಿ ಬಹಿಷ್ಕಾರ ನಡೆಯುತ್ತಿರುವ ಸಂದರ್ಭದಲ್ಲಿ ನಮ್ಮ ಅಹಿಂಸಾತ್ಮಕ ಚಳವಳಿ ಮತ್ತು ಸಾಮಾಜಿಕ ಬದಲಾವಣೆಗೆ ಭಾರತದ ಗಾಂಧಿ ನಮ್ಮೆಲ್ಲರ ದಾರಿದೀಪವಾಗಿದ್ದರು. ನಾವು ಅವರ ಬಗ್ಗೆ ಬಹಳಷ್ಟು ಮಾತನಾಡಿಕೊಳ್ಳುತ್ತಿದ್ದೆವು. ಮಾಂಟ್ಗೋಮೆರಿ ಬಸ್ ಬಹಿಷ್ಕಾರ ಚಳವಳಿ ಯಶಸ್ವಿಯಾದ ಹಿನ್ನೆಲೆಯಲ್ಲೇ ನನ್ನ ಕೆಲ ಸ್ನೇಹಿತರು ನನ್ನನ್ನು ಉದ್ದೇಶಿಸಿ 'ನೀವು ಏಕೆ ಭಾರತಕ್ಕೆ ಹೋಗಿ ಅಲ್ಲಿ ನೀವು ಅತ್ಯಂತ ಗೌರವದಿಂದ ಕಾಣುವ ಮಹಾತ್ಮ ಅವರು ಏನು ಮಾಡಿದ್ದಾರೆ ಎಂಬುದನ್ನು ಪ್ರತ್ಯಕ್ಷವಾಗಿ ನೋಡಿಕೊಂಡು ಬರಬಾರದು' ಎಂದು ಸಲಹೆ ನೀಡಿದರು.

೧೯೫೬ರಲ್ಲಿ ಪಂಡಿತ್ ಜವಹರಲಾಲ್ ನೆಹರು ಅವರು ಭಾರತದ ಪ್ರಧಾನ ಮಂತ್ರಿ ಆಗಿದ್ದ ವೇಳೆ ಅಮೇರಿಕಕ್ಕೆ ಭೇಟಿ ನೀಡಿದ್ದರು. ಆ ಸಂದರ್ಭದಲ್ಲಿ ಅವರು ನಾನು ಭಾರತಕ್ಕೆ ಭೇಟಿ ನೀಡುವ ವಿಷಯವನ್ನು ಪ್ರಸ್ತಾಪಿಸಿದ್ದರು. ಹಿಂದೆ ಭಾರತದಲ್ಲಿ ಅಮೇರಿಕದ ರಾಯಭಾರಿ ಆಗಿದ್ದ ಚೆಸ್ಟರ್ ಬೌಲ್ಸ್ ಸಹ ಇದರ ಬಗ್ಗೆ ನನಗೆ ಪತ್ರ ಬರೆದಿದ್ದರು. ಆದರೆ ಪ್ರತಿಯೊಂದು ಬಾರಿ ನಾನು ಭಾರತಕ್ಕೆ ಭೇಟಿ ನೀಡಲು ನಿರ್ಧರಿಸಿದಾಗಲೂ ಏನಾದರೊಂದು ಘಟನೆ ಸಂಭವಿಸಿ ಭೇಟಿಗೆ ಅಡಚಣೆ ಉಂಟುಮಾಡುತ್ತಿತ್ತು. ಒಮ್ಮೆ ಪೂರ್ವ ಯೋಜನೆಯಂತೆ ಘಾನಾಕ್ಕೆ ಭೇಟಿ ಕೊಡಬೇಕಾಯಿತು. ಮತ್ತೊಮ್ಮೆ ನಾನು ಬರೆಯುತ್ತಿದ್ದ 'ಸ್ಟ್ರೈಡ್ ಟುವರ್ಡ್ ಫ್ರೀಡಮ್' ಪುಸ್ತಕವನ್ನು ಮುಗಿಸಿಕೊಡಬೇಕೆಂದು ಪ್ರಕಾಶಕರು ಒತ್ತಾಯಿಸುತ್ತಿದ್ದರು. ಇದಾದ ನಂತರ ಇಸೋಲಾ ವೇರ್ ಪ್ರಕರಣ ನಡೆಯಿತು. ಸೆಪ್ಟೆಂಬರ್‌ನ ಒಂದು ಶನಿವಾರದ ಮಧ್ಯಾಹ್ನ ನಾನು ಅಂಗಡಿಯೊಂದರಲ್ಲಿ ನನ್ನ ಪುಸ್ತಕಗಳಿಗೆ ಆಟೋಗ್ರಾಫ್ ಮಾಡುತ್ತಿದ್ದ ವೇಳೆ ಇಸೋಲಾ ವೇರ್ ಲಕೋಟೆಯನ್ನು ತೆಗೆಯಲು ಉಪಯೋಗಿಸುವ ಚಾಕುವಿನಿಂದ ನನ್ನನ್ನು ಕೊಲ್ಲಲು ಪ್ರಯತ್ನಿಸಿದಳು. ಆ ದಾಳಿ ನನ್ನ ಭಾರತದ ಪ್ರಯಾಣವನ್ನು ಮಾತ್ರವಲ್ಲ ಇತರೆ ಎಲ್ಲಾ ಯೋಜನೆಗಳನ್ನೂ ಕಸಿದುಕೊಂಡಿತು. ಚಾಕುವಿನಿಂದ ಆದ ಗಾಯ ವಾಸಿಯಾಗಲು ಕೆಲ ದಿನಗಳೇ ಆದವು. ವೈದ್ಯರು ನನ್ನನ್ನು ಆಸ್ಪತ್ರೆಯಿಂದ ಬಿಡುಗಡೆ ಮಾಡಿದ ನಂತರ ಮತ್ತೊಂದು ಚಳವಳಿಯಲ್ಲಿ ತೊಡಗಿಸಿಕೊಳ್ಳುವ ಮುನ್ನ ಭಾರತಕ್ಕೆ ಭೇಟಿ ನೀಡಲು ನಿರ್ಧರಿಸಿದೆ.

ಭಾರತಕ್ಕೆ ನಾನೊಬ್ಬನೇ ಭೇಟಿಕೊಡುವುದು ಬೇಡವೆಂದು, ನಾನು ನನ್ನ ಮಡದಿ ಹಾಗೂ ನನ್ನ ಸ್ನೇಹಿತ ಲಾರೆನ್ಸ್ ರೆಡಿಕ್‌ನನ್ನು ನನ್ನ ಜೊತೆ ಭಾರತಕ್ಕೆ ಬರುವಂತೆ ಸೂಚಿಸಿದೆ. ನನ್ನ ಮಡದಿ ಕೊರೆಟ್ಟಾ ಭಾರತದ ಮಹಿಳೆಯರ ವಿಷಯದಲ್ಲಿ ತುಂಬ ಗೌರವವನ್ನು ಹೊಂದಿದ್ದರೆ, ಲಾರೆನ್ಸ್ ಭಾರತದ ಚರಿತ್ರೆ ಹಾಗೂ ಆಡಳಿತದ ಬಗ್ಗೆ ಆಸಕ್ತರಾಗಿದ್ದರು. ಆತ ನನ್ನ ಜೀವನ ಚರಿತ್ರೆ 'ಕ್ರುಸೇಡರ್ ವಿತೌಟ್ ವೈಲೆನ್ಸ್' ಬರೆದಿದ್ದ. ಗಾಂಧಿಯನ್ನು ಕಂಡಿರುವ ಜನ ನನ್ನ ಮತ್ತು ಮಾಂಟ್ಗೋಮೆರಿ ಚಳವಳಿಯ ಬಗ್ಗೆ ಯಾವ ರೀತಿ ತಮ್ಮ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ ಎಂಬುದನ್ನು ಅಳೆದು ನೋಡಲು ಇದೊಂದು ಅವಕಾಶ ಎಂಬುದು ಲಾರೆನ್ಸ್‌ನ ಅನಿಸಿಕೆಯಾಗಿತ್ತು. ನಾವು ಮೂರು ತಲೆ, ಆರು ಕಣ್ಣುಗಳು ಮತ್ತು ಆರು ಕಿವಿಗಳ ಮೂರು ಜನರ ಗುಂಪು ಭಾರತಕ್ಕೆ ತೆರಳಲು ಸಿದ್ಧವಾಯಿತು.

ಪ್ರಯಾಣದ ಖರ್ಚು ವೆಚ್ಚ ಇತ್ಯಾದಿಯನ್ನು ಭರಿಸಲು ಅಮೇರಿಕನ್ ಫ್ರೆಂಡ್ಸ್ ಸರ್ವಿಸ್ ಸಮಿತಿಯ ಮೂಲಕ, ಕ್ರಿಸ್ಟೋಫರ್ ರೆನಾಲ್ಡ್ಸ್ ಫೌಂಡೇಷನ್ ಮುಂದಾಯಿತು. ದಕ್ಷಿಣ ಕ್ರಿಶ್ಚಿಯನ್ ಲೀಡರ್‌ಶಿಪ್ ಕಾನ್ಫರೆನ್ಸ್ ಮತ್ತು ಮಾಂಟ್ಗೋಮೆರಿ ಅಸೋಸಿಯೇಷನ್ ಸಹ ಆರ್ಥಿಕ ನೆರವು ನೀಡಿತು. ಭಾರತದ ಗಾಂಧಿ ಸ್ಮಾರಕನಿಧಿ ನಮ್ಮ ಭೇಟಿಗೆ ಅಗತ್ಯವಾದ ಅಪ್ಪಣೆ, ಇತ್ಯಾದಿ ವ್ಯವಸ್ಥೆ ಮಾಡಿತು. ಈ ಎಲ್ಲ

ಸಿದ್ಧತೆಗಳನ್ನು ಮಾಡಿಕೊಂಡು ನಾವು ಮೂರು ಜನ ೧೯೫೯ರ ಫೆಬ್ರವರಿ ೩ನೇ ದಿನಾಂಕದಂದು ಮಧ್ಯರಾತ್ರಿ ನ್ಯೂಯಾರ್ಕ್ ನಗರದಿಂದ ಹೊರಟೆವು. ಮಾರ್ಗ ಮಧ್ಯೆ ಪ್ಯಾರಿಸ್‌ನಲ್ಲಿ ಸ್ವಲ್ಪಕಾಲ ತಂಗಿದ್ದೆವು. ಅಲ್ಲಿ ರೆಡಿಕ್‌ನ ಸ್ನೇಹಿತರಾದ ರಿಚರ್ಡ್ ರೈಟ್ ಅವರು ನೀಗ್ರೋಗಳ ಬಗ್ಗೆ ಯುರೋಪಿಯನ್ನರ ಮನೋಭಾವದ ಬಗ್ಗೆ ಮಾಹಿತಿ ನೀಡಿದರು. ಜೊತೆಗೆ ಫ್ರೆಂಚ್ ಅಡುಗೆಯ ಉತ್ತಮ ರುಚಿಯನ್ನು ಸವಿಯುವ ಅವಕಾಶ ಮಾಡಿ ಕೊಟ್ಟರು. ತೀವ್ರವಾದ ಹಿಮ ಇದ್ದ ಪರಿಣಾಮ ನಾವು ಸ್ವಿಟ್ಜರ್‌ಲ್ಯಾಂಡ್‌ನಲ್ಲಿ ಸಂಪರ್ಕ ವಿಮಾನ ತಪ್ಪಿತು. ಆದ್ದರಿಂದ ಬೇರೊಂದು ಮಾರ್ಗದ ಮೂಲಕ ನಿಗದಿತ ಸಮಯಕ್ಕೆ ಬದಲಾಗಿ ಎರಡು ದಿನ ತಡವಾಗಿ ಭಾರತವನ್ನು ತಲುಪಿದೆವು. ಆದರೆ ನಾವು ಬೊಂಬಾಯಿನಲ್ಲಿ ಮೋಡಗಳಿಂದ ಹೊರಗೆ ಬಂದ ದಿನದಿಂದ [ಫೆಬ್ರವರಿ ೧೦] ಮಾರ್ಚ್ ೧೦ರ ವರೆಗೆ ನಾವು ದೆಹಲಿ ವಿಮಾನ ನಿಲ್ದಾಣಕ್ಕೆ ವಿದಾಯ ಹೇಳುವವರೆಗೂ ನಮಗೆ ಆದ ಅನುಭವವನ್ನು ಪೂರ್ಣವಾಗಿ ವಿವರಿಸಲು ಸಾಧ್ಯವಿಲ್ಲ. ಆದರೆ ಅದರ ಮುಖ್ಯಾಂಶಗಳನ್ನು ಮಾತ್ರ ಹೇಳಬಲ್ಲೆ.

ಪ್ರಥಮವಾಗಿ ನಾನು ಹೇಳಲು ಇಚ್ಛಿಸುವುದೇನೆಂದರೆ ನಮಗೆ ಭಾರತದಲ್ಲಿ ಅತ್ಯಂತ ವೈಭವದ ಸ್ವಾಗತ ದೊರೆಯಿತು. ಯಾರೂ ನಿರೀಕ್ಷಿಸಲಾರದಷ್ಟು ಭಕ್ತಿ, ಭಾವ ಮತ್ತು ಆದರವನ್ನು ಅಲ್ಲಿನ ಜನ ನಮಗೆ ನೀಡಿದರು. ಅವರು ವ್ಯಕ್ತಪಡಿಸಿದ ಗೌರವ ವರ್ಣಿಸಲು ಅಸಾಧ್ಯ. ಪ್ರಧಾನ ಮಂತ್ರಿಗಳು, ರಾಷ್ಟ್ರಪತಿ, ಉಪರಾಷ್ಟ್ರಪತಿ, ಸಂಸದರು, ರಾಜ್ಯಪಾಲರು, ವಿವಿಧ ರಾಜ್ಯದ ಮುಖ್ಯಮಂತ್ರಿಗಳು, ಲೇಖಕರು, ಸಾಮಾಜಿಕ ಹೋರಾಟಗಾರರು ಹಾಗೂ ಕನಿಷ್ಠ ಒಬ್ಬ ಸಂತರು ನಮ್ಮನ್ನು ಬರಮಾಡಿಕೊಂಡರು. ನಮ್ಮ ಭಾವಚಿತ್ರಗಳು ದಿನಪತ್ರಿಕೆ ಮತ್ತು ನಿಯತಕಾಲಿಕೆಯಲ್ಲಿ ಪ್ರಕಟವಾಗಿದ್ದರಿಂದ ಜನ ನಮ್ಮನ್ನು ಕೂಡಲೆ ಗುರುತಿಸುತ್ತಿದ್ದರು.




ಭಾರತದಲ್ಲಿದ್ದ ಸಂದರ್ಭದಲ್ಲಿ ಬೆಳಗಿನ ಹೊತ್ತು ನಾನೊಬ್ಬನೆ ಬೃಹತ್ ನಗರದಲ್ಲಿ ಓಡಾಡಲು ಹೋಗುತ್ತಿದ್ದ ವೇಳೆಯಲ್ಲಿ ಅಪರಿಚಿತರು ಸಹ ನನ್ನನ್ನು ನೋಡಿ 'ನೀವು ಮಾರ್ಟಿನ್ ಲೂಥರ್ ಕಿಂಗ್' ಅಲ್ಲವೇ ? ಎಂದು ಕೇಳುತ್ತಿದ್ದರು.

ವಾಸ್ತವವಾಗಿ ಪ್ರತಿಯೊಂದು ಬಾಗಿಲೂ ನಮಗೆ ತೆರೆದಿತ್ತು. ನೂರಾರು ಆಹ್ವಾನಗಳು ಮತ್ತು ಕರೆಗಳು ಬಂದರೂ ಸಮಯದ ಅಭಾವದಿಂದ ಅದೆಲ್ಲವನ್ನು ಒಪ್ಪಿಕೊಳ್ಳಲು ಆಗುತ್ತಿರಲಿಲ್ಲ. ನಮ್ಮನ್ನು ಅವರ ಸಹೋದರರಂತೆ ಕಾಣುತ್ತಿದ್ದರು. ನಮ್ಮ ಕಪ್ಪುಬಣ್ಣವನ್ನು ಒಂದು ಆಸ್ತಿ ಎಂದೇ ಭಾವಿಸಿದ್ದರು. ಆದರೆ ಅಮೇರಿಕ, ಆಫ್ರಿಕಾ ಮತ್ತು ಏಷ್ಯಾದಲ್ಲಿರುವ ವರ್ಣಭೇದ ಹಾಗೂ ವಸಾಹತುಶಾಹಿ ವಿರುದ್ಧದ ಹೋರಾಟಕ್ಕೆ ದೊರಕಿದ ಪ್ರೋತ್ಸಾಹ ಮರೆಯಲು ಸಾಧ್ಯವಿಲ್ಲ. ನಾವು ಅನೇಕ ಸಂವಾದಗಳಲ್ಲಿ ಭಾಗವಹಿಸುವ ಅವಕಾಶ ದೊರೆಯಿತು. ಈ ಸಂವಾದ ಮತ್ತು ಸಭೆಗಳಲ್ಲಿ ನಾವು ಸಾವಿರಾರು ಜನರೊಂದಿಗೆ ಚರ್ಚಿಸಲು ಸಾಧ್ಯವಾಯಿತು. ಭಾರತದಾದ್ಯಂತ ನಾನು ಕೆಲವೊಂದು ವಿಶ್ವವಿದ್ಯಾಲಯಗಳಲ್ಲಿ ಭಾಷಣ ಮಾಡಿದೆ. ವರ್ಣಭೇದದ ಸಮಸ್ಯೆ ಇದ್ದುದರಿಂದ ಭಾಷಣದ ಸಭಾಂಗಣ ಜನರಿಂದ ತುಂಬಿರುತ್ತಿತ್ತು. ಕೆಲವೊಂದು ಸ್ಥಳಗಳಲ್ಲಿ ಮಾತ್ರ ನನ್ನ ಭಾಷಣವನ್ನು ಸ್ಥಳೀಯ ಭಾಷೆಗೆ ಅನುವಾದ ಮಾಡಲಾಗುತ್ತಿತ್ತು. ಉಳಿದಂತೆ ಬಹುತೇಕ ನನ್ನ ಇಂಗ್ಲಿಷ್ ಭಾಷಣವನ್ನು ಜನ ಅರ್ಥಮಾಡಿ ಕೊಳ್ಳುತ್ತಿದ್ದರು.

ಭಾರತೀಯರು ನೀಗ್ರೋಗಳಿಂದ ಅಧ್ಯಾತ್ಮದ ಬಗ್ಗೆ ಮಾತುಗಳನ್ನು ಕೇಳಲು ಇಷ್ಟಪಡುತ್ತಾರೆ. ಆದ್ದರಿಂದ ನಾನು ಭಾಷಣ ಮಾಡಿದಷ್ಟೇ ನನ್ನ ಮಡದಿ ಕೊರೆಟ್ಟಾ ಹಾಡುತ್ತಿದ್ದಳು. ಭಾರತೀಯರು ಆಟೋಗ್ರಾಫ್ ಪ್ರಿಯರೆಂದು, ಹಾಗೂ ಅದು ಅಮೇರಿಕಕ್ಕೆ ಮಾತ್ರ ಸೀಮಿತವಲ್ಲ ಎಂಬುದು ನಮ್ಮ ಗಮನಕ್ಕೆ ಬಂತು. ನಾವು ಸಾರ್ವಜನಿಕ ಸಮಾರಂಭಗಳಲ್ಲಿ ಭಾಗವಹಿಸಿದ ಕಡೆಯಲ್ಲೆಲ್ಲಾ ನಮ್ಮ ಆಟೋಗ್ರಾಫ್ ಪಡೆಯಲು ಜನ ಕಾತುರರಾಗಿರುತ್ತಿದ್ದರು. ನಾವು ಭೇಟಿ ನೀಡಿದ ಕೆಲ ಹಳ್ಳಿಗಳಲ್ಲೂ ಜನ ಆಟೋಗ್ರಾಫ್ ಪಡೆದರು. ಅಷ್ಟೇಕೆ, ನಾವು ಪ್ರಯಾಣ ಮಾಡುತ್ತಿದ್ದ ವಿಮಾನದ ಪೈಲೆಟ್‌ಗಳು ತಮ್ಮ ಕಾಕ್‌ಪಿಟ್‌ನಿಂದ ಹೊರಬಂದು ಕ್ಯಾಬಿನ್‌ನಲ್ಲಿದ್ದ ನಮ್ಮ ಆಟೋಗ್ರಾಫ್ ಪಡೆಯುತ್ತಿದ್ದರು. ನಾವು ಭಾರತದಲ್ಲಿದ್ದಷ್ಟು ದಿನ ನಮಗೆ ಮಾಧ್ಯಮದಲ್ಲಿ ಉತ್ತಮ ಪ್ರಚಾರ ದೊರೆಯಿತು. ದಿನಪತ್ರಿಕೆಗಳು ಮಾಂಟ್ಗೋಮೆರಿ ಬಸ್ ಬಹಿಷ್ಕಾರದ ವಿಷಯವನ್ನು ಪ್ರಸಾರ ಮಾಡಿದ್ದರಿಂದ ಜನರಿಗೆ ಅದರ ವಿವರ ತಿಳಿದಿತ್ತು. ಮಾಂಟ್ಗೋಮೆರಿಯಲ್ಲಿ ನಡೆದ ೩೮೧ ದಿನಗಳ ದೀರ್ಘಾವಧಿ ಚಳವಳಿಯ ಬಗ್ಗೆ ಅಮೇರಿಕದ ಪತ್ರಿಕೆಗಳಿಗಿಂತ ಭಾರತೀಯ ಪತ್ರಿಕೆಗಳು ಹೆಚ್ಚು ವಿವರವಾಗಿ ಪ್ರಕಟಿಸಿತ್ತು. ಈಗಲೂ ಸಹ ಕೆಲವು ಅಮೇರಿಕದ ನಾಗರಿಕರು ಮಾಂಟ್ಗೋಮೆರಿ ಚಳವಳಿ ಬಗ್ಗೆ ನನ್ನನ್ನು ಕೇಳುವುದುಂಟು. ಆ ಬಹಿಷ್ಕಾರ ಏನಾಯಿತು ? ಈಗ ಯಾವ ಹಂತದಲ್ಲಿದೆ ಎಂದು ಕೇಳುತ್ತಾರೆ. ಆ ಚರಿತ್ರಾರ್ಹ ಚಳವಳಿ ೧೯೫೬ರ ಡಿಸೆಂಬರ್ ೨೧ರಂದು ಕೊನೆಗೊಂಡಿತು ಎಂಬ ವಿಷಯ ಅವರಿಗೆ ಇನ್ನೂ ತಿಳಿದಿರಲಿಲ್ಲ.

ನಾವು ಭಾರತದ ಮುಖ್ಯ ನಗರಗಳಾದ ದೆಹಲಿ, ಬೊಂಬಾಯಿ, ಕಲ್ಕತ್ತಾ ಮತ್ತು ಮದ್ರಾಸ್‌ಗಳಲ್ಲಿ ಏರ್ಪಡಿಸಿದ್ದ ಪತ್ರಿಕಾ ಗೋಷ್ಠಿಯಲ್ಲಿ ಭಾಗವಹಿಸಿದೆವು. ನಾವು ಭೇಟಿಕೊಟ್ಟ ಪ್ರತಿಯೊಂದು ಊರಿನಲ್ಲೂ ಪತ್ರಿಕಾ ಪ್ರತಿನಿಧಿಗಳೊಂದಿಗೆ ಮಾತುಕತೆ ನಡೆಸಿದೆವು. ಪತ್ರಿಕೆಯವರು ಕೇಳುತ್ತಿದ್ದ ಪ್ರಶ್ನೆಗಳಲ್ಲಿ ಕೆಲವು ಚುರುಕಾಗಿದ್ದವು. ಕೆಲವೊಂದು ದ್ವೇಷದಿಂದ ಕೂಡಿದಂತೆ ಭಾಸವಾಗುತ್ತಿತ್ತು. ಆದರೆ ನಮ್ಮ ಅಭಿಪ್ರಾಯವನ್ನು ಹೊರಗೆಳೆಯಲು ಅದೊಂದು ಮಾದರಿ ಎಂಬುದು ನನಗೆ ತಿಳಿದಿತ್ತು. ವರದಿಗಾರರು ಅತ್ಯಂತ

ಸಂಭಾವಿತರಾಗಿದ್ದರು. ಪತ್ರಿಕೆಗಳಲ್ಲಿ ಪ್ರಕಟವಾದ ಸಂಪಾದಕೀಯ ಉನ್ನತ ಮಟ್ಟದ್ದಾಗಿತ್ತು. ಅಮೇರಿಕದಲ್ಲಿ ಮತ್ತು ಪ್ರಪಂಚದ ಇತರೆ ರಾಷ್ಟ್ರಗಳಲ್ಲಿ ನಡೆಯುತ್ತಿರುವ ವಿದ್ಯಮಾನದ ಬಗ್ಗೆ ಸಂಪಾದಕರಿಗೆ ಇದ್ದ ಹಿಡಿತ ನನ್ನನ್ನು ಬೆರಗುಗೊಳಿಸಿತು.

ಭಾರತಕ್ಕೆ ನೀಡಿದ ಭೇಟಿ ನನ್ನಮೇಲೆ ವೈಯಕ್ತಿಕವಾಗಿ ಹೆಚ್ಚು ಪ್ರಭಾವ ಉಂಟುಮಾಡಿತು. ಮಹಾತ್ಮ ಗಾಂಧಿಯ ನಾಡಿನಲ್ಲಿರುವುದು, ಅವರ ಮಗ, ಮೊಮ್ಮಕ್ಕಳು, ಇತರೆ ಸಂಬಂಧಿಕರು ಮತ್ತು ಅವರ ಅನುಯಾಯಿಗಳೊಡನೆ ಮಾತನಾಡುವ ಅವಕಾಶ ದೊರಕಿದ್ದು. ಗಾಂಧಿಯವರ ನೆನಪುಗಳನ್ನು ಸ್ಮರಿಸಿದ್ದು. ಅವರ ಆಶ್ರಮಕ್ಕೆ ಭೇಟಿ ನೀಡಿದ್ದು, ಅವರಿಗೆ ಬಂದಿದ್ದ ನೆನಪಿನ ಕಾಣಿಕೆಗಳನ್ನು ನೋಡಿದ್ದು ಹಾಗೂ ರಾಜ್‌ಘಾಟ್‌ನಲ್ಲಿ ಅವರ ಸಮಾಧಿಗೆ ಪುಷ್ಪಗುಚ್ಛವನ್ನು ಇರಿಸಿದ್ದು ಮರೆಯಲಾರದ ಅನುಭವ. ದಬ್ಬಾಳಿಕೆಗೆ ತುತ್ತಾಗಿರುವ ಜನರಿಗೆ ತಮ್ಮ ಸ್ವಾತಂತ್ರ್ಯಕ್ಕಾಗಿ ಹೋರಾಡಲು ಅಹಿಂಸಾತ್ಮಕ ಚಳವಳಿಗಿಂತ ಸಶಕ್ತವಾದ ಅಸ್ತ್ರ ಇನ್ನೊಂದಿಲ್ಲ ಎಂಬುದು ಭಾರತ ಬಿಡುವ ವೇಳೆಗೆ ನನಗೆ ಮನವರಿಕೆ ಯಾಗಿತ್ತು. ಅಹಿಂಸಾತ್ಮಕ ಆಂದೋಳನ ಯಾವ ರೀತಿಯ ಪರಿಣಾಮ ಉಂಟುಮಾಡಬಹುದು ಎಂಬುದನ್ನು ಕಣ್ಣಾರೆ ಕಂಡೆ. ಹಿಂಸೆಯಿಂದ ಕೂಡಿದ ಚಳವಳಿಯ ನಂತರದಲ್ಲಿ ಸಾಮಾನ್ಯವಾಗಿ ಕಂಡುಬರುವ ದ್ವೇಷ, ಅಸೂಯೆ ಇತ್ಯಾದಿ ಯಾವುದೂ ನನಗೆ ಗೋಚರಿಸಲಿಲ್ಲ. ಈಗ ಬ್ರಿಟಿಷರು ಮತ್ತು ಕಾಮನ್‌ವೆಲ್ತ್ ರಾಷ್ಟ್ರದ ಜನರ ಮಧ್ಯೆ ಅನ್ಯೋನ್ಯ ಬಾಂಧವ್ಯವಿದೆ. ಆಕ್ರಮಣಕಾರಿ ಪ್ರವೃತ್ತಿ ನೈತಿಕ ಆತ್ಮಹತ್ಯೆಗೆ ಕಾರಣವಾಗುತ್ತದೆ. ಹಿಂಸಾಮಾರ್ಗ ದ್ವೇಷಕ್ಕೆ ಕಾರಣವಾಗುತ್ತದೆ. ಆದರೆ ಅಹಿಂಸಾ ಮಾರ್ಗ ಪ್ರೀತ್ಯಾದರದ ಸಮೂಹವನ್ನು ಸೃಷ್ಟಿಸುತ್ತದೆ.

ಇವತ್ತು ಭಾರತದಲ್ಲಿ ಗಾಂಧಿಯವರ ತತ್ವ ಮತ್ತು ಸ್ಫೂರ್ತಿ ಜೀವಂತವಾಗಿದೆ. ಗಾಂಧಿಯವರ ಅನುಯಾಯಿಗಳಲ್ಲಿ ಇದರ ಬಗ್ಗೆ ಸಂದೇಹಗಳಿವೆ. ಕಾರಣ ಸ್ವತಂತ್ರ ಸಂಗ್ರಾಮದ ಸಮಯದಲ್ಲಿ ಕೆಲವು ಘಟನೆಗಳು. ಈಗಿನವರಲ್ಲಿ ಯಾರೂ ಮಹಾತ್ಮರ ಹತ್ತಿರವೂ ಸುಳಿಯುವ ಯೋಗ್ಯತೆ ಹೊಂದಿಲ್ಲ ಎಂಬುದು ಅವರ ಅಭಿಪ್ರಾಯ. ಆದರೆ ಗಾಂಧಿ ಭಾರತದ ಚರಿತ್ರೆಯಲ್ಲಿ ಅಚ್ಚಳಿಯದೆ ಇರುವ ವ್ಯಕ್ತಿಮಾತ್ರವಲ್ಲದೆ ಅವರ ಪ್ರಭಾವವನ್ನು ನಾವು ಈಗಲೂ ಭಾರತೀಯರ ಸಾರ್ವಜನಿಕ ನೀತಿಯಲ್ಲಿ ಗುರುತಿಸಬಹುದು. ಭಾರತ ಎಂದಿಗೂ ಗಾಂಧಿಯನ್ನು ಮರೆಯಲು ಸಾಧ್ಯವಿಲ್ಲ. ಉದಾಹರಣೆಗೆ ಗಾಂಧಿ ಹತ್ಯೆಯಾದ ನಂತರ ಗಾಂಧಿ ಸ್ಮಾರಕ ನಿಧಿಯು ಸುಮಾರು ೧೫೦ ಮಿಲಿಯನ್ ಡಾಲರ್ ಮೊತ್ತವನ್ನು ಸಾರ್ವಜನಿಕರಿಂದ ಸಂಗ್ರಹಿಸಿತು. ಯಾವೊಬ್ಬ ವ್ಯಕ್ತಿಯ ಸ್ಮರಣೆಗೆ ಇದುವರೆಗೂ ವಿಶ್ವದಲ್ಲೇ

## ಅರಿಯಲಾಗದೆ !

ಕೀರ್ತಿಗೆ
ಆಸೆಪಡುವವರೆಲ್ಲ
ಅಂಬರದತ್ತ
ನೋಡುತ್ತಾರೆ
ಆದರೆ
ಭೂಮಿಯತ್ತ
ಜಾರುತ್ತಾರೆ...!

**ಎಂ. ಜಿ. ದೇಶಪಾಂಡೆ**
ಬೀದರ್–೫೮೫೪೦೩

ಇಷ್ಟೊಂದು ಭಾರಿ ಮೊತ್ತದ ದೇಣಿಗೆ ಸಂಗ್ರಹವಾಗಿಲ್ಲ. ಈ ಮೊತ್ತ ಹಾಗೂ ಭಾರತ ಸರ್ಕಾರದ ಇತರೆ ಕೊಡುಗೆಯಿಂದ ಗಾಂಧಿಯವರ ಧ್ಯೇಯ ಮತ್ತು ಕಾರ್ಯಕ್ರಮಗಳನ್ನು ಹರಡಲು ಉಪಯೋಗಿಸಲಾಗುತ್ತಿದೆ. ಜೊತೆಗೆ ಗಾಂಧಿಯವರ ಪುಸ್ತಕಗಳು ಮತ್ತು ಬರವಣಿಗೆಯನ್ನು ಪ್ರಕಟಿಸುವ ಮೂಲಕ ಅವರ ಹೆಸರನ್ನು ಶಾಶ್ವತವಾಗಿ ಉಳಿಯುವಂತೆ ಮಾಡಲಾಗುತ್ತಿದೆ. ಯಾವುದೇ ಮಾನದಂಡದ ಮೂಲಕ ನೋಡಿದರೂ ವಿಶ್ವದ ಚರಿತ್ರೆಯಲ್ಲಿ ಅರ್ಧ ಡಜನ್ ಮಹಾ ವ್ಯಕ್ತಿಗಳಲ್ಲಿ ಗಾಂಧಿ ಒಬ್ಬರು ಎಂಬುದನ್ನು ನಿಸ್ಸಂದೇಹವಾಗಿ ಹೇಳಬಹುದು.

ಗಾಂಧಿಯವರ ಅನುಯಾಯಿಗಳು ನಮ್ಮನ್ನು ಒಪ್ಪಿಕೊಂಡು ಹಾಗೂ ತೆರೆದ ಬಾಹುಗಳಿಂದ ಬರಮಾಡಿಕೊಂಡದ್ದು ನನಗೆ ಸಂತೋಷವನ್ನು ಉಂಟುಮಾಡಿದೆ. ನಾವು ಮಾಂಟ್ಗೋಮೆರಿಯಲ್ಲಿ ನಡೆಸಿದ ಅಹಿಂಸಾತ್ಮಕ ಚಳವಳಿಯನ್ನು ಅವರು ಬಹುವಾಗಿ ಮೆಚ್ಚಿಕೊಂಡಿದ್ದಾರೆ. ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಅಹಿಂಸಾ ಮಾರ್ಗವನ್ನು ಒಂದು ಸಾಧನವನ್ನಾಗಿ ಬಳಸುವುದಕ್ಕೆ ನಮ್ಮ ಜಯವನ್ನು ಒಂದು ಉದಾಹರಣೆಯನ್ನಾಗಿ ತಿಳಿದಿದ್ದಾರೆ. ಅವರ ಹಾಗೂ ನನ್ನ ದೃಷ್ಟಿಯಲ್ಲಿ ಹೇಳುವುದಾದರೆ, ಸಮರ್ಪಕವಾಗಿ ಯೋಜನೆಯನ್ನು ರೂಪಿಸಿ ಅಳವಡಿಸಿದರೆ, ಅಹಿಂಸಾ ಮಾರ್ಗ ಯಾವುದೇ ರಾಜಕೀಯ ಮತ್ತು ಸಾಮಾಜಿಕ ವ್ಯವಸ್ಥೆಯಲ್ಲೂ ಅತ್ಯಂತ ಪರಿಣಾಮಕಾರಿಯಾಗಬಲ್ಲದು.

ಅಮೇರಿಕದಲ್ಲಿ ಹೆಚ್ಚು ಪ್ರಚಲಿತವಲ್ಲದ ಆಂದೋಳನವೊಂದು ಭಾರತದಲ್ಲಿ ನಡೆಯುತ್ತಿದೆ. ಇದನ್ನು ಭೂದಾನ ಎಂದು ಕರೆಯಲಾಗುತ್ತಿದೆ. ಆಚಾರ್ಯ ವಿನೋಬಾ ಭಾವೆ ಮತ್ತು ಜಯಪ್ರಕಾಶ್ ನಾರಾಯಣ್ ಎಂಬ ಅಮೇರಿಕದಲ್ಲಿ ಶಿಕ್ಷಣ ಪಡೆದ ಬುದ್ಧಿಜೀವಿ ಈ ಆಂದೋಳನದ ನೇತೃತ್ವವಹಿಸಿದ್ದಾರೆ. ಭೂದಾನದ ಮೂಲ ಅಂಶಗಳು ಮೂರು. ಪ್ರಥಮವಾಗಿ ಅಧಿಕ ಭೂಮಿ ಹೊಂದಿರುವವರನ್ನು ಸ್ವಲ್ಪ ಭೂಮಿಯನ್ನು ತ್ಯಾಗಮಾಡುವಂತೆ ಪ್ರೇರೇಪಿಸುವುದು. ಎರಡನೆಯದು, ಭೂಮಿ ಮೇಲಿನ ತಮ್ಮ ಒಡೆತನವನ್ನು ಬಿಟ್ಟುಕೊಟ್ಟು ಆ ಭೂಮಿಯನ್ನು ಸಾರ್ವಜನಿಕ ಉಪಯೋಗಕ್ಕೆ ಬಳಸಿಕೊಳ್ಳುವುದು ಹಾಗೂ ಕಡೆಯದಾಗಿ, ರೈತರು ಮತ್ತು ಗ್ರಾಮಸ್ಥರು ತಮಗೆ ಅಗತ್ಯವಾದ ವಸ್ತ್ರಗಳನ್ನು ತಾವೇ ನೇಯುವಂತೆ ಪ್ರೇರೇಪಿಸುವುದು. ಈ ಮೂರೂ ಅಂಶಗಳ ಪರಿಣಾಮವೆಂದರೆ ಪ್ರತಿಯೊಂದು ಹಳ್ಳಿಯೂ ತನ್ನ ಅಗತ್ಯಗಳನ್ನು ತಾನೆ ಸೃಷ್ಟಿಸಿಕೊಂಡು ಸ್ವಾಯತ್ತವಾಗಿರುತ್ತದೆ. ಪಾಶ್ಚಾತ್ಯರಿಗೆ ಇದು ಆಶ್ಚರ್ಯಕರ ವಿಷಯವಾಗಿ ತೋರಬಹುದು. ಆದರೆ ಭಾರತದಲ್ಲಿ ಇದರಿಂದ ಸಾಕಷ್ಟು ಬೆಳವಣಿಗೆ ಕಂಡುಬಂದಿದೆ. ಲಕ್ಷಾಂತರ ಜಮೀನ್ದಾರರು ಸ್ವಇಚ್ಛೆಯಿಂದ ಭೂಮಿಯನ್ನು ಬಿಟ್ಟುಕೊಟ್ಟಿದ್ದಾರೆ. ಸಹಕಾರಿ ಸಂಘಗಳಿಗೆ ತಮ್ಮ ಭೂಮಿಯನ್ನು ದಾನಮಾಡಿದ್ದಾರೆ.

ಭಾರತದ ಪಂಚವಾರ್ಷಿಕ ಯೋಜನೆ ತನ್ನ ಉದ್ದೇಶದ ಈಡೇರಿಕೆಯಲ್ಲಿ ಹಿಂದೆ ಬಿದ್ದಿದೆ. ಇದುವರೆಗಿನ ಮೂರು ಪಂಚವಾರ್ಷಿಕ ಯೋಜನೆಗಳು ೨೫ ಲಕ್ಷ ಹೊಸ ಉದ್ಯೋಗವನ್ನು ಸೃಷ್ಟಿಮಾಡಬೇಕೆಂಬ ಉದ್ದೇಶ ಹೊಂದಿತ್ತು. ಆದರೆ ಭಾರತದಲ್ಲಿ ಜನನ ಪ್ರಮಾಣ ಒಂದು ವರ್ಷಕ್ಕೆ ಆರು ಮಿಲಿಯನ್. ಇದನ್ನು ಗಮನಿಸಿದಾಗ ಪಂಚವಾರ್ಷಿಕ ಯೋಜನೆಯ ಉದ್ದೇಶ ಈಡೇರುವುದು ಅನುಮಾನಾಸ್ಪದ. ಪರಿಹಾರ ಯಾವುದು ಎಂಬುದು ನಮಗೂ ಸುಲಭವಾಗಿ ತಿಳಿಯುತ್ತಿಲ್ಲ. ಆದರೆ ಇಷ್ಟು ಮಾತ್ರ ಸತ್ಯ. ಭಾರತಕ್ಕೆ ಸಹಾಯದ ಅಗತ್ಯವಿದೆ. ಹೊರಗಿನಿಂದ ಬಂಡವಾಳ ಮತ್ತು ತಾಂತ್ರಿಕ ಜ್ಞಾನದ ಅವಶ್ಯಕತೆ ಇದೆ. ಅಮೇರಿಕ ಮತ್ತು ಪಾಶ್ಚಾತ್ಯದ ಹಿತದ ದೃಷ್ಟಿಯಿಂದ ಭಾರತಕ್ಕೆ ಸಹಾಯ ಮಾಡುವುದು ಅಗತ್ಯ. ಆದರೆ ಆ ಸಹಾಯಕ್ಕೆ ಯಾವುದೇ ಷರತ್ತುಗಳು ಇರಬಾರದು. ವಿಶ್ವದ ಒಂದು ಬೃಹತ್ ರಾಷ್ಟ್ರ ಯಾವುದೇ ದಬ್ಬಾಳಿಕೆಗೆ ಶರಣಾಗದೆ, ಎಡ ಅಥವಾ ಬಲ ಎನ್ನುವ ಭೇದವಿಲ್ಲದೆ ತನ್ನ ಜನರಿಗೆ ಉತ್ತಮ ಜೀವನ ನಡೆಸುವ ಸೌಲಭ್ಯಗಳನ್ನು ಒದಗಿಸಿದಲ್ಲಿ ಅದು ಪ್ರಜಾಪ್ರಭುತ್ವಕ್ಕೆ ನೀಡಿದ ಕೊಡುಗೆ ಯಾಗುತ್ತದೆ. ಇವತ್ತು ಭಾರತ ಶಾಂತಿ ಮತ್ತು ಅಹಿಂಸೆಗೆ ಹೆಸರಾಗಿರುವ ಶಕ್ತಿಶಾಲಿ ದೇಶವಾಗಿದೆ. ಆದರ್ಶ ವ್ಯಕ್ತಿಗಳು ಮತ್ತು ಬುದ್ಧಿಜೀವಿಗಳನ್ನು ಗೌರವಿಸುವ ದೇಶ ಇದಾಗಿದೆ. ನಾವು ಭಾರತದ ಆತ್ಮವನ್ನು ಉಳಿಸಲು ಸಹಾಯ ಮಾಡಬೇಕು. ಕಾರಣ ಅದರಿಂದ ನಮ್ಮ ಆತ್ಮಗಳೂ ಉಳಿದುಕೊಳ್ಳುತ್ತವೆ.

ಮೂಲ : **ಮಾರ್ಟಿನ್ ಲೂಥರ್ ಕಿಂಗ್ ಜೂ**
ಭಾವಾನುವಾದ : **ವೈ. ಜಿ. ಮುರಳೀಧರನ್**
ನಂ. ೯೦೦, 'ಸಂಧ್ಯಾರಾಗ', ೧ನೇ ಹಂತ
೧ನೇ ಫೇಸ್, ಚಂದ್ರಾಲೇಔಟ್, ೧೫ನೇ ಅಡ್ಡರಸ್ತೆ,
ನಾಗರಭಾವಿ ಅಂಚೆ, ಬೆಂಗಳೂರು – ೫೬೦ ೦೭೨




# ಸಾವನ್ನು ಕುರಿತಂತೆ

**ಸ**ತ್ಯ ಎಂಬುದೊಂದು ಇರುವುದಾದರೆ ಅದು ಸಾವು. 'ಸಾವಿಲ್ಲದ ಮನೆಯ ಸಾಸಿವೆಯ ತಾ' ಎಂಬ ಗೌತಮ ಬುದ್ಧನ ಜಾಣ್ನುಡಿ ಇದೇ ಸತ್ಯವನ್ನು ಎತ್ತಿ ತೋರುವ ಒಂದು ಮಾತು. "ಜಾತಸ್ಯ ಹಿ ಧ್ರುವೋ ಮೃತ್ಯು" ಎನ್ನುವ ಭಗವದ್ಗೀತೆಯ ಶ್ಲೋಕ ಕೂಡ ಇದನ್ನೇ ಸಾರುತ್ತದೆ. ಸಾವನ್ನು ಕುರಿತು ಅನವಶ್ಯಕವಾಗಿ ಚಿಂತಿಸಬೇಕಿಲ್ಲ ಎನ್ನುವುದು ಗೀತೆಯ ಉಪದೇಶವೂ ಹೌದು. ಇದೇ ಬಗೆಯ ನಿಲುವುಗಳನ್ನು ಇತರ ಧರ್ಮ ಗ್ರಂಥಗಳಲ್ಲೂ ಕಾಣಬಹುದು. ಬೈಬಲ್‌ನ ಒಂದು ಉಕ್ತಿ ಹೀಗಿದೆ: "ಬದುಕು ಒಂದು ಕ್ಷಣ ಕಾಣಿಸಿಕೊಂಡು, ನಂತರದಲ್ಲಿ ಕಣ್ಮರೆಯಾಗುವ ಒಂದು ಮಂಜಿನ ಹನಿ." ನಾವು ಬದುಕಿರುವಾಗ, ಇನ್ನೂ ಸಾಯದೆ ಇರುವ ಕಾರಣ, ಸಾವನ್ನು ಕುರಿತು ಚಿಂತಿಸುವುದು ಅನಗತ್ಯ. ಮತ್ತು ನಾವು ಸತ್ತನಂತರದಲ್ಲಿ, ನಮಗೆ ಯಾವುದೇ ಅನುಭವ ಆಗದೇ ಇರುವುದರಿಂದ, ಆಗಲೂ ಸಾವಿನ ಚಿಂತೆ ನಮ್ಮನ್ನು ಕಾಡಲಾರದು ಎನ್ನುವುದು ಗ್ರೀಕ್ ದಾರ್ಶನಿಕ ಎಪಿಕ್ಯುರಸ್‌ನ ವಾದ. "ಸಣ್ಣ ಹಾಗೂ ಸಂಕುಚಿತ ಮನಸ್ಸುಗಳು ಮಾತ್ರವೇ ಸಾವಿನ ಭೀತಿಗೊಳಗಾಗುತ್ತವೆ" ಎನ್ನುವುದು ಜರ್ಮನ್ ತತ್ವಜ್ಞಾನಿ ಆರ್ಥರ್ ಸೊಫೆನಾರ್‌ನ ಅನ್ನಿಸಿಕೆ. ಎಪಿಕ್ಯುರಸ್ ಮತ್ತು ಸೊಫೆನಾರ್ ಅವರ ಅಭಿಪ್ರಾಯಗಳು ಏನೇ ಇರಲಿ, ಸಾವನ್ನು ಕುರಿತು ಎಲ್ಲರೂ ಒಂದಿಲ್ಲೊಂದು ಸಂದರ್ಭದಲ್ಲಿ ಚಿಂತಿಸುವುದು, ಭಯಪಡುವುದು, ಇನ್ನೊಬ್ಬರ ಸಾವಿಗೆ ದುಃಖಿಸುವುದು ಸಾಮಾನ್ಯವೇ ಆಗಿದೆ. ಖುಶವಂತ್ ಸಿಂಗ್ ಅವರಂತಹ ಬುದ್ಧಿಜೀವಿಗಳನ್ನು ಸಹ ಸಾವಿನ ಭಯ ಕಾಡದೆ ಬಿಟ್ಟಿಲ್ಲ. ಅವರ ಆತ್ಮಕಥೆಯಲ್ಲಿ ಅವರೇ ಈ ಮಾತನ್ನು ಹೇಳುತ್ತಾರೆ.

ಸಾವು ಎಂದರೆ ಏನು? ಅದು ಬದುಕಿನ ಕೊನೆ. ಭೌದ್ಧಿಕ ಶರೀರದ ನಿಷ್ಕ್ರಿಯತೆ. ಅನಂತದಲ್ಲಿ ಲೀನವಾಗುವುದು. ಇವೆಲ್ಲಾ ಭೌತಿಕ ನಿರೂಪಣೆಗಳು. ಐಹಿಕ ತರ್ಕಕ್ಕಷ್ಟೇ ಸೀಮಿತವಾದ, ಒಂದು ಹಂತಕ್ಕೆ ಒಪ್ಪಿಕೊಳ್ಳಬಹುದಾದ, ವಿವರಣೆಗಳು. ಈ ಬಗೆಯ ವಿವರಣೆಗಳು ಸತ್ಯವೇ ಇರಬಹುದು. ಹಾಗಾದರೂ ಅವು ಯಾರಿಗೂ ಸಮಾಧಾನ ತಂದುಕೊಡುವುದಿಲ್ಲ. ಸಾವಿನ ನಿಗೂಢತೆ ಕಾಡುತ್ತಲೇ ಇರುತ್ತದೆ. ಆತ್ಮದ ಪರಿಕಲ್ಪನೆ, ಸಾವಿನ ನಂತರದ ಪುನರ್ಜನ್ಮ ಹಾಗೂ ಸ್ವರ್ಗ ಮತ್ತು ನರಕಗಳ ಬಗೆಗಿನ ನಂಬಿಕೆಗಳು ಇವೆಲ್ಲಾ ಕೂಡಿಕೊಂಡು ಸಾವಿಗೆ ಹೆಚ್ಚಿನ ಮಹತ್ವವನ್ನು ತಂದುಕೊಡುತ್ತವೆ. ಪ್ರಾಪಂಚಿಕ ಸಂಕಷ್ಟಗಳ ಸಂಕೋಲೆಯಿಂದ ಮುಕ್ತಿಗೊಳಿಸುವ ಸಾಮಾನ್ಯ ಸಂಗತಿಯೊಂದನ್ನು ಭೀಕರಗೊಳಿಸುತ್ತವೆ. ಅದರ ಬಗೆಗೆ ಅನವಶ್ಯಕವಾದ ಭಯವನ್ನು ಹುಟ್ಟುಹಾಕುತ್ತವೆ.

ಬಹುಶಃ ಜಗತ್ತಿನ ಎಲ್ಲ ಪ್ರಮುಖ ಧರ್ಮಗಳೂ ಪುನರ್ಜನ್ಮ ಮತ್ತು ಸ್ವರ್ಗ ಹಾಗೂ ನರಕಗಳ ಕಲ್ಪನೆಗಳನ್ನು ಒಂದಲ್ಲ ಒಂದು ರೀತಿಯಲ್ಲಿ ಪ್ರತಿಪಾದಿಸಿವೆ. ಅವುಗಳ ವ್ಯಾಖ್ಯಾನಗಳು ಏನೇ ಇರಲಿ, ನಮ್ಮ ಸಾಮಾನ್ಯ ತಿಳುವಳಿಕೆಗೆ ಸಿಕ್ಕುವುದು ಇಷ್ಟೇ. ಅದೆಂದರೆ, ಸಾವು ಬದುಕಿನ ಅಂತ್ಯ; ದೈಹಿಕ ಕ್ರಿಯೆಗಳು ಸ್ಥಗಿತಗೊಂಡು, ಭೌತಿಕ ದೇಹ ಅನಂತದಲ್ಲಿ ಲೀನಗೊಳ್ಳುವುದು. ಉಳಿದೆಲ್ಲ ನಂಬಿಕೆಗಳು ನಮ್ಮ ಪಾಲಿಗೆ ಕೇವಲ ಕಲ್ಪನೆಗಳು. ಯಾರೋ ಬುದ್ಧಿವಂತರು ಮಾನವನ ನಡವಳಿಕೆಗಳನ್ನು ಸಮಾಜದ ಕಟ್ಟುಕಟ್ಟಳೆಗಳಿಗೆ ಒಳಪಡಿಸಿ, ಅವನ ಮೃಗೀಯ ಗುಣಗಳಿಗೆ ಕಡಿವಾಣ ಹಾಕಲೆಂದೇ ಸೃಷ್ಟಿಸಿದ ಊಹಾಪೋಹಗಳು ಇದ್ದಿರಬಹುದೇನೋ!

ಸಾವು ಪರಮ ಸತ್ಯ, ಅನಿವಾರ್ಯ. ನನ್ನ ದೃಷ್ಟಿಯಲ್ಲಿ ಅದು ಸ್ವಾಗತಾರ್ಹ ಕೂಡ. ನನ್ನ ಈ ನಿಲುವಿಗೆ ಸಾವನ್ನು ಕುರಿತ ಸಾಕ್ರಟೀಸನ ವಾದವೇ ಆಧಾರ. ಸಾಕ್ರಟೀಸನ ಅಭಿಪ್ರಾಯದಲ್ಲಿ ಸಾವಿನ ನಂತರದಲ್ಲಿ ಎರಡು ಸಾಧ್ಯತೆಗಳುಂಟು. ಮೊದಲಿಗೆ, ಸಾವು ಒಂದು ಶೂನ್ಯ ಸ್ಥಿತಿಯಾಗಿರಬೇಕು. ಗಾಢನಿದ್ರೆಯನ್ನು ಹೋಲುವ ಸಾವಿನ ಈ ಶೂನ್ಯ ಸ್ಥಿತಿಯನ್ನು ಸಾಕ್ರಟೀಸ್ ವರ್ಣಾತೀತ ಸುಯೋಗ ಎಂದೇ ಭಾವಿಸುತ್ತಾನೆ. ಎರಡನೆಯ ಸಾಧ್ಯತೆ, ಅನೇಕರು ನಂಬಿಕೊಂಡಿರುವಂತೆ, ಆತ್ಮವು ತನ್ನ ಪ್ರಸ್ತುತ ಸ್ಥಿತಿಯನ್ನು ತ್ಯಜಿಸಿ ಬೇರೊಂದು ರೂಪವನ್ನು ಪಡೆದುಕೊಳ್ಳುವುದು. ಯಾವುದೇ ಸಾಧ್ಯತೆ ನಿಜವಾದರೂ, ಸಾವಿನ ಬಗ್ಗೆ ಅಂಜಿಕೊಳ್ಳುವಂತಹುದೇನೂ ಇಲ್ಲವೇ ಇಲ್ಲ.

**ಎಚ್. ಎಸ್. ಈಶ್ವರ**
'ಉತ್ತುಂಗ', ಎಚ್.ಐ.ಜಿ. ೧೧, ಕೆ.ಎಚ್.ಬಿ. ಕಾಲನಿ
ಮೊದಲನೇ ಹಂತ, ಬಸವೇಶ್ವರನಗರ
ಬೆಂಗಳೂರು – ೫೬೦ ೦೭೯




ಡಾ॥ ಪದ್ಮಿನಿ ಪ್ರಸಾದ್ ಮತ್ತು ಡಾ॥ ವಿಠ್ಠಲ್ ಸಿ. ಪ್ರಭು ಅವರ *Marriage Guidance for a Happy Marriage* ಕೃತಿಯನ್ನು ಬೆಂಗಳೂರಿನ ನಯನ ಸಭಾಂಗಣದಲ್ಲಿ ದಿನಾಂಕ ೦೫-೦೬-೨೦೧೫ರಂದು ಲೋಕಾರ್ಪಣೆ ಮಾಡಲಾಯಿತು... ಬೆಂಗಳೂರಿನ ಬಂಜಾರ ಅಕಾಡೆಮಿಯ ಸಂಸ್ಥಾಪಕರಾದ ಡಾ॥ ಅಲಿ ಖ್ವಾಜಾ ಅವರು ಕೃತಿಯ ಲೋಕಾರ್ಪಣೆ ಮಾಡಿದರು. ಸಮಾರಂಭದ ಅಧ್ಯಕ್ಷತೆಯನ್ನು ಖ್ಯಾತ ಮನೋವೈದ್ಯರಾದ ಡಾ॥ ಸಿ. ಆರ್. ಚಂದ್ರಶೇಖರ್ ವಹಿಸಿದ್ದರು. ಖ್ಯಾತ ಪತ್ರಕರ್ತೆ ಡಾ॥ ಆರ್. ಪೂರ್ಣಿಮಾ ಅವರು ವಿಶೇಷ ಅತಿಥಿಯಾಗಿದ್ದರು. ವೇದಿಕೆಯಲ್ಲಿ ನವಕರ್ನಾಟಕ ಪ್ರಕಾಶನದ ವ್ಯವಸ್ಥಾಪಕ ನಿರ್ದೇಶಕ ಶ್ರೀ ಆರ್. ಎಸ್. ರಾಜಾರಾಮ್, ಡಾ॥ ಪದ್ಮಿನಿ ಪ್ರಸಾದ್, ಡಾ॥ ಸಿ. ಆರ್. ಚಂದ್ರಶೇಖರ್, ಡಾ॥ ಅಲಿ ಖ್ವಾಜಾ, ಡಾ॥ ಆರ್. ಪೂರ್ಣಿಮಾ ಉಪಸ್ಥಿತರಿದ್ದರು.







# ನಿಸರ್ಗ ಸಿರಿ ಸಿದ್ದಣ್ಣ



ಕಲಬುರಗಿ ಕಲಾವಿದ ಸಿದ್ದಣ್ಣ ಎಸ್.ಮರಗೋಳ ನಿಸರ್ಗ ಸಿರಿಯ ಸಿದ್ದಣ್ಣ ಎಂದು ಬಿಂಬಿತರಾಗಿದ್ದಾರೆ. ಕಲಬುರಗಿ ಜಿಲ್ಲೆ ಚಿತ್ತಾಪುರ ತಾಲೂಕಿನ ಸಿದ್ದಣ್ಣ ಗ್ರಾಮೀಣ ಪ್ರದೇಶದ ಅಪ್ಪಟ ಕಲಾವಿದ. ಚಿತ್ರಕಲಾ ಶಿಕ್ಷಕರಾಗಿ, ಭಾವಚಿತ್ರ ಸಂಯೋಜನೆ, ನಿಸರ್ಗಭರಿತ ಚಿತ್ರಕಲೆಯನ್ನು ಚಿತ್ರಿಸುವ ಅನುಭವವನ್ನು ಪಡೆದಿದ್ದಾರೆ. ರಾಷ್ಟ್ರ, ರಾಜ್ಯಮಟ್ಟದ ಕಲಾ ಪ್ರದರ್ಶನದಲ್ಲಿ ಸಿದ್ದಣ್ಣನವರ ಕಲಾಕೃತಿಗಳು ಆಯ್ಕೆಯಾಗಿವೆ. ವಿದ್ಯಾರ್ಥಿದೆಸೆಯಿಂದಲೇ ನಿಸರ್ಗ ಚಿತ್ರ ಮತ್ತು ಭಾವಚಿತ್ರವನ್ನು ರಚಿಸುವಲ್ಲಿ ಸಿದ್ದಣ್ಣ ಸಿದ್ಧಹಸ್ತರು. ಜಲವರ್ಣ ಮತ್ತು ತೈಲವರ್ಣ ಎರಡರಲ್ಲೂ ಕಲಾಕೃತಿಗಳನ್ನು ರಚಿಸಿದ ಕೀರ್ತಿ ಇವರದು. ಬಿಎಫ್‌ಎ (ಪೇಂಟಿಂಗ್) ಪದವಿ ಪಡೆದ ಸಿದ್ದಣ್ಣ ಕರ್ನಾಟಕ ಲಲಿತಕಲಾ ಅಕಾಡೆಮಿ ಪ್ರಶಸ್ತಿಗೆ ಪಾತ್ರರು. 1997ರಲ್ಲಿ ಚೆನ್ನೈನಲ್ಲಿ ನಡೆದ ಲಲಿತಕಲಾ ಅಕಾಡೆಮಿಯ ಗ್ರಾಫಿಕ್ ಕಲಾಶಿಬಿರ, 1998ರಲ್ಲಿ ಬೆಂಗಳೂರಿನಲ್ಲಿ ನಡೆದ ಕರ್ನಾಟಕ ಚಿತ್ರಕಲಾ ಪರಿಷತ್‌ನ ನಿಸರ್ಗ ಚಿತ್ರಕಲಾ ಶಿಬಿರ, ಹಂಪಿಯಲ್ಲಿ ನಡೆದ ಚಿತ್ರಕಲಾ ಶಿಬಿರ, ಕಲಬುರಗಿಯಲ್ಲಿ ನಡೆದ ಅಲೂಮಿನ್ ಆರ್ಟ್ ಶಿಬಿರ ಹೀಗೆ ಅನೇಕ ಕಲಾ ಶಿಬಿರಗಳಲ್ಲಿ ಭಾಗವಹಿಸಿ ಚಿತ್ರಾಸಕ್ತರ ಮೆಚ್ಚುಗೆಗೆ ಪಾತ್ರರಾಗಿದ್ದಾರೆ.

**ಸಂಗಮನಾಥ ರೇವತಗಾಂವ, 'ಕೃತಿಲೇಖ', ಪ್ಲಾಟ್ ನಂ.57/6, ಬಿದ್ದಾಪುರ ಕಾಲೋನಿ, ಕಲಬುರಗಿ–585103.**












Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bengaluru- 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bengaluru - 560 001, Editor : Dr. Siddanagouda Patil

**HOSATHU** Kannada Monthly / JULY 2015 / ₹ 15 (No. of Pages 64)
RNI Regd. KARKAN / 1999 / 614. Karnataka Regd. KARN/BGE/07/2015-17
Licenced to post without prepayment. WPP No.14.
Posted at BENGALURU PSO, MYSORE ROAD, BENGALURU-560 026 on the 28th of every month.